ಬಾಳಬೆಳಕು ಸಾಹಿತ್ಯಮಾಲೆ— ಕಿರಣ ೧೭

# ಸಮಗ್ರ ಸಾಧನ

## (ದ್ವಿತೀಯ ಭಾಗ)

ಲೇಖಕರು:
ಶ್ರೀ ಮೂರ್ತಿ

ಪ್ರಕಾಶಕರು:
ಅನಾಥ ಸೇವಾಶ್ರಮ
ಮಲ್ಲಾಡಿಹಳ್ಳಿ ಪೋಸ್ಟ್, ಹೊಳಲ್ಕೆರೆ ತಾಲ್ಲೂಕು

# ಮುನ್ನುಡಿ

ಪ್ರಸಿದ್ಧ ಮಲ್ಲಾಡಿಹಳ್ಳಿ 'ಅನಾಥ ಸೇವಾಶ್ರಮ'ದ ಸಂಸ್ಥಾಪಕರಾದ ಪರಮ ಮಿತ್ರ ಶ್ರೀವರ್ಮಾ ಬಿ. ರಾಘವೇಂದ್ರರಾಯರ ಪ್ರೇಮವು ಮೊದಲು 'ದೇವರು ಯಾರು?' ಎಂಬ ಕೃತಿಯು ರಚನೆಗೆ ಕಾರಣವಾಯಿತು. ದೇವರ ಸ್ವರೂಪ ವಿಚಾರವು ಯಾವ ಬಗೆಯಿಂದಾದರೂ ಸಿದ್ಧಾಂತ ವಿಚಾರವೇ ಆದುದರಿಂದ ಸಾಧ್ಯವಾದ ಸಿದ್ಧಾಂತಕ್ಕೆ ಸಾಧನಾಪೇಕ್ಷೆಯು ಸ್ವಾಭಾವಿಕವಿರುವಂತೆ ಶ್ರೀ ರಾಘವೇಂದ್ರರಾಯರ ಪ್ರೀತಿಯ ಒತ್ತಾಯದಿಂದ ಈಗ ಈ 'ಸಮಗ್ರ ಸಾಧನ' ವೂ ಬೆಳಕಿಗೆ ಬರಬೇಕಾಯಿತು.

ಮೂರು ವರ್ಷಗಳ ಹಿಂದೆ ಬ್ರಹ್ಮೀಭೂತರಾದ ಪೂಜ್ಯ ಗುರುಬಂಧು ಶ್ರೀ ಶಂಕರಲಿಂಗ ಭಗವಾನರೂ ಶ್ರೀ ರಾಘವೇಂದ್ರರಾಯರ ಅಪೇಕ್ಷೆಗೆ ಅನುಮೋದಕರೂ ಲೇಖಕನಿಗೆ ಪ್ರಚೋದಕರೂ ಆದರೆಂಬುದನ್ನು ಕೃತಜ್ಞತೆಯಿಂದ ನೆನೆಯಬೇಕಾಗಿದೆ. ಶ್ರೀ ರಾಘವೇಂದ್ರರಾಯರೂ ಮಲ್ಲಾಡಿಹಳ್ಳಿಯಲ್ಲಿ ಆಶ್ರಮ ಸ್ಥಾಪನೆ ಮಾಡುವುದಕ್ಕೆ ಅಂತರಂಗದ ಕಾರಣವಾದುದು ಈ ನುಲೇನೂರು ಗುರುಕ್ಷೇತ್ರದ ಹಾಗೂ ಶ್ರೀ ಭಗವಾನರ ಮತ್ತು ಗುರುಬಂಧುಗಳ ಪವಿತ್ರ ಪ್ರೇಮವೇ ಆಗಿದೆ. ಆದ್ದರಿಂದ ಈ 'ಸಮಗ್ರ ಸಾಧನ'ದ ಉದಯಕ್ಕೆ ಶ್ರೀ ದತ್ತನ ಪ್ರೇರಣೆಯೂ, ಪೂಜ್ಯ ಭಗವಾನರ ಪ್ರಚೋದನೆಯೂ. ಪರಮ ಮಿತ್ರ ಶ್ರೀ ರಾಘವೇಂದ್ರರಾಯರ ಪ್ರೇಮವೂ ಕಾರಣವಾಗಿದೆ.

ಸಮಗ್ರವೆಂದರೆ ಸಂಪೂರ್ಣ, ಸಮಸ್ತ, ಸಕಲ, ಅನೂನ, ನಿಶ್ಶೇಷ........ ಎಂದಾಗುತ್ತದೆ. ಸಾಧನದ ಹೊರಮೈಯಾದ ಸದಾಚಾರರೂಪ ಧರ್ಮವೂ ಒಳಮೈಯಾದ ಸದ್ವಿಚಾರಜ್ಞಾನರೂಪ ಬ್ರಹ್ಮವೂ ಮತ್ತು ಸಹಾಯಕವಾದ ಮಿಕ್ಕ ಯೋಗವಿಚಾರಗಳೂ ಈ ಗ್ರಂಥದಲ್ಲಿ ಬಂದಿರುವುದರಿಂದ ಇದನ್ನು 'ಸಮಗ್ರ ಸಾಧನ' ವೆಂದು ಕರೆದಿದೆ. ಇದು ಸಮಗ್ರವೆನಿಸಿದರೂ ಸೂಚಕವೂ ಸಂಕ್ಷಿಪ್ತವೂ ಮಾತ್ರ ಆಗಿದೆ. ಧರ್ಮಸಾಧನೆಯಿಂದ ಅಂತಃಕರಣ ಶುದ್ಧಿಯೂ ವಿಕಾಸವೂ ಆಗುವುದರಿಂದಲೂ ಬ್ರಹ್ಮಸಾಧನೆಯಿಂದ ಜ್ಞಾನಸಿದ್ಧಿಯೂ

ಪ್ರಕಾಶವೂ ಆಗುವುದರಿಂದಲೂ ಧರ್ಮಸಾಧನೆಯಲ್ಲಿ ಪ್ರತಿಯೊಂದು ಅಧ್ಯಾಯ ವನ್ನೂ ವಿಕಾಸವೆಂದೂ, ಬ್ರಹ್ಮಸಾಧನೆಯಲ್ಲಿ ಪ್ರತಿಯೊಂದು ಪ್ರಕರಣವನ್ನೂ ಪ್ರಕಾಶವೆಂದೂ ಕರೆದಿದೆ. ಈ ಪೂರ್ಣಗ್ರಂಥವನ್ನು ಒಂದೇ ಪುಸ್ತಕರೂಪದಲ್ಲಿ ಪ್ರಕಟಿಸುವುದಕ್ಕೆ ಗ್ರಂಥವು ದೊಡ್ಡದಾಗುವುದರಿಂದ ಪ್ರಕಾಶಕರು, ಅನುಕೂಲ ಕ್ಕಾಗಿ ಇದನ್ನು ಎರಡು ಭಾಗಗಳಾಗಿ ಅಥವಾ ಪುಸ್ತಕಗಳಾಗಿ ಮಾಡಿದ್ದಾರೆ. ನ್ಯಾಯವಾಗಿ ಈ ಗ್ರಂಥದಲ್ಲಿರುವುದು 'ಧರ್ಮ' ಮತ್ತು 'ಬ್ರಹ್ಮ' ಎಂಬ ಎರಡು ಭಾಗಗಳು.

ಸುತ್ತಲಿರುವ ಉತ್ತಮ ಕುಸುಮಗಳ ಮಕರಂದದಿಂದ ಜೇನುಹುಳುವು ಅಮೃತಸದೃಶವಾದ ಜೇನುತುಪ್ಪವನ್ನು ಮಾಡುವಂತೆ ಲೇಖಕನು ತನಗ ಲಭ್ಯ ವಾದ ಧಾರ್ಮಿಕವಾಙ್ಮಯಸಾಧನಗಳಲ್ಲಿ ಸಾರವನ್ನು ಸಂಗ್ರಹಿಸಿ ತನ್ನ ಅನುಭವ ಪರಿಪಾಕದ ರುಚಿ–ಗುಣ–ಸತ್ವಗಳನ್ನು ತುಂಬಿ ಈ ಕೃತಿಯನ್ನು ರಚಿಸಿರುವುದ ರಿಂದ ಅವನು ಪಡೆದಿರುವ ಸಹಾಯಗಳಿಗೆಲ್ಲಕ್ಕೂ ಕೃತಜ್ಞನಾಗಿದ್ದಾನೆ.

ಅತಿಶಯ ಶ್ರದ್ಧೆಯನ್ನೂ ಶ್ರಮವನ್ನೂ ವಹಿಸಿ ಮೊದಲಿನಿಂದ ಕೊನೆಯ ವರೆಗೂ ಮುದ್ರಣ–ಶುದ್ಧೀಕರಣದ ಹೊಣೆಯನ್ನು ಹೊತ್ತು ಯಶಸ್ವಿಯಾಗಿ ನಿರ್ವಹಿಸಿರುವ ಮಲ್ಲಾಡಿಹಳ್ಳಿ ಅನಾಥ ಸೇವಾಶ್ರಮದ ಪ್ರೌಢವಿದ್ಯಾ ಶಾಲೆಯ ಅಧ್ಯಾಪಕರಾದ ಶ್ರೀಮಾನ್ ಪಿ. ಸಿಂಗಪೆರುಮಾಳ್, ಬಿ.ಎ. (ಆನರ್ಸ್) ರವರಿಗೂ ಆಶ್ರಮದ ಸರ್ವೋದಯ ಮುದ್ರಣಾಲಯದ ಅಚ್ಚುಕೂಟದವರಿಗೂ ಗ್ರಂಥಮುದ್ರಣಕ್ಕೆ ಸಹಾಯಮಾಡಿರುವ ಬೆಂಗಳೂರು ಶ್ರೀಮಂತವ್ಯಾಪಾರಿ ಗಳೂ ಗುರುಭಕ್ತರೂ ಆದ ಶ್ರೀಮಾನ್ ಲಕ್ಷ್ಮಣಸಾ ಈಶ್ವರಸಾ ಖೋಡೆ ರವರಿಗೂ ಭಗವಂತನು ಪ್ರೇಯಸ್ಸನ್ನೂ ಶ್ರೇಯಸ್ಸನ್ನೂ ದಯಪಾಲಿಸಲೆಂದು ಪ್ರಾರ್ಥನೆ.

ಮುಶೇನೂರು
(ಹೊಳಲ್ಕೆರೆ ತಾಲ್ಲೂಕು)

ಶ್ರೀ ಮೂರ್ತಿ,
ದತ್ತಾಶ್ರಮ.

# ಪ್ರಕಾಶಕರ ಬಿನ್ನಹ

ಪ್ರಿಯ ಬಂಧುಗಳೇ,

'ಸಮಗ್ರ ಸಾಧನ'ದ ಮೊದಲನೆಯ ಭಾಗವು ಪ್ರಕಟವಾದ ಈ ಅತ್ಯಲ್ಪ ಕಾಲದಲ್ಲಿಯೇ ಈ ದ್ವಿತೀಯ ಭಾಗವನ್ನೂ ತಮ್ಮ ಪದರಿನಲ್ಲಿ ಸಮರ್ಪಿಸಲು ನಾವು ಅತ್ಯಾನಂದಪಡುತ್ತೇವೆ. ಆಧ್ಯಾತ್ಮಿಕ ವಿಚಾರವಾಗಿ ಬರೆದು ತೀರಿಸಲು, ಹೇಳಿ ಮುಗಿಸಲು ಸಾಧ್ಯವೇ ಇಲ್ಲ. ಈ ಕಾರ್ಯದಲ್ಲಿ ಬ್ರಹ್ಮನ ಆಯುಷ್ಯ ವಿದ್ದರೂ, ಕುಬೇರನ ಸಂಪತ್ತಿದ್ದರೂ ಮತ್ತೂ ಕಡಿಮೆಯೇ. ಆದರೆ ಮೂಲ ಸೂತ್ರವನ್ನು, ಪರಮ ಸತ್ಯವನ್ನು, ತತ್ವವನ್ನು ಅನುಷ್ಠಾನದಲ್ಲಿ ತಂದು ಸಾಧಿಸಿ ದಾಗಲೇ ಮಾನವನು ಸೌಖ್ಯವನ್ನೂ ಚಿರಶಾಂತಿಯನ್ನೂ ಕಾಣಬಹುದು. ಈ ನಿಟ್ಟಿನಲ್ಲಿ ಈ ಗ್ರಂಥದಿಂದ ಸಾಧಕನಿಗೆ ಉಪಯೋಗವು ದೊರೆತರೆ ನಾವು ಧನ್ಯರು. ಈ ಹೊತ್ತಿಗೆಯ ಲೇಖನ, ಪ್ರಕಟನ ಕಾರ್ಯದಲ್ಲಿ ನೆರವಾದ ಎಲ್ಲ ಬಂಧುಗಳಿಗೂ ಅನಂತ ವಂದನೆಗಳು.

— **ಪ್ರಕಾಶಕರು.**

# ವಿಷಯಾನುಕ್ರಮಣಿಕೆ

॥ ಓಂ ತತ್ಸತ್ ॥

# ತೃತೀಯ ಪ್ರಕಾಶ

# ಕ್ರಿಯಾಯೋಗ

ಪ್ರತಿಯೊಬ್ಬ ಮನುಷ್ಯನಲ್ಲಿಯೂ ಇರುವ ಮೇಧಾ (ಮಸ್ತಕ), ಹೃದಯ, ಹಸ್ತಗಳಿಗೆ ಸಂಬಂಧಪಟ್ಟ ಜ್ಞಾನ-ಇಚ್ಛಾ-ಕ್ರಿಯಾಶಕ್ತಿಗಳಲ್ಲಿ ಜ್ಞಾನಬಲದಿಂದ ಹೇಗೆ ಪರಮಾರ್ಥ (ಬ್ರಹ್ಮ) ಸಾಧನೆ ಮಾಡಬಹುದೆಂಬುದನ್ನು ಇದುವರೆಗೆ ಹಿಂದಿನ ಪ್ರಕಾಶಗಳಲ್ಲಿ ವಿಚಾರಮಾಡಿದೆವು. ಈಗ ಅಧ್ಯಾತ್ಮಸಾಧನೆಗೆ ಚಿತ್ತಶುದ್ಧಿಗಾಗಿ ಕ್ರಿಯಾಶಕ್ತಿಯನ್ನು ಹೇಗೆ ಉಪಯೋಗಮಾಡುವುದೆಂಬುದನ್ನು ನೋಡೋಣ.

ಗೀತೆಯಲ್ಲಿ ಪರಮಾತ್ಮನು,

**ನಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥**

ಎಂದು ಹೇಳಿದ್ದಾನೆ. ಇದರಿಂದ "ಯಾವನೊಬ್ಬನೂ ಒಂದು ನಿಮಿಷವಾದರೂ ಏನೊಂದು ಕೆಲಸವನ್ನೂ ಮಾಡದೇ ಸುಮ್ಮನಿರುವುದು ಸಾಧ್ಯವೇ ಇಲ್ಲ; ಎಲ್ಲರೂ ಪ್ರಕೃತಿಯಿಂದ ಹುಟ್ಟಿದ ಗುಣಗಳಿಂದ ಅಸ್ವತಂತ್ರರಾಗಿ (ಇಚ್ಛೆಯಿಲ್ಲದಿದ್ದರೂ ಕೆಲಸಮಾಡಿಯೇ ಮಾಡುತ್ತಾರೆ" ಎಂದು ತಿಳಿಯುತ್ತದೆ.

ಒಂದು ದಿನ ಬ್ರಹ್ಮನಿಷ್ಠ ಮಹಾತ್ಮರೊಬ್ಬರು ತಮ್ಮ ಶ್ರೋತೃವೃಂದಕ್ಕೆ ಈ ಶ್ಲೋಕವನ್ನು ಹೇಳಿ ವ್ಯಾಖ್ಯಾನಮಾಡುತ್ತಿದ್ದಾರೆ. ಇದನ್ನು ಕೇಳುತ್ತಿದ್ದ ಭಕ್ತನೊಬ್ಬನು ವಿನಯದಿಂದ ಕೈಮುಗಿದು "ಸ್ವಾಮಿ, ಗುರುಗಳೇ! ಈ ಮಾತನ್ನು ನನ್ನ ಮನಸ್ಸೇಕೋ ಒಪ್ಪುವುದಿಲ್ಲ. ಒಂದು ನಿಮಿಷವಾದರೂ

ಸುಮ್ಮನಿರುವುದು ಏಕೆ ಸಾಧ್ಯವಿಲ್ಲ ? ನಾನು ಸಾಧ್ಯಮಾಡಿ ತೋರಿಸಲು ಅಪ್ಪಣೆ ಬೇಡುತ್ತೇನೆ " ಎಂದು ಒಂದು ಮೂಲೆಗೆ ಹೋಗಿ ಕೈಕಾಲುಗಳನ್ನೆಲ್ಲಾ ಮುದುರಿಕೊಂಡು ಕಣ್ಣುಮುಚ್ಚಿ ಮಿಸುಕಾಡದೇ ಕುಳಿತುಕೊಂಡನು. ಎಲ್ಲರ ದೃಷ್ಟಿಯೂ ಕುತೂಹಲದಿಂದ ಅವನ ಕಡೆಗೇ ಹರಿಯಿತು ಗುರುಗಳು ಮಂದ ಹಾಸದಿಂದ "ಅಯ್ಯಾ! ನೀನು ಕರ್ಮೇಂದ್ರಿಯಗಳನ್ನೆಲ್ಲಾ ಬಿಗಿಹಿಡಿದು ಮಿಸುಕಾಡದೇ ಕುಳಿತಿದ್ದರೂ ಉಸಿರಾಡುತ್ತಿದ್ದೀಯಲ್ಲ !" ಎಂದರು. ಆ ಶ್ರದ್ಧಾಳುವು ಪ್ರಯೋಗನಿಷ್ಠೆಯಿಂದ ಕೂಡಲೇ ಮೂಗಿನ ತುದಿಯನ್ನೂ ಗಪ್ಪನೆ ಒತ್ತಿಹಿಡಿದನು. ಎಲ್ಲರೂ ಅವನನ್ನೇ ಕಾತರದಿಂದ ನೋಡತೊಡಗಿದರು. ಗುರುಗಳು ಮುಗುಳುನಗೆಯಿಂದ ಮುಂದುವರಿದರು ; "ನೀನು ಬಲಾತ್ಕಾರ ದಿಂದ ಶ್ವಾಸೋಚ್ಛ್ವಾಸವನ್ನು ನಿಲ್ಲಿಸಿರುವುದೂ, ಕೈಕಾಲುಗಳನ್ನು ಬಿಗಿಹಿಡಿದಿರುವುದೂ ಒಂದು ಕೆಲಸವೇ ಆಗಿಲ್ಲವೇ ? ಸಹಜವಾಗಿ ಸುಮ್ಮನಿರುವುದಕ್ಕಿಂದ ಹೀಗೆ ಪ್ರಯತ್ನಪೂರ್ವಕವಾಗಿ ಸುಮ್ಮನಿರುವುದೆಂಬುದಕ್ಕೆ ಹೆಚ್ಚಿನ ಕ್ರಿಯಾಶಕ್ತಿಯೇ ಬೇಕಲ್ಲವೇ ? ಆದರೂ ನಿನ್ನ ಶರೀರದಲ್ಲಿರುವ ಶ್ವಾಸಕೋಶಾದಿ ಅವಯವಗಳ ಸಂಕೋಚನ-ವಿಕಾಸನ, ಹೃದಯಸ್ಫುರಣ, ರಕ್ತ ಸಂಚಲನ, ಆಹಾರಪಚನ, ನಖಶಿಖಾಂತ ರಸಪ್ರಸರಣ ಮೊದಲಾದ ಪವನ ಕ್ರಿಯೆಗಳನ್ನು ತಡೆಗಟ್ಟಬಲ್ಲೆಯ ? ಶ್ರೋತ್ರೇಂದ್ರಿಯದ ಶ್ರವಣಕರ್ಮವೂ ಅಂತಃಕರಣದ ಸಂಕಲ್ಪನ ಅಹಂಕರಣಾದಿ ಕರ್ಮಗಳೂ ನಡೆಯುತ್ತಲೇ ಇಲ್ಲವೇ ? ಇಷ್ಟೆಲ್ಲಾ ವ್ಯಾಪಾರಗಳು ನಿನ್ನಲ್ಲಿಯೇ ನಡೆಯುತ್ತಿರುವಾಗ ನಿಮಿಷವಾದರೂ ನೀನು ಸುಮ್ಮನಿರುವುದು ಸಾಧ್ಯವೇ ?

"ಇದು ಪ್ರಕೃತಿಜನ್ಯವಾದ ಸತ್ತ್ವಗುಣದ ಪ್ರಭಾವಕ್ಕೆ ಅಧೀನವಾಗಿ ನೀನು ಹೊಂದಿರುವ ಜಾಗ್ರದವಸ್ಥೆಯ ವಿಚಾರವಾಯಿತು. ಇನ್ನು ನಿನ್ನ ಗಾಢ ನಿದ್ರೆಯಲ್ಲಿ ಇಂದ್ರಿಯಗಳ ವ್ಯವಹಾರವಿಲ್ಲವಾದರೂ ಪ್ರಾಣಾದಿಗಳ ವ್ಯಾಪಾರವು ನಡೆದೇ ಇದೆ. ಇನ್ನು ಎಚ್ಚರದ ದೃಷ್ಟಿಯಿಂದ ನೋಡಿದಾಗ, ತಮೋಗುಣದ ಪ್ರಭಾವದಿಂದ ಅಂತಃಕರಣವು ಸರ್ವಕರ್ಮಗಳ ಬೀಜವಾದ ಅಜ್ಞಾನದಲ್ಲಿ ಲಯವಾಗಿ ಆನಂದಾನುಭವ ಮಾಡುತ್ತಿರುವಂತೆ ತೋರುವುದರಿಂದ ಸೂಕ್ಷ್ಮತಮವಾದ ಕಾರಣ-ಕರ್ಮವಿದೆಯೆನ್ನಬಹುದು. ಇನ್ನು ಸ್ವಪ್ನದಲ್ಲಿಯಂತೂ ರಜೋಗುಣದಿಂದ ಅಂತಃಕರಣದ ಚೆಲ್ಲಾಟವು ತಾನೇತಾನಾಗಿದೆ. ಆದ್ದರಿಂದ

ಕರ್ಮವಿಲಾಸವು ತುದಿಮೊದಲಿಲ್ಲದೇ ಎಡೆಬಿಡದೇ ನಡೆದಿರುವುದರಿಂದ ಭಗವದ್ವಾಕ್ಯದಲ್ಲಿ ತಪ್ಪೇನಿದೆ? ಇನ್ನು ಮೂರ್ಛಾನಂತರವೂ, ಮರಣಾನಂತರವೂ ಪೂರ್ವವಾಸನಾನುಗುಣವಾಗಿ ಕರ್ಮವೂ ಜನ್ಮವೂ ಉಂಟಾಗುವುದರಿಂದ ಮೂರ್ಛಾ-ಮರಣಗಳಲ್ಲಿ ಕೂಡ ಕರ್ಮ-ಬೀಜವು ಇದ್ದೇ ಇರುತ್ತದೆ.

"ಕೇಳು! ಇದು ಒಂದು ವ್ಯಷ್ಟಿಶರೀರದ ಮಾತಾಯಿತು. ಈಗ ಸಮಷ್ಟಿಯಾದ ವಿಶ್ವವನ್ನು ತೆಗೆದುಕೊಳ್ಳೋಣ. ಸೃಷ್ಟಿ ಹೇಗಾಯಿತು? ತೈತ್ತಿರೀಯದಲ್ಲಿ "**ಸೋಕಾಮಯತ ಬಹುಸ್ಯಾಂ ಪ್ರಜಾಯೇಯೇತಿ**" ಎಂದು ಹೇಳಿರುವಂತೆ ನಿರ್ಗುಣ ನಿಷ್ಪಂದವಾದ ಅದ್ವಿತೀಯ ಬ್ರಹ್ಮದಲ್ಲಿ ಸ್ವತಃ ತಾನೇ ಬಹುರೂಪಿಯಾಗಬೇಕೆಂಬ ಉಲ್ಲಾಸವುಂಟಾಗಿ ಕರ್ಮರೂಪವಾದ ಜಗತ್ತಾಯಿತು. ನಿಷ್ಕ್ರಿಯವಾದ ಬ್ರಹ್ಮದಲ್ಲಿ ಉಂಟಾದ ಸೃಷ್ಟಿಯೇ ಕರ್ಮರೂಪವಾದುದರಿಂದ ವಿಶ್ವದಲ್ಲಿ ಕರ್ಮದಿಂದ ಬಿಡುಗಡೆ ಹೊಂದಿರುವುದು ಯಾವುದೂ ಇಲ್ಲ. ಎಲ್ಲಾ ಬಗೆಯ ಸ್ಪಂದನ ಕಂಪನವೂ ಕರ್ಮವಾಗಿರುವುದರಿಂದ ಕರ್ಮದ ವ್ಯಾಪ್ತಿಯೂ ಪ್ರಭಾವವೂ ಅನಂತವೂ ಅಗಾಧವೂ ಆಗಿವೆ. ಪರಮಾತ್ಮನ ಸಾನ್ನಿಧ್ಯಮಾತ್ರದಿಂದ ತ್ರಿಗುಣಾತ್ಮಕವಾದ ಪ್ರಕೃತಿಯಿಂದ ಸಕಲ ಸೃಷ್ಟಿಯೂ ಆಗಿರುವುದರಿಂದ

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಸ್ಸ್ಯಾತ್ತ್ರಿಭಿರ್ಗುಣೈಃ ॥**

(ಗೀತಾ)

"ಈ ಲೋಕದಲ್ಲಿಯಾಗಲೀ, ದೇವಲೋಕದಲ್ಲಿಯಾಗಲೀ, ದೇವತೆಗಳಲ್ಲಾಗಲೀ ಈ ಮೂರು ಗುಣಗಳು (ತದನುಸಾರವಾದ ಕರ್ಮಗಳೂ) ಇಲ್ಲದ ವಸ್ತುವೇ ಇಲ್ಲ." ನಾವು ವಾಸಮಾಡುತ್ತಿರುವ ಭೂಮಿಯು ಅತಿಶಯ ವೇಗದಿಂದ ತಿರ್‍ರನೆ ತಿರುಗುತ್ತಿದೆ. ತನ್ನ ಅಕ್ಷದ ಸುತ್ತಲೂ ನಿಮಿಷಕ್ಕೆ 17½ ಮೈಲಿಯಂತೆ ಸುತ್ತುವುದಲ್ಲದೆ, ಸೂರ್ಯನ ಸುತ್ತಲೂ ತಿರುಗುತ್ತದೆ. ಇದಕ್ಕೆ 12 ಬಗೆಯ ಚಲನೆಗಳಿವೆಯೆಂದು ಖಗೋಳಶಾಸ್ತ್ರವು ಹೇಳುತ್ತದೆ. ಇವರಲ್ಲಿ ಒಂದು 'Parabolic velocity' ಎನ್ನುವುದು ಒಂದು ಸೆಕೆಂಡಿಗೆ 7 ಮೈಲಿಯಾಗುತ್ತದೆ. ಹೀಗೆ ಭೂಮಾತೆಯಲ್ಲಿಯೇ ಇಷ್ಟು ಕರ್ಮವಿದ್ದ ಮೇಲೆ ನಾವು ನಿಷ್ಕ್ರಿಯರಾಗುವುದು ಸಾಧ್ಯವೇ?

"ಇನ್ನು ಯೋಗೀಶ್ವರನ ಗಾಢವಾದ ನಿರ್ವಿಕಲ್ಪ ಸಮಾಧಿಯಲ್ಲಿಯೂ ಜ್ಞಾನಿಯ ಸಹಜನಿಷ್ಠೆಯಲ್ಲಿಯೂ ಮಾತ್ರ ನಿಷ್ಕ್ರಿಯವಾದ ಬ್ರಹ್ಮವೇ ಇರುವುದರಿಂದ ಕರ್ಮವಿಲ್ಲ.

"ವತ್ಸ! ನೀನು ಕರ್ಮರಹಿತನಾಗುವುದಕ್ಕೆ ದೇಹಾಭಿಮಾನದಿಂದ ಮಾಡುವ ಈ ಕ್ಷುದ್ರ ಪ್ರಯತ್ನವನ್ನು ಬಿಟ್ಟು ಬ್ರಹ್ಮನಿಷ್ಠನಾಗುವ ಮಹಾ ಪ್ರಯತ್ನವನ್ನು ಮಾಡು. ಆಗ ನಿನಗೆ, ಆತ್ಮವೆಂದೂ ಚಲಿಸುವುದಿಲ್ಲವೆಂದೂ ಅನಾತ್ಮವಾದ ಸಮಸ್ತವೂ ನಿರಂತರ ಸಂಚಲನೆಯಲ್ಲಿ ಇರುವುದರಿಂದ ಅವುಗಳ ಚಲನೆಯನ್ನು ಒಂದು ನಿಮಿಷವೂ ನಿಲ್ಲಿಸುವುದು ಸಾಧ್ಯವಿಲ್ಲವೆಂದೂ ಅನಾತ್ಮವನ್ನೇ ಆತ್ಮವೆಂದು ತಪ್ಪು ತಿಳಿದುದರ (ಅಧ್ಯಾಸದ) ಪ್ರಭಾವದಿಂದ ಎಲ್ಲಾ ಅನರ್ಥಗಳೂ ಒದಗಿವೆಯೆಂದೂ ನಿನಗೇ ತಿಳಿದು ಸಮಾಧಾನವಾಗುತ್ತದೆ. ಹೀಗೆ ಆತ್ಮನು ನಿಶ್ಚಲ(ನಿಷ್ಕ್ರಿಯ)ನೆಂಬ ನಿಶ್ಚಯಜ್ಞಾನವುಳ್ಳವನು ಬುದ್ಧೀಂದ್ರಿಯಾದಿಗಳಿಂದ ವ್ಯವಹರಿಸಿದರೂ ಪುಣ್ಯಪಾಪಗಳನ್ನು ಮಾಡಿ ಸುಖದುಃಖಗಳನ್ನು ಅನುಭವಿಸತಕ್ಕವನೆಂಬ ತಪ್ಪುತಿಳುವಳಿಕೆಗೆ ಒಳಗಾಗುವುದಿಲ್ಲ. ಈ ಮರ್ಮವನ್ನು ತಿಳಿದವನು ತಾನು ಸಾಧಕನೆಂದು ಭಾವಿಸಿದರೆ ತನ್ನ ಚಿತ್ತಶುದ್ಧಿಗಾಗಿಯೂ ತಾನು ಸಿದ್ಧನೆಂಬ ನಿಶ್ಚಯವಿದ್ದರೆ ಲೋಕಾನುಗ್ರಹಕ್ಕಾಗಿಯೂ ನಿಸ್ವಾರ್ಥಭಾವದಿಂದ ಕರ್ತವ್ಯಕರ್ಮವನ್ನು ಮಾಡಿ ಕೃತಕೃತ್ಯನಾಗುತ್ತಾನೆ." ಗೀತೆಯಲ್ಲಿ,

**ಕರ್ಮಣೋಹ್ಯಪಿ ಬೋದ್ಧವ್ಯಂ ಬೋದ್ಧವ್ಯಂಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥**

"ಕರ್ಮವೆಂದರೆ ಏನೆಂಬುದನ್ನು ತಿಳಿಯಬೇಕು. ವಿಕರ್ಮವನ್ನೂ ಅಕರ್ಮವನ್ನೂ ಕೂಡ ತಿಳಿಯಬೇಕು; ಕರ್ಮದ ಮರ್ಮವನ್ನು ತಿಳಿಯುವುದು ಕಠಿಣ" ಎಂದು ಹೇಳಿದೆ.

ದೇಹದಲ್ಲಿ ತನ್ನ ಇಚ್ಛೆಯಿಲ್ಲದೆ ನಡೆಯುವ ಆಹಾರ ಪಚನ ಮೊದಲಾದುವು ನೈಸರ್ಗಿಕ ಕ್ರಿಯೆಗಳಾದರೂ ಇಚ್ಛಾಪೂರ್ವಕ ಮಾಡುವ ಆಹಾರ ಸೇವನ ಮೊದಲಾದವುಗಳೇ ಕರ್ಮವೆನ್ನಿಸಿಕೊಳ್ಳುತ್ತವೆ. ಇಚ್ಛೆಯು ತನ್ನ ಹಿಂದೆ ಸಂಸ್ಕಾರವನ್ನೂ ಮುಂದೆ ಪ್ರಯೋಜನವನ್ನೂ ಅಪೇಕ್ಷಿಸುತ್ತದೆ.

ಅಹಂಕಾರ ಲತೆಯು ಇಚ್ಛೆಯೆಂಬ ಹೂವಿನಲ್ಲಿ ಪ್ರಯೋಜನ(ಫಲ)ವೆಂಬ ಹೀಚನ್ನು ಕಚ್ಚಿಕೊಂಡು ಬೆಳೆಯುತ್ತದೆ. **“ಪ್ರಯೋಜನಮನುದ್ದಿಶ್ಯ ನ ಮಂದೋಽಪಿ ಪ್ರವರ್ತತೇ”** ಪ್ರಯೋಜನಾಪೇಕ್ಷೆಯಿಲ್ಲದೇ ಮೂರ್ಖನೂ ಕೂಡ ಒಂದು ಕೆಲಸದಲ್ಲಿ ತೊಡಗುವುದಿಲ್ಲ. ಒಬ್ಬೊಬ್ಬರ ಪ್ರಯೋಜನವು ಒಂದೊಂದು ಬಗೆಯಾಗಿರಬಹುದು. ಒಬ್ಬನು ಧನವನ್ನು ಬಯಸಬಹುದು; ಒಬ್ಬನು ಅಧಿಕಾರವನ್ನೂ, ಮತ್ತೊಬ್ಬನು ಕೀರ್ತಿಯನ್ನೂ ಹೀಗೆ ಒಬ್ಬೊಬ್ಬರು ಒಂದೊಂದನ್ನು ಬೇರೆಬೇರೆಯೇ ಬಯಸಿದರೂ ಎಲ್ಲರ ತುಟ್ಟತುದಿಯ ಗುರಿಯೂ ಒಂದು ಸುಖವೇ ಆಗಿದೆ. ಸುಖವು ಬೇಕೆಂಬುದೂ ದುಃಖವು ಬೇಡೆಂಬುದೂ ಎಲ್ಲರಿಗೂ ಸಮಾನವಾದ ಕೊನೆಯ ಗುರಿಯಾಗಿದೆ.

ಸುಖವು ಬೇಕೆಂದು ಅದಕ್ಕೆ ಅನುಗುಣವಾದ ಕರ್ಮವನ್ನು ಮಾಡಿದರೆ ಸುಖದ ಜೊತೆಗೆ ದುಃಖವೂ ಬಿಡದೆ ಬೆನ್ನಟ್ಟಿ ಬರುತ್ತದೆ. ಸುಖದುಃಖಗಳಲ್ಲಿ ದುಃಖದ ಪ್ರಮಾಣವೇ ಹೆಚ್ಚಾಗಿದೆ. ಸುಖವನ್ನು ಬಿಟ್ಟು ಕೇವಲ ದುಃಖ ವೆಂಬುದೂ ದುಃಖವನ್ನು ಬಿಟ್ಟು ಕೇವಲ ಸುಖವೆಂಬುದೂ ಜಗತ್ತಿನಲ್ಲಿಯೇ ಇಲ್ಲ. ಸುಖದುಃಖಗಳಿಂದ ಹರ್ಷವಿಷಾದಗಳಿಗೆ ಒಳಗಾಗುತ್ತಿದ್ದರೆ ಜೀವನಿಗೆ ಸ್ವಾತಂತ್ರ್ಯವೂ ಇಲ್ಲ, ಮುಕ್ತಿಯೂ ಇಲ್ಲ, ನಿಜಾನಂದವೂ ಇಲ್ಲ.

ಕರ್ಮದಲ್ಲಿ ಶಾಸ್ತ್ರವಿಹಿತ ಕರ್ಮವು ಕರ್ಮವೆಂದೂ ಶಾಸ್ತ್ರವಿರುದ್ಧ ಕರ್ಮವು ವಿಕರ್ಮವೆಂದೂ, ಕರ್ಮಶೂನ್ಯತೆಯು ಅಕರ್ಮವೆಂದೂ ಮೂರು ಬಗೆ. ವಿಹಿತಕರ್ಮವು ಪುಣ್ಯವೆಂದೂ ಧರ್ಮವೆಂದೂ ನಿಷಿದ್ಧ ಕರ್ಮವು ಪಾಪವೆಂದೂ ಅಧರ್ಮವೆಂದೂ ಕರೆಯಲ್ಪಡುತ್ತವೆ. ತನ್ನ ಹಿತಕ್ಕೂ ಪರರ ಹಿತಕ್ಕೂ ಕಾರಣವಾಗಿರುವುದೇ ಪುಣ್ಯಕರ್ಮವು. ತನ್ನ ಪತನಕ್ಕೂ ಪರಹಿಂಸೆಗೂ ಕಾರಣವಾಗಿರುವುದೇ ಪಾಪಕರ್ಮವು. ಅಂದರೆ ತನ್ನ ಅಥವಾ ಅನ್ಯರ ದೈಹಿಕ, ಮಾನಸಿಕ, ಬೌದ್ಧಿಕ, ನೈತಿಕ, ಧಾರ್ಮಿಕ, ಆಧ್ಯಾತ್ಮಿಕಾದಿ ಶಕ್ತಿಗಳ ಅಭಿವೃದ್ಧಿಗೆ ಸಾಧಕವಾದ ಕರ್ಮವೇ ಪುಣ್ಯಕರ್ಮವೂ ಅದಕ್ಕೆ ವಿರುದ್ಧವಾದ ಕರ್ಮವೇ ಪಾಪಕರ್ಮವೂ ಆಗಿವೆ. ಪುಣ್ಯದಿಂದ ಸುಖವೂ ಪಾಪದಿಂದ ದುಃಖವೂ ಉಂಟಾಗುತ್ತವೆ. ಪುಣ್ಯದ ಜೊತೆಗೆ ಅಷ್ಟಿಷ್ಟು ಪಾಪವೂ, ಪಾಪದ ಜೊತೆಗೆ ಅಷ್ಟಿಷ್ಟು ಪುಣ್ಯವೂ ಸೇರಿಕೊಂಡಿರು ವುದು ಸ್ವಭಾವವೂ ಅನಿವಾರ್ಯವೂ ಆಗಿದೆ. ದೇವರಿಗೆ ಮಂಗಳಾರತಿ ಮಾಡು

ತ್ತೇವೆ – ಇದು ಪುಣ್ಯಕಾರ್ಯ. ಆದರೆ ಆ ದೀಪಕ್ಕೆ ಎಷ್ಟೋ ಹುಳುಗ
ಬಂದು ಬಿದ್ದು ಸುಟ್ಟುಹೋಗುತ್ತವೆ – ಇದು ಪಾಪ. ಪುಣ್ಯದ ಫಲ
ಬೇಕೆಂದರೆ ಪಾಪದ ಫಲವೂ ಬಂದು ಗಂಟುಬೀಳುತ್ತದೆ. ಆದರೆ ಕೆಲವು ಜ
ರನ್ನು ಕೊಂದಿರುವ ಒಬ್ಬ ಘಾತಕಿಯನ್ನು ರಾಜ್ಯಾಂಗವು ಕೊಂದರೆ
ಕೊಲೆಯೂ ಹಿಂಸೆಯೇ ಆದರೂ ಹಲವು ಜನರಿಗೆ ಉಪಕಾರವಾದುದರಿಂ
ಪುಣ್ಯವೇ ಆಗುತ್ತದೆ. ಕರ್ಮವು ಪುಣ್ಯ, ಪಾಪ, ಪುಣ್ಯಪಾಪ ಮಿಶ್ರವಾಗಿ
ವಂತೆ ಫಲವೂ ಸುಖ, ದುಃಖ, ಸುಖದುಃಖ ಮಿಶ್ರವಾಗಿದೆ.

ಹಾಗಾದರೆ, ಯಾವನೂ ಒಂದು ನಿಮಿಷವಾದರೂ ಕರ್ಮವನ್ನು ಬಿಡ
ವುದು ಸಾಧ್ಯವಲ್ಲವಾದ್ದರಿಂದಲೂ ಆ ಕರ್ಮವು ಪುಣ್ಯವೋ ಪಾಪವೋ ಆ
ಸುಖದುಃಖಗಳನ್ನು ತಂದೊಡ್ಡುವುದರಿಂದಲೂ ಜೀವನನಿರ್ವಹಣವು ಹೇಗಾ
ಬೇಕು ? ಕರ್ಮವು ಕರ್ಮಯೋಗವಾದರೆ ಮಾತ್ರ ಈ ಕಗ್ಗಂಟು ಬಿಚ್ಚುತ್ತದೆ
ಆದ್ದರಿಂದಲೇ ಗೀತಾಚಾರ್ಯನು "**ಯೋಗಃ ಕರ್ಮಸುಕೌಶಲಂ**" ಸುಖ
ದುಃಖದ ಹೊಯಿಲಿಗೆ ಸಿಕ್ಕದಂತೆ ಕರ್ಮದಲ್ಲಿ ಸಾಧಿಸಬೇಕಾದ ಜಾಣತನವೆ
**ಯೋಗವು** ಎಂದಿದ್ದಾನೆ. ಇಲ್ಲಿ ಯೋಗ ಶಬ್ದದ ಅರ್ಥವನ್ನು ಸ್ವಲ್ಪ ವಿಚಾ
ಮಾಡಬೇಕಾಗಿದೆ. ಬೇರೆ ಬೇರೆ ಶಾಸ್ತ್ರಗಳಲ್ಲಿ ಬೇರೆ ಬೇರೆ ಅರ್ಥಗಳಲ್ಲಿ ಯೋಗ
ಶಬ್ದವನ್ನು ಉಪಯೋಗಿಸಿದ್ದಾರೆ. 'ಯುಜ್' ಧಾತುವಿನಿಂದ ಯೋಗ
ಶಬ್ದವು ಹುಟ್ಟಿದೆ. ಇದಕ್ಕೆ ಅಮರದಲ್ಲಿ ಸನ್ನಹನ, ಉಪಾಯ, ಧ್ಯಾನ,
ಸಂಗತಿ ಮತ್ತು ಯುಕ್ತಿ ಎಂಬ ಐದರ್ಥಗಳನ್ನು ಕೊಟ್ಟಿದೆ. ಪಾತಂಜಲ
ಯೋಗದಲ್ಲಿ, ಯೋಗವೆಂದರೆ ಚಿತ್ತವೃತ್ತಿ ನಿರೋಧವು ; ಅಥವಾ ಸಮಾಧಿಯು.
ಗೀತೆಯಲ್ಲಿ ಭಗವಂತನು ಕರ್ಮಯೋಗ, ಭಕ್ತಿಯೋಗ, ರಾಜಯೋಗ, ಜ್ಞಾನ
ಯೋಗಗಳಿಗೆ ಸಮಾನವಾಗಿ ಅನ್ವಯಿಸುವಂತೆ "**ಸಮತ್ವಂ ಯೋಗ
ಉಚ್ಯತೇ**" ಸಮತ್ವವೇ ಯೋಗ ಎಂದು ಹೇಳಿದ್ದಾನೆ. ಕರ್ಮಯೋಗದಲ್ಲಿ
"**ಯೋಗಃ ಕರ್ಮಸುಕೌಶಲಂ**" ಎಂದು ಹೇಳಿದ್ದಾನೆ. ಈಗ ಅದನ್ನೇ
ವಿಚಾರಮಾಡೋಣ.

ಭಗವಂತನು ಗೀತೆಯಲ್ಲಿ ಬೋಧಿಸಿರುವ ಈ ಜಾಣತನವೇನೆಂದರೆ,

**ಕರ್ಮಣ್ಯಕರ್ಮ ಯಃಪಶ್ಯೇದಕರ್ಮಣಿ ಚ ಕರ್ಮ ಯಃ |**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ||**

" ದೇಹೇಂದ್ರಿಯಗಳಿಂದ ಮಾಡಲ್ಪಡುವ ಲೌಕಿಕ ವೈದಿಕವಾದ ಸರ್ವ ಚೇಷ್ಟೆಗಳಲ್ಲಿಯೂ ಯಾವ ಆತ್ಮಜ್ಞನಾದ ವಿದ್ವಾಂಸನು ಕರ್ಮವಲ್ಲದಿರುವಿಕೆಯನ್ನು ನೋಡುವನೋ ಹಾಗೆಯೇ, ದೇಹೇಂದ್ರಿಯ ವ್ಯಾಪಾರವಿಲ್ಲದಿರುವಿಕೆಯೆಂಬ ಅಕರ್ಮದಲ್ಲಿ ಕ್ರಿಯೆಯನ್ನೇ ಯಾವನು ನೋಡುತ್ತಾನೋ ಅವನೇ ಮನುಷ್ಯರಲ್ಲಿ ವಿವೇಕಿಯಾದ ಬ್ರಹ್ಮವೇತ್ತನೂ, ಬ್ರಹ್ಮನಿಷ್ಠನೂ, ಸರ್ವಜನ್ಮಗಳ ಪುಣ್ಯ ಪಾಪಗಳನ್ನೂ ನಾಶಮಾಡಿಕೊಂಡು ಮುಕ್ತನಾಗತಕ್ಕವನೂ ಆಗುತ್ತಾನೆ."

ಕರ್ಮದಲ್ಲಿ ಅಕರ್ಮವನ್ನು ನೋಡವುದು ಹೇಗೆ ? ಅಕರ್ಮವೆಂದರೆ ಕರ್ಮರಾಹಿತ್ಯ, ಕರ್ಮಶೂನ್ಯತಾ, ಕರ್ಮವಿಲ್ಲದಿರುವಿಕೆ. ಎಲ್ಲಾ ಕರ್ಮವನ್ನು ಮಾಡಿದರೂ ತಾನು ಯಾವ ಕರ್ಮವನ್ನೂ ಮಾಡಲಿಲ್ಲವೆಂಬುದು ಹೇಗೆ ? ಮತ್ತು ಯಾವ ಕರ್ಮವನ್ನು ಮಾಡದಿದ್ದರೂ ಎಲ್ಲಾ ಕರ್ಮವನ್ನೂ ಮಾಡಿದಂತೆಯೇ ಹೇಗೆ ? ಈ ಭಾವಗಳು ಪರಸ್ಪರ ಪ್ರತ್ಯಕ್ಷ ವಿರೋಧವಾಗಿ ತೋರುತ್ತವೆ. ಆದರೆ, ಕರ್ಮವು ಏತರಿಂದ ನಡೆಯುವುದೆಂಬುದನ್ನು ವಿಚಾರಿಸಿದರೆ ಇದರ ಗುಟ್ಟು ಗೊತ್ತಾಗುತ್ತದೆ. ಯಾವುದೊಂದು ಕರ್ಮವನ್ನು ಮಾಡಬೇಕಾದರೂ ಮೊದಲು ನಮ್ಮ ಮನಸ್ಸಿನಲ್ಲಿ ಅದರ ಇಚ್ಛೆಯು ಹುಟ್ಟುತ್ತದೆ. ಎರಡನೆಯವರ ಸಹಾಯ ಮೊದಲಾದವು ಅಗತ್ಯವಾದರೆ ಅದನ್ನೇ ಮಾತಿನಿಂದ ತಿಳಿಸುತ್ತೇವೆ ಮತ್ತು ಇಚ್ಛಿಸಿ ತಿಳಿಸಿದ್ದನ್ನೇ ದೇಹೇಂದ್ರಿಯಗಳಿಂದ ಮಾಡುತ್ತೇವೆ. ಹೀಗೆ ಯಾವುದೊಂದು ಕರ್ಮವನ್ನು ಮಾಡುವುದಕ್ಕಾದರೂ ಮನಸ್ಸು ಮಾತು ದೇಹಗಳೇ ಸಾಧನಗಳು. ಆದರೆ ಈ ಮೂರು ಸಾಧನಗಳೂ ತಾನಲ್ಲ. ಏಕೆಂದರೆ ನನ್ನ ಮನಸ್ಸು, ನನ್ನ ದೇಹ, ನನ್ನ ಮಾತು, ಎಂದು ಹೇಳುತ್ತೇವೆ. ನನ್ನ ವಸ್ತುವು ಯಾವುದಾದರೂ ನನ್ನಿಂದ ಬೇರೆಯೇ ಹೊರತು ನಾನೇ ಹೇಗಲ್ಲವೋ, ಹಾಗೆಯೇ ಆ ನನ್ನವೆಂಬ ಮನಸ್ಸು ಮಾತು ದೇಹಗಳೂ ನಾನಲ್ಲ. ಅಂದಮೇಲೆ, ನಾನಲ್ಲದ ತ್ರಿಕರಣಗಳು ಮಾಡಿದ ಕಾರ್ಯವನ್ನು ನಾನು ಮಾಡಿದ ಕಾರ್ಯವೆಂದರೆ ಹೇಗೆ ಒಪ್ಪೀತು ? ಆದ್ದರಿಂದ ಯಾವ ಕರ್ಮವನ್ನಾದರೂ ಮಾಡತಕ್ಕವು ತ್ರಿಕರಣಗಳೇ ಹೊರತು ತಾನಲ್ಲವೆಂಬುದು ಸಿದ್ಧವಾಗುತ್ತದೆ.

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿಮನ್ಯತೇ ॥** (ಗೀತಾ)

ಪ್ರಕೃತಿ ಗುಣಗಳ ಕಾರ್ಯಭೂತವಾದ ದೇಹೇಂದ್ರಿಯಾದಿಗಳಿಂದಲೇ ಸಪ ಕರ್ಮಗಳೂ ನಡೆಯುವುವು. ಅಲ್ಲದೆ ಆತ್ಮನಿಂದ ಯಾವುದೂ ನಡೆಯುವುದಿಲ್ಲ ಆದರೂ ದೇಹೇಂದ್ರಿಯಾದಿಗಳನ್ನೇ ತಾನೆಂದು ತಪ್ಪು ತಿಳಿದು ಮರುಳಾಗಿ ನೋಡುವವ ನಾನು, ಕೇಳುವವ ನಾನು, ಮುಟ್ಟುವವ, ಮೂಸುವವ, ಸ ಯುವವ, ಭಾವಿಸುವವ, ವಿಚಾರಿಸುವವ ನಾನು, ಕರ್ತನೂ ಭೋಕ್ತ್ರನೂ ನಾನು ಎಂದು ಉಪಾಧಿ ಸಂಬಂಧವಾದ ಅಭಿಮಾನದಿಂದ ಭಾವಿಸುತ್ತಾನೆ ದುಷ್ಟಾದುಷ್ಟ ಪ್ರಾರಬ್ಧವಶದಿಂದ ದೇಹೇಂದ್ರಿಯಗಳಿಂದ ಮಾಡಲ್ಪಟ್ಟ ಕರ್ಮ ಗಳಲ್ಲಿ ನಾನು ಪುಣ್ಯವನ್ನು ಮಾಡಿದೆನೆಂದು ಹಿಗ್ಗುತ್ತಲೂ ನಾನು ಪಾಪವನ್ನು ಮಾಡಿದೆನೆಂದು ಕುಗ್ಗುತ್ತಲೂ ಆತ್ಮಜ್ಞಾನವಿಲ್ಲದವನು ತೊಳಲುತ್ತಾನೆ.

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥**

(ಗೀತಾ

"ಗುಣಗಳಾದ ಕಣ್ಣು ಕಿವಿ ಮೊದಲಾದ ಜ್ಞಾನೇಂದ್ರಿಯಗಳ ನೋಡುವುದು ಕೇಳುವುದು ಮೊದಲಾದ ಕರ್ಮಗಳನ್ನೂ, ವಾಕ್ಪಾಣಿ ಮೊದಲಾದ ಕರ್ಮೇಂದ್ರಿ ಯಗಳ ಮಾತನಾಡುವುದು, ತೆಗೆದುಕೊಳ್ಳುವುದು ಮೊದಲಾದ ಕರ್ಮವನ್ನೂ, ಬುದ್ಧಿಯ ಅಹಂಕರಣ ಕರ್ಮವನ್ನೂ, ಮನಸ್ಸಿನ ಸಂಕಲ್ಪ ಕರ್ಮವನ್ನೂ ಮತ್ತು ಇವುಗಳಿಂದ ಬೇರೆಯಾದ ಆತ್ಮನು ಚೈತನ್ಯ ರೂಪದಿಂದ ಅಸಂಗನಾಗಿ ಕೂಟಸ್ಥ ಮಾತ್ರನಾಗಿರುವಿಕೆಯನ್ನೂ ಚೆನ್ನಾಗಿ ತಿಳಿದವನು, ಕಣ್ಣು ಮೊದಲಾದುವುಗಳು ರೂಪಾದಿಗಳಲ್ಲಿಯೂ, ವಾಗಾದಿಗಳು ವಚನಾದಿಗಳಲ್ಲಿಯೂ, ಬುದ್ಧಿಯು (ತಾನು ಮಾಡುವವನೆಂಬ) ಅಭಿಮಾನದಲ್ಲಿಯೂ ಪ್ರವರ್ತಿಸುತ್ತಿವೆಯೆಂದೂ ತಾನಾ ದರೋ ನೋಡುವವನೂ ಅಲ್ಲ, ಕೇಳುವವನೂ ಅಲ್ಲ, ಮಾಡುವವನೂ ಅಲ್ಲ ನುಡಿಯುವವನೂ ಅಲ್ಲ, ನಡೆಯುವವನೂ ಅಲ್ಲ. ಆದರೆ ಅಸಂಗನೂ, ಚೈತನ್ಯ ಸ್ವರೂಪಿಯೂ ಆದ ಕೂಟಸ್ಥ ರೂಪದಿಂದ ಸುಮ್ಮನಿರುವವನೆಂದೂ ನಿಶ್ಚಯ ಮಾಡಿ ಆ ಆ ಕರ್ಮಗಳಲ್ಲಿ (ನಾನು ನನ್ನದು ಎಂದು) ಅಭಿಮಾನಿಸುವುದಿಲ್ಲ."

ಅಭಿಮಾನಿಸುವುದಕ್ಕೆ ಸ್ವಭಾವವುಳ್ಳದ್ದಾಗಿ ಬುದ್ಧಿಯಲ್ಲಿ ಮೊದಲೇ ಅಹಂಕಾರವೃತ್ತಿಯಿದೆ. ಎಲ್ಲಾ ಕರಣಧರ್ಮಗಳಲ್ಲಿಯೂ 'ನಾನು', 'ನನ್ನದು

ಎಂದು ಅಭಿಮಾನಿಸುವುದೇ ಇದರ ಧರ್ಮ. ಮನಸ್ಸು ಸಂಕಲ್ಪಿಸಿದರೆ ನಾನು ಸಂಕಲ್ಪಿಸಿದೆ, ಚಿತ್ತವು ಚಿಂತನಮಾಡಿದರೆ ನಾನು ಚಿಂತಿಸಿದೆ, ಬುದ್ಧಿಯು ವಿಚಾರಿಸಿ ನಿಶ್ಚಯಿಸಿದರೆ ನಾನು ವಿಚಾರಿಸಿ ನಿಶ್ಚಯಿಸಿದೆ, ಕಿವಿಯು ಕೇಳಿದರೆ ನಾನು ಕೇಳಿದೆ ; ಹೀಗೆಯೇ ಸರ್ವಜ್ಞಾನೇಂದ್ರಿಯ ಕರ್ಮೇಂದ್ರಿಯ ಧರ್ಮ ಕರ್ಮಗಳಲ್ಲಿಯೂ ಅಹಂಕಾರವು ಅಭಿಮಾನಿಸುತ್ತದೆ. ಆದರೆ ಈ ಅಹಂ ಕಾರವೂ ಮಿಕ್ಕ ಎಲ್ಲವುಗಳಂತೆ ದೃಶ್ಯವಾಗಿರುವುದರಿಂದ ಜಡವಾಗಿದೆ. ಇದಕ್ಕೂ ಅಧಿಷ್ಠಾನವಾಗಿರುವ ಚೈತನ್ಯವೇ ಆತ್ಮ ಅಥವಾ ನಿಜವಾದ ತಾನು.

ಈ ಆತ್ಮಚೈತನ್ಯಕ್ಕೆ ಅಹಂಕಾರ ಬುದ್ಧ್ಯಾದಿಗಳಂತೆ ವಿಶೇಷರೂಪವಿಲ್ಲದ್ದ ರಿಂದ ನಿರ್ವಿಶೇಷವು, ಅಗೋಚರವು. ವಿಶೇಷ ಗುಣಧರ್ಮಗಳುಳ್ಳ ಅಹಂಕಾರ ಬುದ್ಧ್ಯಾದಿಗಳು ಆತ್ಮಚೈತನ್ಯದ ಚಿತ್‌ಪ್ರಭೆಯಿಂದ ಪ್ರಭಾಸ್ವಿತವಾಗಿ (ರಾಜನ ಅತ್ಯಂತ ಸಮೀಪನಾದ ಮುಖ್ಯಮಂತ್ರಿಯಂತೆ ಅಥವಾ ಲೋಹಚುಂಬಕಕ್ಕೆ (Magnet) ಹತ್ತಿಕೊಂಡಿರುವ ಕಬ್ಬಿಣದ ಮಳೆಯು ತಾನೇ ಚುಂಬಕ ದೋಪಾದಿಯಲ್ಲಿ ಇನ್ನೊಂದು ಮಳೆಯನ್ನು ಸೆಳೆಯುವಂತೆ) ತಾವೇ ಆತ್ಮನಂತೆ ತೋರುತ್ತವೆ ಅಥವಾ ನಟಿಸುತ್ತವೆ. ಆದರೆ ಶುದ್ಧ ಚೈತನ್ಯಸ್ವರೂಪಿಯಾದ ತನ್ನಲ್ಲಿ ಸ್ಪಂದನವೇ ಇಲ್ಲವಾದುದರಿಂದ ಚಲನರೂಪವಾದ ಕಾರಣವೂ, ಕರಣವೂ ಕರ್ಮವೂ ಯಾವುದೂ ಇಲ್ಲ. ತನ್ನಲ್ಲಿ ಯಾವುದೂ ಇಲ್ಲವಾದರೂ ಇವೆಲ್ಲಾ ಏನೇನೋ ಇದ್ದಂತೆ ತೋರುವುದೇ ಮಾಯೆಯಾಗಿದೆ. ಆದ್ದರಿಂದ ಕರ್ಮವನ್ನು ನಾನು ಮಾಡುತ್ತೇನೆಂಬುದೂ, ಅದರ ಫಲವನ್ನು ನಾನು ಅನು ಭವಿಸುತ್ತೇನೆಂಬುದೂ ಮಾಯಾಶಕ್ತಿಯ ಪ್ರಭಾವವೇ ಹೊರತು ನಿಜವಲ್ಲ.

ಮನವು ಸಂಶಯಪಡುವಾಗ ಚಿತ್ತದ ಚಿಂತನವೂ, ಬುದ್ಧಿಯ ವಿವೇಕವೂ ಇರುವುದಿಲ್ಲ. ಚಿತ್ತವು ಸ್ಮರಣೆಮಾಡುವಾಗ ಮನಸ್ಸಿನ ಸಂಕಲ್ಪ ವಿಕಲ್ಪಗಳೂ ಬುದ್ಧಿಯ ವಿಚಾರವೂ ಇರುವುದಿಲ್ಲ. ಹೀಗೆಯೇ ಬುದ್ಧಿವೃತ್ತಿಗಳಿರುವಾಗ ಚಿತ್ತಮನೋವೃತ್ತಿಗಳಿರುವುದಿಲ್ಲ. ಆದರೆ ಇವುಗಳಲ್ಲಿ ಅಹಂಕಾರದ ಮೂಲಕ ಹೊಳೆಯುವ ಆತ್ಮಚೈತನ್ಯದ ತಿಳಿವು ಮಾತ್ರ ಯಾವಾಗಲೂ ಇರುತ್ತದೆ. ಅಹಂಕಾರದ ಆಚೆಗಿದ್ದು ಬುದ್ಧ್ಯಾದಿಗಳನ್ನು ಬೆಳಗುತ್ತಿರುವ – ತನ್ನಿಂದ ತಾನೇ ಬೆಳಗುವ ಸ್ವಭಾವವುಳ್ಳ – ಆ ತಿಳಿವಿನಲ್ಲಿ ಯಾವ ಕ್ರಿಯೆಯೂ ಇಲ್ಲ. ಆ

ಕ್ರಿಯಾರಹಿತ ತಿಳಿವೇ ನಾವಾಗಿರುವುದರಿಂದ ಮಾಡುವವರೂ ಅನುಭವಿ ವವರೂ ನಾವಲ್ಲ.

ಹೇಗೆಂದರೆ, ಹರಿಯುವ ಜಲಝರಿಯ ತಳದಲ್ಲಿ ಬಂಗಾರ ಬಣ್ಣ ಬಲ್ಬಿನ ಮೂಲಕ ವಿದ್ಯುದ್ದೀಪವು ಬೆಳಗುತ್ತಿದ್ದರೆ ನೀರಿನಲ್ಲಿ ಏಳುವ ಒಂದೊಂ ಅಲೆಯಲ್ಲಿಯೂ, ಸುಳಿಯಲ್ಲಿಯೂ, ಗುಳ್ಳೆಯಲ್ಲಿಯೂ, ನೊರೆಯಲ್ಲಿಯ ಬಂಗಾರದ ಬಣ್ಣವೇ ಮಿಂಚುತ್ತದೆ. ಜಲದ ಎಲ್ಲಾ ವಿಕಾರಗಳಲ್ಲಿಯೂ ತುಂ ಬೆಳಗುವ ಈ ಬಂಗಾರ ಬಣ್ಣದಂತೆ ಅಂತಃಕರಣದ ಎಲ್ಲಾ ವ್ಯವಹಾ ಗಳಲ್ಲಿಯೂ ತುಂಬಿ ಬೆಳಗುವ ಅಹಂಕಾರವೃತ್ತಿಯಿದೆ. ಬಣ್ಣವು ಬಲ್ಬಿ ದಾದರೂ ಬೆಳಗುವುದು ಮಾತ್ರ ಹೇಗೆ ವಿದ್ಯುತ್ತೇ ಆಗಿದೆಯೋ ಹಾಗೆ, ತಿ ಯಾದ ತಿಳಿವು ಮಾತ್ರ ಆತ್ಮಚೈತನ್ಯವಾಗಿದೆ.

ಎಲ್ಲಾ ಅನರ್ಥಗಳಿಗೂ ಕಾರಣವಾದ ಅಜ್ಞಾನವೇ ಅಹಂಕಾರವಾಗಿದೆ ಅಥವಾ ಅಹಂಕಾರವೇ ಅಜ್ಞಾನರೂಪವಾಗಿದೆ. ಈ ಅಹಂಕಾರದ ಸ್ವರೂಪ ವೇನೆಂದು ವಿಚಾರಿಸುವುದಕ್ಕೆ ಹೊರಟರೆ, ಕತ್ತಲೆಯ ಸ್ವರೂಪವೇನೆಂದು ನೋಡುವುದಕ್ಕಾಗಿ ಬೆಳಕನ್ನು ತಂದಂತೆ ಅಹಂಕಾರ ಕತ್ತಲೆಯೇ ಹಾರಿ ಹೋಗುತ್ತದೆ.

ಅಹಂಕಾರದ ಸ್ವರೂಪವು ಎಷ್ಟು ವಿಲಕ್ಷಣವಾಗಿರುವುದೆಂಬುದನ್ನು ಒಂದು ದೃಷ್ಟಾಂತದಿಂದ ಮನಗಾಣಬಹುದು. ಒಂದು ವಿವಾಹ ಸಂದರ್ಭದಲ್ಲಿ ಅಪರಿಚಿತನೊಬ್ಬನು ತಾನು ವರನ ಕಡೆಯವನೆಂದು ನಟಿಸುತ್ತಾ ಕನ್ಯಾಪಕ್ಷ ದವರಲ್ಲಿ ಬಂದು ವಿಶೇಷವಾಗಿ ಆದರ ಗೌರವಗಳನ್ನು ಹೊಂದುತ್ತಾ ಇದ್ದನು. ಎಷ್ಟೆಷ್ಟು ಉಪಚಾರ ಮಾಡಿದರೂ ಸಂತುಷ್ಟನಾಗದ ಆ ವಿಲಕ್ಷಣ ಪುರುಷನ ಉಪಟಳವನ್ನು ಸಹಿಸಲಾರದೇ ಅವನು ಯಾರೆಂಬುದನ್ನೂ, ವರನಿಗೆ ಏನು ಸಂಬಂಧವೆಂಬುದನ್ನೂ ಕನ್ಯಾಪಕ್ಷದವರು ಕೆರಳಿ, ವಿಚಾರಿಸುವುದಕ್ಕೆ ತೊಡಗಿ ದೊಡನೆ ಆ ಹಿಂಸಕನು ಹಠಾತ್ತಾಗಿ ಅಂತರ್ಧಾನನಾದನು. ಶ್ರದ್ಧೆಯಿಂದ ಶೋಧಮಾಡುವಲ್ಲಿ ಹೆಣ್ಣಿನ ಕಡೆಯವನಲ್ಲದ ಆ ನವೀನ ಪುರುಷನು ಗಂಡಿನ ಕಡೆಯವನೂ ಆಗಿರಲಿಲ್ಲ. ದಿಕ್ಕುದೆಸೆಯಿಲ್ಲದ ಆ ಅನಿರ್ವಚನೀಯ ಪುರುಷ ನೊಬ್ಬನು ಜಗತ್ತಿನಲ್ಲಿ ಇದ್ದುದೇ ಸುಳ್ಳೆಂಬಂತಾಯಿತು. ಅಹಂಕಾರದ

ಗುಟ್ಟೊ ಹೀಗೆಯೇ. ಆತ್ಮನೋಪಾದಿಯಲ್ಲಿಯೇ ಪ್ರಕೃತಿ ಪಕ್ಷದಿಂದ ಆದರ ಹೊಂದುತ್ತಿರುವ **'ಮಹಾ ಶನಿ'**ಯಾದ ಅಹಂಕಾರವು ವಿಚಾರಮಾಡುವಲ್ಲಿ ಕೇವಲ ಚೈತನ್ಯವೂ ಅಲ್ಲ, ಕೇವಲ ಜಡವೂ ಅಲ್ಲ; ಅದ್ವಿತೀಯ ಬ್ರಹ್ಮದಲ್ಲಿ ಅದು ಇಲ್ಲವೇ ಇಲ್ಲವೆಂಬಂತಾಗುತ್ತದೆ. ಆದರೂ **'ಬ್ರಹ್ಮಾಹಂ'** ಎನ್ನುವಾಗ (ಚೈತನ್ಯದಲ್ಲಿಯೇ ಅಹಂಕಾರವು ಸಮರಸವಾಗಿ) ಆದರೂ **'ದೇಹೋಹಂ'** ಎನ್ನುವಾಗ (ಜಡದಲ್ಲಿ ಬೆರೆತು) ಜಡವಾಗಿಯೂ ತೋರುತ್ತದೆ.

"ನಾನು ಮಾಡುವವನು, ಅನುಭವಿಸುವವನು" ಎಂಬ ಸಂಸಾರ ಭಾವನೆಗೆ ತಾಯಿಬೇರಾದ ಅಹಂಕಾರವೇ ನಾಶವಾಗಿ ನಿಷ್ಕ್ರಿಯವಾದ ಚೈತನ್ಯವು ತಾನೇತಾನಾಗಿ ಬೆಳಗುವವನ ದೇಹೇಂದ್ರಿಯ ಮನಸ್ಸುಗಳಿಂದ ಯಾವ ಕರ್ಮವು ನಡೆದರೂ ಅದು ಅಕರ್ಮವೇ.

ಕರ್ಮಮಾಡುವುದಕ್ಕೆ ಸಾಧನವಾದ ಅವಯವವು ಬೇಕು. ಆತ್ಮನು ನಿರವಯವಿಯಾದುದರಿಂದ ಅಕರ್ಮಿ. ದೇಶಕಾಲಗಳಲ್ಲಿರುವ ಒಂದು ವಸ್ತುವು ಒಂದೆಡೆಯಿಂದ ಇನ್ನೊಂದೆಡೆಗೆ ಚಲಿಸಬಹುದು. ಆದರೆ ಎಲ್ಲೆಡೆಯಲ್ಲಿಯೂ ತುಂಬಿಕೊಂಡು ಎಲ್ಲವೂ ಆಗಿರುವ ಚೈತನ್ಯವು ಚಲಿಸುವುದೆಂತು? ನಿಷ್ಕ್ರಿಯನಾದ ಆತ್ಮನ ಸಾನ್ನಿಧ್ಯಮಾತ್ರದಿಂದ ಯಾವ ಕರ್ಮ ನಡೆದರೂ ಆತ್ಮನು ಅಕರ್ಮಿಯೇ.

ದೃಢವಾದ ಈ ತಿಳಿವಳಿಕೆಯಿಂದ ಕರ್ಮವನ್ನು ಮಾಡಿ ಕರ್ಮದಲ್ಲಿ ಅಕರ್ಮವನ್ನು ನೋಡಿದಾಗ ಮಾತ್ರ ಕರ್ಮವು ಕರ್ಮಯೋಗವಾಗುತ್ತದೆ. ಇದರಿಂದ ಪೂರ್ಣ ನಿರಭಿಮಾನಿಯೂ, ನಿಸ್ವಾರ್ಥಿಯೂ ಆಗಿ ಕರ್ಮವನ್ನು ಮಾಡುವವನೇ ಮಾನವರಲ್ಲಿ ಶ್ರೇಷ್ಠ ವಿವೇಕಿಯೆಂದೂ ಕೃತಕೃತ್ಯನೆಂದೂ ಅರ್ಥವಾಗುತ್ತದೆ.

ಇನ್ನು ಅಕರ್ಮದಲ್ಲಿ ಕರ್ಮವನ್ನು ನೋಡುವುದೆಂದರೆ ಅಜ್ಞಾನಿಗಳು ಮಾಡುವ ಕರ್ಮತ್ಯಾಗದಲ್ಲಿಯೂ ತ್ಯಾಗರೂಪ ಕರ್ಮವನ್ನೂ ಪುಣ್ಯಪಾಪಗಳನ್ನೂ ನೋಡುವುದು. ಅಕರ್ಮವೂ ಕರ್ಮವಾಗುವುದು ಹೇಗೆಂಬುದನ್ನು ಬಗೆಬಗೆಯ ದೃಷ್ಟಾಂತಗಳಿಂದ ಮನಗಾಣಬಹುದು

ಎರಡನೆಯ ಮಹಾಯುದ್ಧದಲ್ಲಿ ಹಿಟ್ಲರನು, ತನ್ನ ಮಿತ್ರಪಕ್ಷಕ್ಕಾಗಲೀ ಶತ್ರುಪಕ್ಷಕ್ಕಾಗಲೀ ಪ್ರಕಟವಾಗಿ ಸೇರದಿರುವ ತಟಸ್ಥ ರಾಷ್ಟ್ರಗಳನ್ನು ಪ್ರತ್ಯಕ್ಷ

ಶತ್ರುರಾಷ್ಟ್ರಗಳೆಂದೇ ಭಾವಿಸುವುದಾಗಿ ಘೋಷಿಸಿದನು. ಸ್ವಾರ್ಥಿಗಳಾದ ರಾಜರ ಅಕರ್ಮರೂಪವಾದ ತಾಟಸ್ಥ್ಯನೀತಿಯಲ್ಲಿ ಸ್ವೈರವೆಂಬ ಪಾಪಕರ್ಮವನ್ನು ಹಿಟ್ಲರನು ಶಂಕಿಸಿ ಆರೋಪಿಸಿದ ಗೂಢವನ್ನು ಇಲ್ಲಿ ತಿಳಿಯಬಹುದು.

ಇನ್ನೊಂದು ಬಗೆಯಲ್ಲಿ ಶ್ರೀರಾಮಚಂದ್ರನೊಡನೆ ಯುದ್ಧಕ್ಕೆ ಸಿದ್ಧನಾದ ದುರುಳ ರಾವಣನಿಗೆ ಸಹಾಯುವಾಡದೇ ಮೊದಲು ತಟಸ್ಥನಾಗಿ ಉಳಿದ ವಿಭೀಷಣನು ತನ್ನ ಅಕರ್ಮದಲ್ಲಿಯೂ ಪುಣ್ಯಫಲಕ್ಕೆ ಭಾಗಿಯೇ ಆದನು.

ದ್ರೌಪದೀ ವಸ್ತ್ರಾಪಹರಣದ ಸಮಯದಲ್ಲಿ ಅತಿರಥಮಹಾರಥರಾದ ಭೀಷ್ಮಾದಿಗಳು ದುಶ್ಶಾಸನನ ದೌರ್ಜನ್ಯವನ್ನು ನಿವಾರಿಸುವ ಸಾಮರ್ಥ್ಯವುಳ್ಳವರಾಗಿದ್ದರೂ ದುರ್ಯೋಧನನ ದಾಕ್ಷಿಣ್ಯಾದಿಗಳಿಂದ ಬದ್ಧರಾಗಿ ತಟಸ್ಥರಾದ್ದರಿಂದ ದೂಷಿತರಾದರು. ಇಲ್ಲಿ ಭೀಷ್ಮಾದಿಗಳ ಅಕರ್ಮದಲ್ಲಿಯೂ ಪಾಪಕರ್ಮವನ್ನು ಕಾಣಬಹುದು.

ಶ್ರೀಕೃಷ್ಣಪರಮಾತ್ಮನು ಚಕ್ರಪಾಣಿಯಾದರೂ ಕುರುಕ್ಷೇತ್ರ ಯುದ್ಧದಲ್ಲಿ ಚಕ್ರಧಾರಿಯಾಗಿ ಸ್ವತಃ ಯುದ್ಧಮಾಡಲಿಲ್ಲ. ಆದರೂ ವಿಶ್ವರೂಪ ದರ್ಶನ ಸಮಯದಲ್ಲಿ ಶ್ರೀಕೃಷ್ಣನು ಅರ್ಜುನನಿಗೆ,

" ಮಯೈವೈತೇ ನಿಹತಾಃ ಪೂರ್ವಮೇವ ।
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥

ಇವಕ್ಕೆ ಮುಂಚೆಯೇ (ಕಾಲಸ್ವರೂಪಿಯಾದ) ನನ್ನಿಂದಲೇ ಇವರೆಲ್ಲರೂ ಕೊಲ್ಲಲ್ಪಟ್ಟಿದ್ದಾರೆ; ಹೇ ಸವ್ಯಸಾಚಿ! ನೀನು ನೆಪಮಾತ್ರಕ್ಕೆ ಇರುವವನಾಗು " ಎನ್ನುತ್ತಾನೆ. ಇಲ್ಲಿ ಪರಮಾತ್ಮನ ಅಕರ್ಮದಲ್ಲಿಯೂ ಸಂಹಾರಾದಿಗಳ ಕರ್ಮವನ್ನು ನೋಡಬಹುದು. ಮತ್ತು ಶ್ರೀಕೃಷ್ಣನು " ಅರ್ಜುನ! ನೀನು ಯುದ್ಧಮಾಡಿ ಕೊಲ್ಲುವುದೆಲ್ಲಾ ನೆಪಮಾತ್ರಕ್ಕೆ, ಸುಮ್ಮನೆ, ಸುಳ್ಳು. ನೀನು ಯಾರನ್ನೂ ಕೊಲ್ಲತಕ್ಕವನಲ್ಲ, ನಾನೇ ಕೊಲ್ಲತಕ್ಕವನು " ಎನ್ನುವುದರಿಂದ ಅರ್ಜುನನ ಘೋರವಾದ ಯುದ್ಧಕರ್ಮದಲ್ಲಿಯೂ ಅಕರ್ಮವನ್ನು ಹೇಳಿದಂತಾಯಿತು.

ಹೀಗೆಯೇ ಜೀವನ್ಮುಕ್ತನು ಕೇವಲ ಆತ್ಮತೃಪ್ತನೂ, ಆತ್ಮಾರಾಮನೂ ಆಗಿ ಸರ್ವಕರ್ಮಗಳನ್ನೂ ತ್ಯಾಗಮಾಡಿದ್ದರೂ ಲೋಕದಲ್ಲಿ ಸಮಸ್ತ ಪುಣ್ಯ

ಕರ್ಮಗಳನ್ನೂ ಮಾಡಿರುವುದರ ಫಲವಾದ ಕೃತಕೃತ್ಯತೆಯು ಆನಂದವನ್ನು ಅವನಲ್ಲಿ ಕಾಣಬಹುದು.

ಕರ್ಮದಲ್ಲಿ ಅಕರ್ಮವನ್ನೂ ಅಕರ್ಮದಲ್ಲಿ ಕರ್ಮವನ್ನೂ ನೋಡುವುದರ ಗುಟ್ಟನ್ನು ಇನ್ನೊಂದು ಬಗೆಯಿಂದ ಸುಲಭವಾಗಿ ತಿಳಿಯಬಹುದು.

ನಾವು ಒಂದು ದಿನ ದೂರದಿಂದ ರೈಲಿನಲ್ಲಿ ಕೂತು ಒಂದು ದೊಡ್ಡ ಜಂಕ್ಷನ್ ಸ್ಟೇಷನ್ನಿಗೆ ಬಂದಿದ್ದೇವೆ. ನಮ್ಮ ಟ್ರೈನು ಪ್ಲ್ಯಾಟ್‌ಫಾರಂಗೆ ಹತ್ತಿರವಾಗಿ ಮೊದಲನೇ ಲೈನಿನಲ್ಲಿ ದಕ್ಷಿಣ-ಮುಖವಾಗಿ ನಿಂತಿದೆ. ನಾವು ಕೂತಿರುವ ಗಾಡಿಯ ಕಿಟಕಿಯ ಬಳಿಯಲ್ಲಿಯೇ ಪ್ಲ್ಯಾಟ್‌ಫಾರಂನ ಮೇಲೆ ಒಂದು ವಿದ್ಯುದ್ದೀಪದ ಕಂಬವಿದೆ. ಆ ಕಂಬದ ಹತ್ತಿರ ನಿಂತಿರುವ ನಮ್ಮ ಮಿತ್ರನೊಬ್ಬನು ಗಾಡಿಯೊಳಗಿರುವ ನಮ್ಮೊಡನೆ ಮಾತನಾಡುತ್ತಿದ್ದಾನೆ. ಅಷ್ಟರಲ್ಲಿ ದಕ್ಷಿಣ ದಿಕ್ಕಿನಿಂದ ಒಂದು ಟ್ರೈನು ವೇಗವಾಗಿ ಎರಡನೇ ಲೈನಿನಲ್ಲಿ ಬರುವ ರಭಸವಾದ ಶಬ್ದವನ್ನು ಕೇಳಿ ಕಿಟಕಿಯ ಮೂಲಕ ಆ ಕಡೆ ನೋಡುತ್ತೇವೆ. ಧಡ! ಧಡ! ಓಡುತ್ತಿರುವ ಆ ಟ್ರೈನಿನ ಒಂದೊಂದು ಗಾಡಿಯನ್ನು ನೋಡುತ್ತ ನೋಡುತ್ತ ಹಠಾತ್ತನೆ ನಮ್ಮ ಗಾಡಿಯೇ ದಕ್ಷಿಣಕ್ಕೆ ಭರದಿಂದ ಓಡುತ್ತಿರುವಂತೆಯೂ ಓಡುತ್ತಿರವ ಟ್ರೈನೇ ನಿಂತಿರುವಂತೆಯೂ ಕಂಡು, ಆತುರದಿಂದ ನಮ್ಮ ಮಿತ್ರನಿಗೆ ವಿಯೋಗದ ವಂದನೆಯನ್ನು ಹೇಳವುದಕ್ಕೆ ಹಿಂದಕ್ಕೆ ತಿರುಗಿದೊಡನೆ ಆಶ್ಚರ್ಯ! ನಮ್ಮ ಮಿತ್ರನು ಸ್ಥಾಣುವಾದ ಕಂಬಕ್ಕೊರಗಿ ನಿಂತೇ ಇದ್ದಾನೆ; ಅವನ ನಗುಮುಖವನ್ನು ನೋಡಿದೊಡನೆಯೇ ನಮ್ಮ ಗಾಡಿಯೂ ನಿಂತೇಬಿಟ್ಟಿದೆಯೆಂಬ ಅರಿವಾಗುತ್ತದೆ. ನಿಜವಾಗಿ ನೋಡಿದರೆ ನಮ್ಮ ಗಾಡಿಯು ಚಲಿಸಿಯೇ ಇಲ್ಲ. ನಮ್ಮ ಹಿಂದಿರುವ ಕೂಟಸ್ಥ ಮಿತ್ರನನ್ನು ನೋಡದೇ ಮುಂದೆ ಹತ್ತಿರ ಸಮದೂರದಲ್ಲಿ ಓಡುತ್ತಿರುವ ಇನ್ನೊಂದು ಟ್ರೈನನ್ನು ನೋಡನೋಡುತ್ತಾ ಅದು ನಿಂತಿರುವಂತೆಯೂ ಅದರ ವಿರುದ್ಧ ದಿಶೆಯಲ್ಲಿ ನಮ್ಮ ಟ್ರೈನೇ ಓಡುತ್ತಿರುವಂತೆಯೂ ಪ್ರತ್ಯಕ್ಷವಾಗಿ ಪ್ರತೀತಿಯಾಗಿಬಿಟ್ಟಿದೆ. ಆದರೆ ದೃಷ್ಟಿಯನ್ನು ಹಿಂದಿರುಗಿಸಿ ನೋಡಿದಾಗ ನಮ್ಮ ನಿಶ್ಚಲತೆಯು ಅನುಭವಕ್ಕೆ ಬರುತ್ತದೆ. ಇಲ್ಲಿ ಅಕರ್ಮದಲ್ಲಿ ಕರ್ಮವನ್ನೂ, ಕರ್ಮದಲ್ಲಿ ಅಕರ್ಮವನ್ನೂ ಕಾಣಬಹುದು. ಚಲಿಸದಿರುವ ನಮ್ಮ ಟ್ರೈನಿನಲ್ಲಿ ನಾವೂ ಅಚಲರಾಗಿ ಕುಳಿತಿರುವುದರಿಂದಲೂ, ಇದಕ್ಕೆ ಸಾಕ್ಷಿಯಾಗಿ ಹಿಂದೆ

ಅಚಲವಾದ ಕಂಬವು ಇರುವುದರಿಂದಲೂ ನಾವು ಅಕರ್ಮಿಗಳು. ಆದ
ಎದುರಿಗಿರುವ ಇನ್ನೊಂದರ ಓಟದಲ್ಲಿ ನಮ್ಮ ನೋಟವು ನಾಟಿರುವುದರಿಂ
ನಮ್ಮಲ್ಲಿಯೇ ಆ ಓಟವು (ಕರ್ಮವು) ಆರೋಪಿತವಾಗಿ ಕಾಣುತ್ತದೆ. ಹೀಗೆಯೆ
ಜೀವನು ತನ್ನ ಹಿಂದಿರುವ ಅಚಲನಾದ ಕೂಟಸ್ಥನನ್ನು ನೋಡದೇ ಮುಂ
ರುವ ನಿತ್ಯವಿಕಾರಿಗಳಾದ ಅಂತಃಕರಣಾದಿಗಳನ್ನೂ, ಶಬ್ದಾದಿ ವಿಷಯರೂ
ಜಗತ್ತನ್ನೂ ನೋಡನೋಡುತ್ತಾ ಅವುಗಳ ಗುಣಕರ್ಮಗಳನ್ನು (ಕರ್ತೃ
ಭೋಕ್ತೃತ್ವಗಳನ್ನು) ತನ್ನಲ್ಲಿ ಕಾಣುತ್ತಾನೆ. ಇದೇ ಅಕರ್ಮದಲ್ಲಿ ಕರ್ಮ
ವನ್ನು ನೋಡುವುದು. ಆದರೆ ಜೀವನು ತನ್ನ ನೋಟವನ್ನು ಹಿಂದಿರುಗಿ
ಆತ್ಮನಾದ ಕೂಟಸ್ಥನನ್ನು ನೋಡಿದೊಡನೆ ತಾನು ಅಕರ್ಮನೆಂಬುದು ಪ್ರ
ಪಡುತ್ತದೆ.

ಮೇಲಿನ ಸಂದರ್ಭದಲ್ಲಿ ಎರಡನೇ ಟ್ರೈನ್ ನಿಜವಾಗಿ ಓಡುತ್ತಿದ್ದರೂ
ನಿಂತಂತೆ ಕಂಡದ್ದರಿಂದ, ಆ ಟ್ರೈನಿನ ಕರ್ಮದಲ್ಲಿ ಅಕರ್ಮವನ್ನೇ ಕಂಡಂತಾ
ಯಿತು. ಮತ್ತು ಎದುರಿಗೆ ನಿಂತಿರುವ ಎರಡನೇ ಟ್ರೈನನ್ನು ನೋಡುತ್ತಿರ
ವಾಗಲೇ ನಮ್ಮ ಟ್ರೈನ್ ಓಡುವುದಕ್ಕೆ ತೊಡಗಿದರೆ ನಾವು ಅಚಲರಾಗಿ
ನಿಂತಿರುವಂತೆಯೂ, ಎದುರಿರುವ ಟ್ರೈನೇ ಓಡುತ್ತಿರುವಂತೆಯೂ ಪ್ರತೀತಿ
ಯಾಗುತ್ತದೆ. ಇಲ್ಲಿ ನಮ್ಮ ಟ್ರೈನಿನ ಕರ್ಮದಲ್ಲಿ ಅಕರ್ಮವನ್ನೂ ಎದುರಿ
ಗಿರುವ ಟ್ರೈನಿನ ಅಕರ್ಮದಲ್ಲಿ ಕರ್ಮವನ್ನೂ ಕಾಣಬಹುದು.

ಇನ್ನೊಂದೇನೆಂದರೆ, ಓಡುತ್ತಿರುವ ಟ್ರೈನಿನಲ್ಲಿ ಕುಳಿತಿರುವ ನಾವು
ಹೊರಗಡೆ ನೋಡಿದಾಗ ನಾವು ಓಡುತ್ತಿರುವಂತೆಯೇ ಕಂಡರೂ ಕಿಟಿಕಿಗಳ
ನ್ನೆಲ್ಲಾ ಮುಚ್ಚಿ ಟ್ರೈನಿನೊಳಗೆ ಕುಳಿತಿರುವ ನಮ್ಮನ್ನೇ ನಾವು ನೋಡಿ
ಕೊಂಡರೆ ನಮ್ಮ ಅಚಲತೆಯೂ, ಅಕರ್ಮವೂ ಅನುಭವಕ್ಕೆ ಬರುವುದು. ಇಲ್ಲಿ
ಕರ್ಮದಲ್ಲಿ ಅಕರ್ಮಪ್ರತೀತಿಯಾಗುತ್ತದೆ. ಇದರಿಂದ ನಿರಂತರ ಚಂಚಲ
ವಾಗಿರುವ ಅಂತಃಕರಣದಲ್ಲಿ ವ್ಯಾಪಕವಾಗಿರುವ ಚಿದಂಶವನ್ನು ಕುರುಹಿಟ್ಟು
ನೋಡಿದರೆ ಚೈತನ್ಯಸ್ವರೂಪಿಗಳಾದ ನಾವು ಅಚಲರಾಗಿಯೂ, ಅಕರ್ಮಿ
ಗಳಾಗಿಯೂ ಕಾಣುತ್ತೇವೆ.

ನಾವು ವಾಸವಾಗಿರುವ ಭೂಗ್ರಹವೇ ತನ್ನ ಅಕ್ಷದ ಮೇಲೆ ತಾನು ವೇಗ
ವಾಗಿ ನಿಮಿಷ ನಿಲ್ಲದೆ ತಿರ್ರನೆ ತಿರುಗುತ್ತಿರುವುದಲ್ಲದೆ, ಒಂದು ಸೆಕೆಂಡಿಗೆ

ಹೆಚ್ಚುಕಡಿಮೆ ಹದಿನೆಂಟು ಮೈಲಿಯ ವೇಗದಂತೆ ಸೂರ್ಯನ ಸುತ್ತಲೂ ಸುತ್ತುತ್ತಿದೆ. ಆದರೂ ನಮ್ಮ ಭೂಮಿಯೇ ಅಚಲವಾಗಿರುವಂತೆಯೂ ಸೂರ್ಯನೇ ಚಲಿಸುತ್ತಿರುವಂತೆಯೂ ನಮಗೆ ತೋರುತ್ತಿದೆ. ಇಲ್ಲಿ ಕರ್ಮದಲ್ಲಿ ಅಕರ್ಮವು ತೋರುತ್ತಿದೆ. ಹೀಗೆ ಕರ್ಮದಲ್ಲಿ ಅಕರ್ಮವೂ, ಅಕರ್ಮದಲ್ಲಿ ಕರ್ಮವೂ ಸರ್ವತ್ರ ವ್ಯಾಪಕವಾಗಿದೆ. ಇದೇ ರೀತಿಯಲ್ಲಿ ಕರ್ಮರೂಪವಾದ ಜಗತ್ತಿನಲ್ಲಿ ಅಕರ್ಮವಾದ ಬ್ರಹ್ಮವೂ, ಅಕರ್ಮವಾದ ಬ್ರಹ್ಮದ ಒಂದಂಶದಲ್ಲಿ ಕರ್ಮರೂಪ ಜಗತ್ತೂ ಇವೆ. ಇದಕ್ಕಾಗಿಯೇ ಗೀತೆಯಲ್ಲಿ,

**ನೈವಕಿಂಚಿತ್ ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥**
**........ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥**

" ಒಳಹೊರಗೆಲ್ಲಾ ತುಂಬಿರುವ ಅಸಂಗವೂ ಕೂಟಸ್ಥವೂ ಆದ ತನ್ನ ಚೈತನ್ಯವನ್ನೇ ನೋಡುವ ಪ್ರಜ್ಞೆಯಿಂದ ಕೂಡಿದ ಬ್ರಹ್ಮವೇತ್ತನು ತಾನೇ ಹೊರಗೆ ನೋಡಿಯೂ ಕೇಳಿಯೂ ಮುಟ್ಟಿಯೂ ಮೂಸಿಯೂ....... ಕೂಡ ಶಬ್ದಾದಿ ವಿಷಯಗಳಲ್ಲಿ ಶ್ರೋತ್ರಾದಿ ಇಂದ್ರಿಯಗಳು ಪ್ರವರ್ತಿಸುತ್ತಿವೆಯೇ ಹೊರತು ' ನಾನು ಕೇಳತಕ್ಕವನೂ ನೋಡತಕ್ಕವನೂ .... .... ಅಲ್ಲ ' ಎಂಬ ಲಕ್ಷಣವುಳ್ಳ ವೃತ್ತಿಯನ್ನೇ ಸರ್ವದಾ ಧರಿಸಿ ಆ ಆ ಕರ್ಮಗಳನ್ನು ಆ ಆ ಇಂದ್ರಿಯಗಳೇ ಸರ್ವದಾ ಮಾಡುವುದರಿಂದ ತಾನು ಏನನ್ನೂ ಮಾಡುವುದಿಲ್ಲವೆಂದೂ, ಆಯಾ ಕರ್ಮಗಳಿಗೆ ಸಾಕ್ಷಿತ್ವದಿಂದ ತಾನು ಅಚಲನೆಂದೂ ಪರಿಭಾವಿಸುತ್ತಿರಬೇಕು " ಎಂದು ಹೇಳಿದೆ.

ಈ ವಿಧವಾದ ದೃಢವಿವೇಕದಿಂದ ಸಿದ್ಧನಾದ ಬ್ರಹ್ಮವೇತ್ತನಿಗಂತೂ ಪುಣ್ಯಪಾಪಕರ್ಮಗಳ ಲೇಪವಿಲ್ಲದಿದ್ದರೂ ಸಾಧಕರಾದ ಮುಮುಕ್ಷುಗಳ ಭಾವಸಾಧನೆಯು ಹೇಗಿರಬೇಕು ಎನ್ನುವುದಕ್ಕೆ ಗೀತೆಯಲ್ಲಿ ಹೇಳಿರುವುದೇನೆಂದರೆ :-

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥**

"ಕರ್ಮಫಲವನ್ನೂ ಒದಗಿರುವ ದುಃಖದ ನಿವೃತ್ತಿಯನ್ನೂ ಕೂಡ ಬಯಸದೇ ಪರಮೇಶ್ವರನಲ್ಲಿ ಎಲ್ಲಾ ಕರ್ತೃತ್ವ ಭೋಕ್ತೃತ್ವ ಪ್ರೇರಕತ್ವ ಮೊದಲಾದುವು ಗಳನ್ನೂ ಶ್ರದ್ಧಾಭಕ್ತಿಗಳಿಂದ ಅರ್ಪಣಮಾಡಿ ಸತ್ಕರ್ಮಗಳನ್ನು ಮಾಡುವಂಥ ನನ್ನ ಭಕ್ತನೂ ಕೂಡ ಕಮಲದೆಲೆಯು ನೀರಿನಿಂದ ಹೇಗೆ ತೋಯುವು ದಿಲ್ಲವೋ ಹಾಗೆ ಪುಣ್ಯಪಾಪಗಳಿಂದ ಲಿಪ್ತನಾಗುವುದಿಲ್ಲ."

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥**

"ಮುಮುಕ್ಷುಗಳಾದ ಕರ್ಮಯೋಗಿಗಳು ಫಲವನ್ನು ಸುತರಾಂ ಬಯಸದೇ ಪರಮೇಶ್ವರ ಪ್ರೀತಿಯಿಂದ ಚಿತ್ತಶುದ್ಧಿಯನ್ನು ಹೊಂದುವುದಕ್ಕಾಗಿ ತನ್ನ ಕರ್ತವ್ಯವನ್ನು ಮನಸ್ಸಿನಿಂದ ವಿಚಾರಿಸಿ ಬುದ್ಧಿಯಿಂದ ನಿಶ್ಚಯಿಸಿ ರಾಗ ದ್ವೇಷಾದಿಗಳಿಲ್ಲದೆ ದೇಹೇಂದ್ರಿಯಾದಿಗಳಿಂದ ಮಾತ್ರ ವಿಹಿತಕರ್ಮವನ್ನು ಮಾಡುತ್ತಾರೆ."

ಹೀಗೆ ನಿಷ್ಕ್ರಿಯಚೈತನ್ಯನಾದ ತನ್ನ ನಿತ್ಯಮುಕ್ತಸ್ಥಿತಿಯ ನಿಜವನ್ನು ತಿಳಿಯುವುದಕ್ಕೆ ಮಲ-ವಿಕ್ಷೇಪ-ಆವರಣಗಳೇ ಚಿತ್ತದಲ್ಲಿ ತಡೆಯಾಗಿರುವ ಮಾಲಿನ್ಯಗಳು. ಅಭಿಮಾನ ರಾಗದ್ವೇಷಾದಿಗಳೇ ಮಲವು. ಕರ್ಮಮೂಲಕ ವಾಗಿಯೇ ಹೊರಹೊಮ್ಮಿ, ಕರ್ಮದಿಂದಲೇ ಹುರಿಗೊಂಡ ಅಭಿಮಾನ, ರಾಗ, ದ್ವೇಷಾದಿ ದೋಷಗಳನ್ನು ತಕ್ಕ ಸದ್ಭಾವ ಸತ್ಕರ್ಮಗಳಿಂದಲೇ ಕಳೆಯಬೇಕಾ ದುದು ಅನಿವಾರ್ಯ. ನಮ್ಮ ಅಂತಃಕರಣವು ಇದರಿಂದ ವಿಕಸಿತವಾಗಿ ಪ್ರಕಾಶಗೊಂಡರೆ ಅಂತರಂಗದಲ್ಲಿಯೇ ಅಕ್ಷಯವಾದ ಆನಂದಸಿಧಿಯಿರುವುದು ಅನುಭವಕ್ಕೆ ಬಂದು ಅದು ಉದಾತ್ತವೂ ಗಂಭೀರವೂ ಅಪಾರವೂ ಭವ್ಯವೂ ದಿವ್ಯವೂ ಪ್ರಸನ್ನವೂ ಸಂತೃಪ್ತವೂ ಆಗುವುದೆಂದು ಅನುಭಾವಿಗಳಾದ ಮಹಾ ತ್ಮರು ತಮ್ಮ ಅಮರವಾಣಿಯಿಂದಲೂ ಶಾಸ್ತ್ರಗಳಿಂದಲೂ ಸಾರುತ್ತಿದ್ದಾರೆ.

ಪಾಶವೀ ರಾಕ್ಷಸೀ ಸ್ವಭಾವಗಳ ಕ್ಷುದ್ರವೂ ಉಗ್ರವೂ ಆದ ಭಾವಗಳಿಂದ ವ್ಯವಹರಿಸುವುದು ತನಗೂ ಲೋಕಕ್ಕೂ ಕೇಡಾದ್ದರಿಂದ ಮಾನವೀ ದೈವೀ ಸ್ವಭಾವಗಳ ಭವ್ಯವೂ ದಿವ್ಯವೂ ಆದ ಭಾವಗಳಿಂದ ವಿವೇಕಿಯು ವ್ಯವ ಹರಿಸಿದರೆ ತನಗೂ ಲೋಕಕ್ಕೂ ಕಲ್ಯಾಣವನ್ನು ಸಾಧಿಸಬಹುದೆಂದು ಕ್ರಿಯಾ

ಯೋಗವು ತಿಳಿಸುತ್ತದೆ. ದೇಶ-ಕಾಲ-ಪರಿಸ್ಥಿತಿಗಳ ಸರಿಯಾದ ಹದವನ್ನರಿತು ಅಲ್ಪಶಕ್ತಿಯನ್ನು ವಿನಿಯೋಗ ಮಾಡುವುದರಿಂದ ಮಹತ್ಫಲವನ್ನು ಹೇಗೆ ಪಡೆಯಬಹುದೆಂಬ ಗುಟ್ಟನ್ನು ಕರ್ಮಯೋಗವು ತಿಳಿಸುತ್ತದೆ. ತನ್ನ ಮತ್ತು ಮಿಕ್ಕವರ ಹಿತಕ್ಕಾಗಿ ಮಾಡಬೇಕಾದ ಕರ್ಮಗಳನ್ನು ಕರ್ತವ್ಯಭಾವನೆ ಯಿಂದಲೂ ಸೇವಾಭಾವನೆಯಿಂದಲೂ ಈಶ್ವರಾರ್ಪಣಬುದ್ಧಿಯಿಂದಲೂ ನಿರಭಿ ಮಾನದಿಂದಲೂ ನಿಷ್ಕಾಮವಾಗಿಯೂ ಮಾಡುವುದರಲ್ಲಿ ಅಂತಃಕರಣವು ನಿರ್ಮಲವೂ ಪ್ರಫುಲ್ಲಿತವೂ ಆಗಿ ಅಪೂರ್ವವೂ ಅಲೌಕಿಕವೂ ಆದ ಆನಂದವು ಲಭಿಸುವುದೆಂದು ಕರ್ಮಯೋಗವು ತಿಳಿಸುತ್ತದೆ

ಕರ್ಮವನ್ನು ಮಾಡಿದರೂ ಕರ್ಮಫಲವಾದ ಸುಖದುಃಖಗಳಿಂದ ಕ್ಷುಬ್ಧ ನಾಗದೇ ಪ್ರಶಾಂತನಾಗಿರುವ ಜಾಣತನವನ್ನು ಈ ಯೋಗವು ಕಲಿಸುತ್ತದೆ.

ಸಂಸಾರಸರ್ಪದ ಸಂಗವೆಂಬ ವಿಷದಂತವನ್ನು ಕಿತ್ತು ಅಪನ್ನೇ ವಿನೋದ ವಾಗಿ ಆಡಿಸುವ ಅನಾಸಕ್ತಿಯ ಅಭಯವೃತ್ತಿಯನ್ನು ಈ ಕರ್ಮಯೋಗವು ಕೊಟ್ಟು ಕಾಪಾಡುತ್ತದೆ.

ಹಿಂದೆ ಹೇಳಿದ ಮಲವಿಕ್ಷೇಪ ಆವರಣಗಳೆಂಬ ಅಂತಃಕರಣ ದೋಷ ಗಳಲ್ಲಿ ಮಲವನ್ನು ಸತ್ಕರ್ಮಯೋಗದಿಂದಲೂ ವಿಕ್ಷೇಪವನ್ನು ಉಪಾಸನಾ ಯೋಗ, ಧ್ಯಾನಯೋಗಗಳಿಂದಲೂ ಆವರಣವನ್ನು ಸದ್ಗುರೂಪದಿಷ್ಟವಾದ ಜ್ಞಾನಯೋಗದಿಂದಲೂ ಪರಿಹರಿಸಿಕೊಳ್ಳಬೇಕು. ಉಪಾಸನಾ ಯೋಗಾದಿ ಗಳೂ ಶ್ರವಣಾದಿಗಳೂ ಸತ್ಕ್ರಿಯಾಯೋಗವೇ ಆಗಿವೆ.

ಈ ಸತ್ಕರ್ಮಯೋಗದಲ್ಲಿ ಯೋಗಿಯು ಮಾಡಬೇಕಾದ ಸತ್ಕರ್ಮ ಗಳಾವುವು ಮತ್ತು ಇವುಗಳನ್ನು ಮಾಡುವ ಭಾವನೆಯ ಬಗೆಯೇನು ಎನ್ನು ವುದಕ್ಕೆ ಗೀತೆಯ ಹದಿನೆಂಟನೇ ಅಧ್ಯಾಯದಲ್ಲಿ ಹೇಳಿರುವುದೇನೆಂದರೆ,

**ಯಜ್ಞದಾನ ತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವತತ್ ।**
**ಯಜ್ಞೋದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥**

"ಯಜ್ಞದಾನ ತಪಸ್ಸುಗಳ ರೂಪವಾದ ಕರ್ಮವು ಬಿಡತಕ್ಕದ್ದಲ್ಲ; ಅದು ಮಾಡಲ್ಪಡಲೇಬೇಕಾದುದು. ಯಜ್ಞವೂ ದಾನವೂ ತಪಸ್ಸೂ ವಿವೇಕಿಗಳಾದ ಸಾಧಕರನ್ನು ಪವಿತ್ರಗೊಳಿಸುವುವು.

ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥

"ಆದರೆ ಅರ್ಜುನನೇ! ಈ ಕರ್ಮಗಳೂ ಸಹ ಕರ್ತವ್ಯದ ಅಭಿಮಾನವನ್ನೂ ಅವುಗಳ ಫಲಗಳ ಬಯಕೆಯನ್ನೂ ಬಿಟ್ಟು ಮಾಡಲ್ಪಡಬೇಕಾದವೆಂದು ನನ್ನ ನಿಶ್ಚಿತವೂ ಶ್ರೇಷ್ಠವೂ ಆದ ಅಭಿಪ್ರಾಯವು."

ಈಗ ಇಷ್ಟು ಮುಖ್ಯವಾದ ಯಜ್ಞ ದಾನ ತಪಸ್ಸುಗಳೇನೆಂಬುದನ್ನು ವಿಚಾರಿಸೋಣ. ಈ ಗ್ರಂಥದ ಪ್ರಥಮಭಾಗವಾದ '**ಧರ್ಮ**'ದಲ್ಲಿ ಯಜ್ಞದ ವಿಚಾರವು ವಿಶೇಷವಾಗಿ ಬಂದಿದೆ. ಇಲ್ಲಿ ಯಜ್ಞದ ವಿಚಾರವಾಗಿ ಇಷ್ಟೇ ಹೇಳ ಬಹುದು :—

ಯಜ್ಞವೆಂದರೆ ಆತ್ಮಬಲಿ; ಅಥವಾ ಸ್ವಾರ್ಥಸರ್ವಸ್ವದ ಬಲಿ. ಆತ್ಮಾರ್ಪಣ, ಸ್ವಾರ್ಥಸಮರ್ಪಣ. "**ಯಜ್ಞೋ ವೈ ವಿಷ್ಣುಃ**" ಎಂದೂ ಇದೆ; ಯಜ್ಞವೆಂದರೆ ವಿಷ್ಣುತ್ವ, ವಿಷ್ಣುತ್ವವೆಂದರೆ ವ್ಯಾಪಕತ್ವ.

ವ್ಯಕ್ತಿಹಿತಕ್ಕಾಗಿಯೂ ವಿಶ್ವಹಿತಕ್ಕಾಗಿಯೂ ವಿಶ್ವನಾಥನ ಪ್ರೇಮ ಕ್ಕಾಗಿಯೂ ತನ್ನ ಪ್ರೀತಿಯ ವಸ್ತುಗಳನ್ನೂ ಇಚ್ಛೆಗಳನ್ನೂ ಸರ್ವಸ್ವವನ್ನೂ ಬಲಿ ಗೊಡುವುದರ ಮೂಲಕ ಅಂತಃಕರಣವು ಶುದ್ಧಿಯಾಗಿ ಚೈತನ್ಯದ ಅಪಾರ ವ್ಯಾಪ ಕತ್ವವನ್ನು (ವಿಷ್ಣುತ್ವವನ್ನು) ಪಡೆಯುವುದೇ ಯಜ್ಞವಾಗಿದೆ. ವಿಶಾಲವಾಗಿ ಅರಳದೇ ಇರುವ ಅಂತಃಕರಣವುಳ್ಳ ಪಶುಜೀವಿಗಳು ತಮ್ಮ ಮತ್ತು ತಮ್ಮ ಕುಟುಂಬದ ಸುಖವನ್ನು ಮಾತ್ರ ಗಮನಿಸುವರು; ಇದಕ್ಕಾಗಿ ಯಾರನ್ನು ಬೇಕಾದರೂ ವಂಚಿಸಿ ಅವರ ಸುಖವನ್ನು ಸುಲಿದು ಸೂರೆಗೊಳ್ಳುವರು. ಆದರೆ ಕೋಮಲ ಭಾವನೆಗಳಿಂದ ಕರಗಿ ಹರಡಿದ ಭಾವನೆಯುಳ್ಳವರು ವಿಶಾಲ ಪ್ರಪಂಚದಿಂದ ತಮಗಾಗುತ್ತಿರುವ ಪ್ರಯೋಜನವನ್ನು ತಿಳಿದು ಕೃತಜ್ಞ ಭಾವನೆ ಹೊಂದಿ ಇತರರಿಗೆ ತಮ್ಮಿಂದಾಗಬೇಕಾದ ಸೇವೆಯನ್ನು ಬೆಳೆಸುತ್ತಾ ತಮಗಾಗಿ ಅವರಿಂದಾಗುವ ಸಹಾಯವನ್ನು ಕಡಿಮೆ ಮಾಡಿಕೊಳ್ಳುತ್ತಾ ವಿಶ್ವ ಸಂಬಂಧವನ್ನೂ ವಿಶ್ವವ್ಯಾಪನೆಯನ್ನೂ ವಿಶ್ವಮೈತ್ರಿಯನ್ನೂ ಬೆಳೆಸುವ ವಿಧಾನ ವಾವುದೋ ಅದೇ ಯಜ್ಞವೆನಿಸುವುದು.

ಒಂದು ಗಡಿಯಾರದಲ್ಲಿ ಸಣ್ಣದೊಡ್ಡ ಅನೇಕ ಚಕ್ರಗಳಿವೆ. ಅವು ಒಂದ

ಕ್ಕೊಂದು ಬಂಧುರವಾದ ಸಂಬಂಧ ಹೊಂದಿವೆ. ಸಣ್ಣದೆಂದೂ ಅನಗತ್ಯವೆಂದೂ ಯಾವುದನ್ನೂ ಅಲ್ಲಗಳೆಯುವಂತಿಲ್ಲ. ಸೂಜಿಯ ಮೊನೆಯಷ್ಟು ಯಾವುದೊಂದ ರಲ್ಲಿ ವ್ಯತ್ಯಾಸ ಬಂದರೂ ಇಡೀ ಯಂತ್ರದ ಸ್ಥಿತಿಗತಿಯೇ ವ್ಯತ್ಯಸ್ತವಾಗಿ ಕೆಡು ತ್ತದೆ. ನಮ್ಮ ದೇಹಯಂತ್ರವೂ ಹಾಗೆಯೇ. ಯಾವುದೊಂದು ರೋಮ ಕೂಪದಲ್ಲಿ ದೋಷಸಂಗ್ರಹವಾದರೂ ಪೂರ್ಣದೇಹದ ಆರೋಗ್ಯವೇ ಕೆಡುತ್ತದೆ. ಹೀಗೆಯೇ ಒಂದೊಂದು ವ್ಯಕ್ತಿಗೂ ಸಮಗ್ರವಿಶ್ವಕ್ಕೂ ಅನ್ಯೋನ್ಯವಾಗಿ ನಿಕಟವೂ ಒಕ್ಕಟ್ಟೂ ಬಿಕ್ಕಟ್ಟೂ ಆದ ಸಂಬಂಧವಿದೆ. ಈ ಅತ್ಯಗತ್ಯವಾದ ಅನ್ಯೋನ್ಯಾ ವಲಂಬನದ ವಿಶ್ವನಿಯತಿಯ ಮರ್ಮವನ್ನರಿತು ತನ್ನ ತನ್ನ ಪ್ರತ್ಯೇಕತೆಯ ಸಂಕುಚಿತ ಭಾವವನ್ನು ತೊರೆದು ಸಮಷ್ಟಿವಿಶ್ವದ ಸೌಖ್ಯಕ್ಕಾಗಿ ಸ್ವಾರ್ಥವನ್ನು ತ್ಯಾಗಮಾಡುವುದೇ ಯಜ್ಞ.

ಪುರುಷಸೂಕ್ತದಲ್ಲಿ **"ಪಾದೋಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾ-ಮೃತಂ ದಿವಿ"** ಎಂದು ಹೇಳಿರುವಂತೆ ಅನಂತನೂ ಅಮೃತನೂ ಆದ ಪರ ಮಾತ್ಮನೇ ವಿಶ್ವಸೃಷ್ಟಿಯ ಮಹಾ ಸಾಧನೆಗಾಗಿ ತನ್ನ ಅನಂತತ್ವ ಅಮೃತತ್ವ ಗಳ ಒಂದಂಶವನ್ನು ಬಲಿಗೊಟ್ಟನೆಂಬಂತೆ ದೇಶ ಕಾಲ ನಿಮಿತ್ತಗಳ ನಿರ್ಬಂಧಕ್ಕೆ ಸಿಕ್ಕಿ ಜನ್ಮ ಮೃತಿಗಳನ್ನು ಹೊಂದುವಂತೆಯೂ ಸಾಂತನಂತೆಯೂ ತೋರುತ್ತಿ ದ್ದಾನೆ. ಹೀಗೆ ಬ್ರಹ್ಮ ಯಜ್ಞದಿಂದಲೇ ಸೃಷ್ಟಿಯು ಪ್ರಾರಂಭವಾಗಿರುವುದ ರಿಂದ ಇದರ ಎಲ್ಲಾ ಬಗೆಯ ಯೋಗ-ಕ್ಷೇಮ-ಅಭ್ಯುದಯಗಳೂ ಯಜ್ಞಕರ್ಮ ವನ್ನೇ ಅವಲಂಬಿಸಿವೆ. ಆದ್ದರಿಂದಲೇ ಗೀತೆಯಲ್ಲಿ,

**ಸಹ ಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಸ್ತ್ವಿಷ್ಟಕಾಮಧುಕ್ ॥**

ಸೃಷ್ಟಿಯ ಆದಿಯಲ್ಲಿ ಬ್ರಹ್ಮನು ಯಜ್ಞದೊಡನೆ ಪ್ರಜೆಗಳನ್ನು ಸೃಷ್ಟಿಮಾಡಿ "ನೀವು ಈ ಯಜ್ಞಚರ್ಯೆಯಿಂದ ದೇವತೆಗಳನ್ನು ತೃಪ್ತಿಪಡಿಸಿರಿ. ನೀವು ಶ್ರದ್ಧೆಯಿಂದ ಮಾಡಿದ ಯಜ್ಞವು ನಿಮಗೆ ಇಷ್ಟಾರ್ಥಗಳನ್ನು ಕೊಡುವಂಥಾ ದ್ದಾಗಲಿ" ಎಂದು ಹೇಳಿದನು. ಅವರೆ ನಿಷ್ಕಾಮವಾಗಿ ಯಜ್ಞ ಮಾಡಿದವರಿಗೆ ಆ ಯಜ್ಞವು ಜ್ಞಾನಪ್ರಾಪ್ತಿಗೆ ಪ್ರತಿಬಂಧಕವಾದ ಸಮಸ್ತ ದುರಿತಗಳನ್ನೂ ನಾಶಮಾಡಿ ಚಿತ್ತಶುದ್ಧಿಯನ್ನುಂಟುಮಾಡುತ್ತದೆ.

ವಿಶಾಲದೃಷ್ಟಿಯಿಂದ ಯಜ್ಞಕರ್ಮವನ್ನು ಅರ್ಥಮಾಡಿಕೊಂಡರೆ ವಿಶ್ವ
ರಕ್ಷಣಾಭಿವೃದ್ಧಿಗಳೇ ಯಜ್ಞವನ್ನು ಅವಲಂಬಿಸಿವೆ. ಪ್ರಪಂಚದಲ್ಲಿ ಧಾತುವರ್ಗ
ದಲ್ಲಿರುವ ಜೀವಶಕ್ತಿಯು, ಧಾತುಲೋಹಾದಿಗಳ ಅಣುಗಳು ಒಡೆದು ಜೀರ್ಣಿ
ಸುವ ಯಜ್ಞದಿಂದಲೇ ವಿಕಾಸವಾಗಿ ಸಸ್ಯವರ್ಗದಲ್ಲಿ ಬೆಳೆಯುತ್ತದೆ. ಪ್ರ
ವರ್ಷವೂ ಸಣ್ಣ ಸಣ್ಣ ಸಸ್ಯಗಳು (ದೊಡ್ಡ ಮರ ಗಿಡಗಳೂ ಕೂಡ) ಗಾ
ಮಳೆಗಳಿಂದ ಭೂಮಿಗೆ ಒರಗಿ ಕರಗಿ ದೊಡ್ಡ ದೊಡ್ಡ ಮರಗಳಿಗೆ ಆಹಾರವಾ
ತಮ್ಮ ತನುಯಜ್ಞದಿಂದ ಅವುಗಳನ್ನು ಪೋಷಿಸುತ್ತವೆ. ಸಸ್ಯಾದಿಗಳು ಪ್ರಾ
ಗಳಿಗೂ ಆಹಾರವಾಗುವುದರಿಂದ ಸಸ್ಯ ಜೀವವು ತನ್ನ ಯಜ್ಞದಿಂದ ಬೆಳೆ
ಪ್ರಾಣಿಜೀವವೂ ಪ್ರಾಣಿ ಶಕ್ತಿಯೂ ಆಗುತ್ತದೆ. ಪಶುಲೋಕದಲ್ಲಿಯ
ದುರ್ಬಲಪ್ರಾಣಿಯು ಪ್ರಬಲಪ್ರಾಣಿಗೆ ಬಲಿಯಾಗಿ ಯಜ್ಞಚಾರಿಯಾಗುತ್ತದೆ
ಸಸ್ಯಗಳೂ ಪ್ರಾಣಿಗಳೂ ಬಲಿಯಾಗಿ ಮಾನವಲೋಕವನ್ನು ಬೆಳೆಸಿವೆ. ಹೀ
ಧಾತು ಲೋಹ ಪಾಷಾಣಾದಿಗಳಲ್ಲಿರುವ ಅತ್ಯಂತ ಕ್ಷುದ್ರವೂ ಜಡವ
ಸಂಕುಚಿತವೂ ಆದ ಜೀವಶಕ್ತಿಯು ಸಸ್ಯವರ್ಗ ಪ್ರಾಣಿವರ್ಗಗಳಲ್ಲಿ ಕ್ರಮಕ್ರಮ
ವಾಗಿ ನಿರಂತರವಾದ ಯಜ್ಞಪರಂಪರೆಯಿಂದ ಹೆಚ್ಚು ವಿಕಾಸವಾಗಿ ಕೊನೆ
ಶ್ರೇಷ್ಠವೂ ಬಲಿಷ್ಠವೂ ಆದ ಮಾನವ ಜೀವವಾಗುತ್ತದೆ. ಪ್ರಕೃತಿಯ
**"ಜೀವೋ ಜೀವಸ್ಯ ಜೀವನಂ"** ಎಂಬಂತೆ ಒಂದು ಜೀವದ ಯಜ್ಞದಿಂದಲೇ
ಇನ್ನೊಂದು ಜೀವವು ಬೆಳೆಯುತ್ತದೆ; ಅಥವಾ ಯಜ್ಞದ ಪ್ರಭಾವದಿಂದಲೇ
ದುರ್ಬಲಜೀವಿಯು ಪ್ರಬಲಜೀವಿಯಾಗಿಯೂ ಅಲ್ಪಜೀವವು ಮಹಾ ಜೀ
ವಾಗಿಯೂ ಆಗುತ್ತಿವೆ. ಆದರೆ ಬಹಳ ಪೂರ್ವದ ಶಿಲಾಕಾಲದ ಪಾಷಾ
ಹೃದಯಿಯಾದ ಪಶುಜೀವಿ ಮಾನವನು ನರಭಕ್ಷಣವನ್ನು ಬಿಟ್ಟು ತನ್ನ ಕಾಡ
ಬಾಳಿನಿಂದ ನಾಡಬಾಳಿಗೆ ಬಂದು ಮೆಲ್ಲಮೆಲ್ಲಗೆ ನಾಗರಿಕನಾದಂ
ಇನ್ನೊಂದು ಜೀವಿಯ ನೋವನ್ನು ಕಂಡು ತಾನೂ ನೊಂದುಕೊಳ್ಳುವ ಕಸಿಕ
ಕರುಣೆ, ದಯೆ, ಅನುಕಂಪ, ಸಹಾನುಭೂತಿ ಮೊದಲಾದ ಪ್ರಿಯವೂ ನಯವ
ಮೃದುವೂ ಮಧುರವೂ ಆದ ಗುಣಗಳು ಅವನಲ್ಲಿ ಬೆಳೆದವು. ಆ
'Survival of the fittest' 'ಶಕ್ತಿತಮನ ಜೀವಿಕೆ' ಎಂಬ ಪಶು
ಲೋಕದ ನಿಯಮವು ಶಿಥಿಲವಾಗಿ (ಕೋಮಲ ಸ್ವಭಾವದ) ಸಂಸ್ಕೃತಿಯು
ಬೆಳೆದ ಮಾನವ ಲೋಕದಲ್ಲಿ 'Revival of the humblest'
'ದೀನತಮನ ಉಜ್ಜೀವನ' ಎಂಬ ಉದಾತ್ತ ಯಜ್ಞಭಾವನೆಯು ಬೆಳೆಯುತ್ತ

ಇದರಿಂದ ಧಾತು-ಸಸ್ಯ-ಪ್ರಾಣಿ ಲೋಕಗಳಲ್ಲಿ ನಿಯಮಬದ್ಧವಾಗಿ ಒತ್ತಾಯದಿಂದ ನಡೆಯುತ್ತಿರುವ ಯಜ್ಞಕರ್ಮವನ್ನು ಸುಸಂಸ್ಕೃತನಾದ ಮಾನವನು ಅರ್ಥಮಾಡಿಕೊಂಡು ತನ್ನ ಸುತ್ತಲ ಜಗತ್ತಿನ ಹಿತಕ್ಕಾಗಿ ತನ್ನ ಜ್ಞಾನ-ಇಚ್ಛಾ-ಕ್ರಿಯಾ ಶಕ್ತಿಗಳನ್ನೂ ವಸ್ತುಗಳನ್ನೂ ಸಮರ್ಪಣ ಮಾಡುವುದಕ್ಕೆ ಸ್ವೇಚ್ಛೆಯಿಂದ ಸ್ವತಂತ್ರವಾಗಿ ಯಜ್ಞದೀಕ್ಷಿತನಾಗುತ್ತ ಬಂದನು. ಏಕೆಂದರೆ ಯಜ್ಞಜೀವಿಯಲ್ಲದವನು **"ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ।"** ಪಾಪಾಯುಷಿಯೂ ಇಂದ್ರಿಯಲೋಲನೂ ವ್ಯರ್ಥ ಜೀವಿಯೂ ಆಗುತ್ತಾನೆ.

ಇದುವರೆಗೆ ಹೇಳಿರುವುದು ವಿಶ್ವಕ್ಕೆ ಸಂಬಂಧಪಟ್ಟ ವ್ಯಕ್ತಿಯ ಧರ್ಮ ಜೀವನದ ವೈಶಾಲ್ಯ–ಸಮಗ್ರತೆಗಳ ಮಾತಾಯಿತು. ಇನ್ನು ಈಶ್ವರ ಸಂಬಂಧವಾದ ವ್ಯಕ್ತಿಯ ಅಧ್ಯಾತ್ಮ ಜೀವನದ ಗಾಂಭೀರ್ಯ–ಏಕಾಗ್ರ–ಸಂಪೂರ್ಣತೆಯ ವಿಚಾರದಲ್ಲಿ ಯಜ್ಞದ ಅರ್ಥವನ್ನು ನೋಡೋಣ. ಗೀತೆಯಲ್ಲಿ,

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ॥**

"ಅಲ್ಪವೂ ಅನಿತ್ಯವೂ ಆದ ಸುಖಗಳಿಗೆ ಸಾಧನವಾದ ದ್ರವ್ಯಮಯವಾದ ಬಾಹ್ಯಯಜ್ಞಕ್ಕಿಂತಲೂ ನಿತ್ಯ ನಿರಂತರಾನಂದರೂಪ ಮೋಕ್ಷಫಲವನ್ನು ಕೊಡುವ ಜ್ಞಾನಯಜ್ಞವು ಶ್ರೇಷ್ಠವು; ಭೌತಿಕ–ಆಧ್ಯಾತ್ಮಿಕ, ಸಂಚಿತ, ಆಗಾಮಿ ಸರ್ವ ಕರ್ಮಗಳೂ ಜ್ಞಾನದಲ್ಲಿ ಸಮಾಪ್ತಿಯಾಗುತ್ತವೆ. ಎಲ್ಲಾ ಕರ್ಮಗಳ (ಯಜ್ಞಗಳ) ಗುರಿಯೂ ಪರಮಾತ್ಮನ ಜ್ಞಾನಲಾಭವೇ ಆಗಿದೆ. ಮತ್ತು ಭಗವಂತನ ಜ್ಞಾನದಿಂದ ಎಲ್ಲಾ ಕರ್ಮಗಳೂ ಹುರಿದು ಸುಟ್ಟು ನಾಶವಾಗುತ್ತವೆ.

ನಾನು ಪುಣ್ಯ ಪಾಪಗಳನ್ನು ಮಾಡುವವನು, ಸುಖ ದುಃಖಗಳನ್ನು ಅನುಭವಿಸುವವನು ಮತ್ತು ರಾಗ ದ್ವೇಷಾದಿಗಳುಳ್ಳವನು ಎಂಬ ಮೊದಲಾದ ಭಾವನಾರೂಪವಾದ ಜೀವಪಶುವನ್ನು ಅಕರ್ತಾತ್ಮ ದೇವನ ಸನ್ನಿಧಿಯಲ್ಲಿ ಬಲಿಗೊಟ್ಟು "ಸತ್ಯನೂ ನಿತ್ಯತೃಪ್ತನೂ ಆದ ಜ್ಞಾನಾನಂದಘನನೇ ನಾನು" ಎಂಬ ಜ್ಞಾನಾಗ್ನಿಯಲ್ಲಿ 'ಜೀವನು ನಾನು' ಎಂಬ ಅಜ್ಞಾನವನ್ನು ಹೋಮ

ಮಾಡುವುದೇ ಜ್ಞಾನಯಜ್ಞವು. ಈ ಜ್ಞಾನಯಜ್ಞದಿಂದಲೇ ಚಿತ್ತಶುದ್ಧಿಯೂ ಜ್ಞಾನನಿಷ್ಠೆಯು ಉಂಟಾಗುತ್ತದೆ.

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ**
**ಕರ್ಮಬಂಧನಃ**

" ಯಜ್ಞಭಾವನೆಯಿಂದ ಮಾಡದೇ ಇರುವ ಕರ್ಮವು ಬಂಧನಕಾರಿಯಾಗುವುದು.

ಇನ್ನು ದಾನವನ್ನು ತೆಗೆದುಕೊಳ್ಳೋಣ. ಯಜ್ಞದಲ್ಲಿ ಸಕರ್ತೃಕ (Subjective) ದೃಷ್ಟಿಪ್ರಧಾನವಾಗಿರುವಂತೆ ದಾನದಲ್ಲಿ ಸವಿಷಯ (Objective) ದೃಷ್ಟಿಯು ಮುಖ್ಯವಾಗಿರುತ್ತದೆ. ಯಜ್ಞ-ದಾನಗಳು ಪರಸ್ಪರ ಪೂರಕಗಳು. ಯಜ್ಞವು ಸ್ವಾರ್ಥನಿರಾಕರಣೆಯನ್ನು ಬೋಧಿಸಿದ ದಾನವು ಸ್ವಾರ್ಥದ ವಿಶಾಲ ವಿನಿಯೋಗ ವಿತರಣಗಳನ್ನು ಸಾಧಿಸುತ್ತದೆ. ಒಂದು ದೃಷ್ಟಿಯಿಂದ ಯಜ್ಞವು ಸಾರ್ಥಕವಾಗುವುದು ದಾನದಿಂದ.

ಹಿಂದೆ ಹೇಳಿದಂತೆ ಈ ಜಗತ್ತಿನಲ್ಲಿ ಕ್ಷೀಣವಾಗುತ್ತಿರುವ ಗಿಡಮರಗಳು ಆ ತಮ್ಮ ಯಜ್ಞದಿಂದ ಗೊಬ್ಬರವಾಗಿ, ಬೆಳೆಯುತ್ತಿರುವ ಗಿಡಮರಗಳಿಗೆ ತಮ್ಮ ಜೀರ್ಣ (**ಯಜ್ಞ**) ದೇಹದಿಂದ ಪೋಷಣ ದ್ರವ್ಯಗಳನ್ನು ಒದಗಿಸಿ ಜೀವಶಕ್ತಿಯನ್ನು **ದಾನ**ಮಾಡುತ್ತವೆ. ಹೀಗೆಯೇ ಸಸ್ಯವರ್ಗ ಪ್ರಾಣಿವರ್ಗ ಮನುಷ್ಯ ವರ್ಗಗಳು ಸೃಷ್ಟಿ ನಿಯಮದಂತೆ ಕಾಲಕ್ರಮದಿಂದ ವಿಶೀರ್ಣವಾಗಿ ಬಲಿ (ಯಜ್ಞ) ಯಾಗುವುದಲ್ಲದೆ ತಮ್ಮ ತಮ್ಮ ಪ್ರಾಣಶಕ್ತಿಯನ್ನು ಮಿಕ್ಕವುಗಳಿಗೆ ದಾನ ಮಾಡುತ್ತವೆ.

ಸೃಷ್ಟಿಯ ದಾನ ಸತತ ದಾನ. ನಮ್ಮ ಸುತ್ತಲೂ ನಾಲ್ಕು ದಿಶೆಯಲ್ಲಿ ಅನಂತ ಸೃಷ್ಟಿ ಹರಡಿದೆ. ಈ ಅನಂತದ ನಡುವೆ ನಾವು ಒಂದು ತುಚ್ಛ ಶರೀರ ಧಾರಣೆಮಾಡಿದ್ದೇವೆ. ಇಡೀ ಸೃಷ್ಟಿ ನಮಗೆ ನಿರಂತರವೂ ಏನಾದರೂ ಕೊಡುತ್ತಲೇ ಇದೆ. ಸೂರ್ಯನಾರಾಯಣನು ಪ್ರತಿ ಪ್ರಾತಃಕಾಲ ಉದಯನಾಗಿ ತನ್ನ ಸಾವಿರ ಕಿರಣಗಳಿಂದ ನಮ್ಮನ್ನು ಆಲಿಂಗನ ಮಾಡುತ್ತಾನೆ. ನಮ್ಮಂಥ ತುಚ್ಛರ ಸೇವೆಯಲ್ಲೇ ತನ್ನ ಜೀವನ ಕಳೆಯುತ್ತಾನೆ. ಪ್ರಾಚೀನ ಕಾಲದಿಂದ ಒಂದು ಗಾಳಿ ಹಿಮಾಲಯದ ಕಡೆಯಿಂದ, ಒಂದು ಸಾಗರದ ಕಡೆಯಿಂದ,

ಬೀಸುತ್ತಿವೆ. ನಮಗೆ ಮಧುರ ಸ್ಪರ್ಶ ಕೊಡುತ್ತಿವೆ. ನಮ್ಮ ಮೇಲೆ ಪ್ರೇಮದ ಮಳೆಗರೆಯುತ್ತಿವೆ. ಆದರಿಂದಲೇ ನಮ್ಮ ಶ್ವಾಸೋಚ್ಛ್ವಾಸ ನಡೆಯುತ್ತಿದೆ. ನಾವು ಉಸಿರಾಡುತ್ತೇವೆ. ನಮ್ಮ ತುಚ್ಛ ಜೀವನವನ್ನು ಪರಿಪೂರ್ಣವಾಗಿಸಲು ಈ ಮಾರುತನು ನಿರಂತರ ಸೇವೆ ಮಾಡುತ್ತಿದ್ದಾನೆ. ಈ ಗಂಗೆ ನಿರಂತರವೂ ನಮ್ಮ ಸೇವೆಗಾಗಿ ಹರಿಯುತ್ತಲಿದೆ. ಮಾವನ್ನು ಬಿತ್ತಿದರೆ ಮಾವನ್ನೂ, ಬೇವನ್ನು ಬಿತ್ತಿದರೆ ಬೇವನ್ನೂ ನಮ್ಮ ಇಷ್ಟಾನುಸಾರ ಬೆಳೆಸುತ್ತಲಿದೆ. ಮೋಡಗಳೂ ನಮಗೆ ಸದಾ ತಮ್ಮ ಜೀವನಸಮೃದ್ಧಿಯನ್ನು ದಾನಮಾಡಿ ನಮ್ಮ ಜೀವನ ಸುಖವನ್ನು ಜಲ-ಫಲಾದಿ ಆಹಾರಗಳಿಂದ ಬೆಳೆಸುತ್ತಲಿವೆ. ನಾವು ಹಲವು ವೇಳೆ ನೀರೆರೆಯದಿದ್ದರೂ ಗಿಡಮರಗಳು ನಮಗೆ ಹೂ ಹಣ್ಣುಗಳನ್ನು ನೀಡುತ್ತವೆ. ಅವು ನಮ್ಮಿಂದ ಏನೂ ಬೇಡವು, ಏನೂ ಪಡೆಯವು. ಆ ಗಿಡ ಮರಗಳ ತಂಪಾದ ನೆರಳಲ್ಲಿ ಕುಳಿತು ವಿಶ್ರಮಿಸಿಕೊಂಡು ಕಂಪೆಲರಿಂದ ಆಪ್ಯಾಯನ ಹೊಂದಿ ಸೊಂಪಾದ ಫಲಗಳನ್ನು ಸವಿದು, ಸಂತುಷ್ಟಿ ಪಡೆದು ಅವುಗಳ ಆಶ್ರಯದಲ್ಲಿ ರಾಜಿಸುವ ಶುಕಪಿಕಾದಿಗಳ ಇಂಚರದಿಂದ ಆನಂದಪಟ್ಟರೂ ಅವುಗಳ ಕೊಂಬೆ ರೆಂಬೆಗಳನ್ನೇ ಕಡಿದು ಕೆಡಹುವ ಕೃತಘ್ನರಿಗೂ, ಫಲಗಳನ್ನು ನೀಡುತ್ತಿರುವ ಸಸ್ಯವರ್ಗವು ವಿಚಾರಶೀಲ ಮಾನವನಲ್ಲಿ ಮಾನವ್ಯತೆಯನ್ನು ಚಿಮ್ಮಿಸಿ ದೈವೀಸಂಪತ್ತಿನ ಮಹಾದಾತೃತ್ವವನ್ನು ಬೋಧಿಸುತ್ತಿದೆ. ಹೀಗೆ ಇಡೀ ಸೃಷ್ಟಿಯೇ ನಮಗೆ ಯಜ್ಞದಾನಗಳ ಶಿಕ್ಷಣ ಕೊಡುತ್ತಿದೆ. ಅಜ್ಞಶಿಶುಗಳಾದ ನಮಗೆ ಪ್ರಕೃತಿಯೇ ಮಾತೆಯು. ಮಾತೆಯ ಅನುಗ್ರಹವನ್ನು ಪಡೆಯಬೇಕಾದರೆ ಆಕೆಯ ಸ್ಥಿತಿಯನ್ನು ಅನುಸರಿಸಬೇಕು. ನಿರಂತರವೂ ಅನಂತಾನಂತವಾಗಿ ನೀಡುತ್ತಿರುವುದೇ ಆಕೆಯ ನೀತಿ. ನಮಗೆ ನಿಜಸುಖವು ಬೇಕಾದರೆ ನಿಸರ್ಗಮಾತೆಯ ನಿಯತಿಯೊಡನೆ ನಾವು ಏಕರೂಪರೂ ಸಮರಸರೂ ಆದ ಹೊರತು ಗತ್ಯಂತರವಿಲ್ಲ. ನಮ್ಮ ಜೀವನಗತಿಯು ಸೃಷ್ಟಿನೇಮಕ್ರಮಕ್ಕೆ ವಿಪರೀತವಾದರೆ ಪಾಪಮಯವೂ ತಾಪಮಯವೂ ದುಃಖಪೂರಿತವೂ ಆಗುತ್ತದೆ. ಗಂಗೆಯು ಹರಿಯುತ್ತಲೇ ಇದ್ದರೆ ಶುಚಿಯಾಗಿಯೂ ರುಚಿಯಾಗಿಯೂ ಇರುತ್ತದೆ. ಮಾನಸ ಸರೋವರದ ಅಕ್ಷಯ ಜಲದಿಂದಲೂ, ಹಿಮಾಲಯದ ತಪ್ತ ಹಿಮಜಲದಿಂದಲೂ ನವೀನವೃಷ್ಟಿಗಳಿಂದಲೂ ನಿತ್ಯ ಪುಷ್ಟವಾದ ಗಂಗಾ-ಯಮುನೆಗಳೂ ವೇಗದಿಂದ ಪ್ರವಹಿಸಿ ಸಮುದ್ರಗಾಮಿ

ಗಳಾಗದಿದ್ದರೆ ಭಯಂಕರ ನಕ್ರಗಳಿಗೂ ನಾಗಗಳಿಗೂ ಆಶ್ರಯಭೂತವಾದ ಮಹಾಗರ್ತಗಳಾಗಿ ವಿಷಪೂರಿತವಾಗುತ್ತವೆ. ಪರ್ವತೋಪಮ ಮಾನವನ ಬುದ್ಧಿಶಕ್ತಿ ಮೊದಲಾದುವುಗಳಿಂದ ನಿತ್ಯವೂ ಸಂಪಾದಿತವಾದ ಐಶ್ವರ್ಯ ಪ್ರವಾಹವು ಯಜ್ಞದಾನಗಳ ಔದಾರ್ಯದಿಂದ ಸಾರ್ವಜನಿಕ ಸಾಗರವನ್ನು ಸೇರದೇ ಒಂದೊಂದು ವ್ಯಕ್ತಿಯಲ್ಲಿ ಸಂಗ್ರಹವಾದರೆ ಸಮಾಜಘಾತಕವಾದ ದುಷ್ಟಶಕ್ತಿಗಳನ್ನು ಬೆಳೆಸುವ ತೌರಾಗುತ್ತದೆ. ವ್ಯಕ್ತಿಯ ಶಾಂತಿಗೂ ವಿಶ್ವ ಕ್ಷೇಮಕ್ಕೂ ಬಾಧಕವಾದ ಆರ್ಥಿಕ ವಿಷಮತೆಯನ್ನು ಪರಿಹರಿಸುವುದಕ್ಕಾಗಿಯೇ ರಷ್ಯಾದಲ್ಲಿ ರಕ್ತಮಯವಾದ ಮಹಾರುದ್ರಕ್ರಾಂತಿಯಾಯಿತು. ಆದರೆ ಶಾಂತಿ ಮಯವಾದ ಸನಾತನ ಧರ್ಮದಲ್ಲಿ ಸಂಗ್ರಹದ ಪ್ರಾಯಶ್ಚಿತ್ತಾರ್ಥವಾಗಿಯೂ ಆರ್ಥಿಕ ವಿಷಮತೆಯ ನಿವಾರಣಾರ್ಥವಾಗಿಯೂ ಲೋಕಹಿತಾರ್ಥವಾಗಿಯೂ ಅಹಿಂಸಾತ್ಮಕವಾದ ಯಜ್ಞದಾನಗಳು ಏರ್ಪಟ್ಟಿವೆ. (ಈ ನಮ್ಮ ಭಾರತವು ಮಹಾ ದಾನವೀರರಾದ ಶಿಬಿ, ಹರಿಶ್ಚಂದ್ರ, ಬಲಿ, ಕರ್ಣ ಮೊದಲಾದವರು ಬಾಳಿ ಕೀರ್ತಿಶಾಲಿಗಳಾದ ಪುಣ್ಯಭೂಮಿ.)

ಈ ಯಜ್ಞದಾನಗಳ ಮಹಿಮೆಯಿಂದಲೇ ಸಂಕುಚಿತವಾದ ವ್ಯಷ್ಟಿ ಶಕ್ತಿಯು ವ್ಯಾಪಕವಾದ ಸಮಷ್ಟಿಶಕ್ತಿಯಾಗುತ್ತದೆ.

ಲೋಕದಲ್ಲಿ ಪಾಪ-ತಾಪಗಳೂ, ದುಃಖ-ದಾರಿದ್ರ್ಯಗಳೂ, ಕಷ್ಟ-ಕಾರ್ಪಣ್ಯಗಳೂ ಅತಿಶಯವಾಗಿವೆ. ಇವುಗಳನ್ನೆಲ್ಲಾ ಕಳೆದು ಲೋಕಕಲ್ಯಾಣ ಮಾಡಬೇಕೆಂಬ ಉದಾತ್ತಭಾವನೆಯೂ ಶ್ಲಾಘ್ಯವಾದುದು. ಲೋಕಕಲ್ಯಾಣಕ್ಕೆ ಯಜ್ಞ-ದಾನಗಳೇ ಮುಖ್ಯ ಸಾಧನಗಳು. ಯಜ್ಞದಾನಾದಿ ಸತ್ಕರ್ಮಗಳನ್ನು ಮಾಡಲು ಲೋಕಕಲ್ಯಾಣ ಮಾಡಬೇಕೆಂಬ ಸದಿಚ್ಛೆಯೇ ಪ್ರಚಂಡ ಪ್ರೇರಣಾ ಶಕ್ತಿಯು. ಆದರೆ ಜಗತ್ತಿಗೆ ಉಪಕಾರ ಮಾಡುವುದಕ್ಕಾಗಿ ಯಜ್ಞ-ದಾನಾದಿ ಗಳನ್ನು ಮಾಡುತ್ತಾ ಮಾಡುತ್ತಾ ಹೃದಯವು ಪವಿತ್ರವಾದಾಗ ಅವು ತನಗೇ ನಿಜವಾಗಿ ಉಪಕಾರಕವೆಂಬುದು ಲೋಕಸೇವಾನಿಷ್ಠನಿಗೆ ಅನುಭವಕ್ಕೆ ಬರುತ್ತದೆ. ಲೋಕಸೇವೆಯಿಂದ ಜನತೆಗೆ ಒಳ್ಳೆಯದನ್ನು ಮಾಡುವುದೆಂದರೆ ದೇಶದಲ್ಲಿ (ಇಷ್ಟಾಪೂರ್ತಾದಿಗಳನ್ನು) ಉಚಿತವಾದ ವಿದ್ಯಾಶಾಲೆಗಳನ್ನೂ, ವೈದ್ಯಶಾಲೆ ಗಳನ್ನೂ, ಉದ್ಯೋಗಕೇಂದ್ರಗಳನ್ನೂ, ಧರ್ಮಶಾಲೆಗಳನ್ನೂ, ಕಲಾಮಂದಿರ ಗಳನ್ನೂ ಸ್ಥಾಪನೆಮಾಡುವುದೂ, ಸರೋವರ ಮೊದಲಾದ ಜಲಾಶಯಗಳನ್ನೂ

ದೇವಾಲಯಗಳನ್ನೂ ಕಟ್ಟಿಸುವುದೂ, ದೀನದರಿದ್ರರಿಗೆ ಭೂದಾನ ಗೋದಾನಾದಿಗಳನ್ನು ಮಾಡುವುದೂ, ನಿರುದ್ಯೋಗಿಗಳೂ, ನಿರಾಹಾರಿಗಳೂ, ನಿರ್ಧನರೂ, ನೀತಿಭ್ರಷ್ಟರೂ ನೀಚರೂ ಇಲ್ಲದಂತೆ ಮಾಡುವುದು ಮೊದಲಾದವುಗಳಾಗಿವೆ.

ಆದರೆ ನಿಜದೃಷ್ಟಿಯಿಂದ ವಿಚಾರಮಾಡಿದರೆ ಲೋಕದ ಕಷ್ಟಕಾರ್ಪಣ್ಯಗಳನ್ನೂ ದುಃಖದೈನ್ಯಗಳನ್ನೂ ಸರ್ವಥಾ ಕಳೆದು ಶಾಶ್ವತವಾದ ಸುಖಸಂಪತ್ತನ್ನು ಸರ್ವರಿಗೂ ನೀಡುವುದೆಂಬುದು ಎಂದಿಗಾದರೂ ಸಾಧ್ಯವಾಗಬಹುದೇ? ಎಂದು ಸಂದೇಹವಾಗುತ್ತದೆ. ಏಕೆಂದರೆ ಅತ್ಯಂತ ಪ್ರಾಚೀನಕಾಲದಿಂದಲೂ ಪ್ರಪಂಚದ ಚರಿತ್ರೆಯನ್ನು ನೋಡಿದರೆ, ಆ ಬಗೆಯ ಶಾಶ್ವತವಾದ ಲೋಕಕಲ್ಯಾಣವನ್ನು ಸಾಧಿಸುವುದೆಂಬುದು ಯಾರಿಂದಲೂ ಇದುವರೆಗೆ ಸಾಧ್ಯವಾದಂತೆ ತೋರುವುದಿಲ್ಲ. ಶಾಶ್ವತದ ಮಾತೂ ಇರಲಿ, ಸಹಸ್ರಾರು ವರ್ಷಗಳಾದರೂ ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ವರ್ಗಭೇದಗಳೂ ಅಧಿಕಾರಭೇದಗಳೂ ಆರ್ಥಿಕ ವೈಷಮ್ಯಗಳೂ ದ್ವೇಷಾಸೂಯೆಗಳೂ ಅನ್ಯಾಯ ಅನೀತಿಗಳೂ ನಾಶವಾಗಿ ಅಖಂಡವಾದ ಸುಖಶಾಂತಿಗಳು ನೆಲೆಸಿದುದು ಕಂಡುಬರುವುದಿಲ್ಲ.

ಅಘಟಿತಘಟನಾ ಸಮರ್ಥರಾದ ವಸಿಷ್ಠ, ವ್ಯಾಸ, ವಿಶ್ವಾಮಿತ್ರಾದಿ ಮಹಾ ತಪಸ್ಸಿದ್ಧರ ಜನನವಾಯಿತು. '**ಕರ್ತುಮಕರ್ತುಮನ್ಯಥಾ ಕರ್ತುಂ**' ಶಕ್ತರಾದ ಶ್ರೀರಾಮ ಶ್ರೀ ಕೃಷ್ಣಾದಿ ಭಗವದಂಶ ಸಂಭೂತರ ಅವತಾರವಾಯಿತು; ಬುದ್ಧ, ಮಹಾವೀರ, ಕ್ರಿಸ್ತ, ಮಹಮ್ಮದ, ಶಂಕರ ಮೊದಲಾದ ಮಹಾ ಮತಸ್ಥಾಪಕ ಆಚಾರ್ಯ ಪುರುಷರ ಉದಯವಾಯಿತು; ಸೃಷ್ಟಿಯ ಆರಂಭದಿಂದ ಇದುವರೆಗೆ ಲಕ್ಷೋಪಲಕ್ಷ ಕಾರಣಿಕ ಪುರುಷರಾದ ಯೋಗೀಶ್ವರರ ಆವಿರ್ಭಾವವಾಗಿರಬಹುದು. ಈ ಮಹಾತ್ಮರೆಲ್ಲರೂ ಲೋಕಕಲ್ಯಾಣರೂಪ ಮಹಾ ಯಜ್ಞವನ್ನೇ ಅನಂತಕಾಲ ನಡೆಸಿ ಧರ್ಮಸಾಧನೆಗಳನ್ನೂ ಬ್ರಹ್ಮಜ್ಞಾನವನ್ನೂ ಲೋಕಕ್ಕೆ ದಾನಮಾಡಿರುವುದಲ್ಲದೇ ಅದ್ಭುತವಾದ ತಮ್ಮ ಅಲೌಕಿಕ ಶಕ್ತಿಗಳನ್ನೂ ಪ್ರದರ್ಶನಮಾಡಿದ್ದಾರೆ. ಆದರೂ ಜಗತ್ತು ಮೊದಲಿನಂತೆಯೇ ಅಥವಾ ಮತ್ತೂ ಮಿಗಿಲಾಗಿ ಇಂದಿಗೂ ದಾರುಣವಾದ ದುಃಖದಾರಿದ್ರ್ಯಗಳಿಂದಲೂ ಭಯಂಕರವಾದ ಪಾಪ-ತಾಪಗಳಿಂದಲೂ ತುಂಬಿಕೊಂಡೇ ಇದೆ.

ಹಗಲು-ರಾತ್ರಿಗಳೂ, ಬೆಳಕು-ಕತ್ತಲುಗಳೂ, ಶುಕ್ಲಪಕ್ಷ-ಕೃಷ್ಣಪಕ್ಷಗಳೂ ವೃದ್ಧಿ-ಕ್ಷಯುಗಳೂ ಜನನ-ಮರಣಗಳೂ ತಪ್ಪದೇ ಜಗತ್ತಿನಲ್ಲಿ ಕಾಲಚಕ್ರಗತಿಯಿಂದ ತಿರುಗುತ್ತಿರುವಂತೆ ಪುಣ್ಯ-ಪಾಪ, ಸುಖ-ದುಃಖ, ಹರ್ಷ-ಶೋಕಗಳ ಪರಂಪರೆಯ ಪರಿವರ್ತನೆಯೂ ಇದೆ. ಈ ದ್ವಂದ್ವಗಳು ಸೃಷ್ಟಿಮೂಲವಾದ ಪ್ರಕೃತಿ-ಪುರುಷರ ವಿಲಾಸವಾದ್ದರಿಂದ ಲೌಕಿಕ ನಿತ್ಯಗಳು. ವೈಜ್ಞಾನಿಕವಾಗಿ ಇದನ್ನೇ 'Polarity of things' ಎನ್ನುತ್ತಾರೆ. ಸರ್ವಭೌತಿಕ ಪದಾರ್ಥಗಳೂ ಆಯಾ ಪದಾರ್ಥಗಳ ಪರಮಾಣುಗಳಿಂದ ರಚಿತವಾಗಿವೆ. ಆ ಪರಮಾಣುಗಳು ವಿದ್ಯುತ್ಕಣಗಳಿಂದಲೂ, ವಿದ್ಯುತ್ತಿನ ಋಣಧನಗಳಿಂದಲೂ ಕೂಡಿವೆ. ಋಣವಿದ್ಯುತ್ತನ್ನು ಕಳೆದರೆ ಧನವೂ, ಧನವನ್ನು ಕಳೆದರೆ ಋಣವೂ ಉಳಿಯುವುದಿಲ್ಲ. ಸಾಪೇಕ್ಷವಾಗಿ ಒಂದನ್ನು ಕಳೆದರೆ ಮತ್ತೊಂದೂ ಅಳಿಯಬೇಕು. ಆದರೆ ಈ ದ್ವಂದ್ವಪರಂಪರೆಯು ನಿರಂತರವಾದುದರಿಂದ ದ್ವಂದ್ವದಲ್ಲಿ ಒಂದನ್ನೂ ಪೂರ್ಣವಾಗಿ ಕಳೆಯಲು ಸಾಧ್ಯವಿಲ್ಲ. ಶಾಶ್ವತವಾಗಿ ಸರ್ವರ ಸಂಪೂರ್ಣ ದುಃಖನಾಶವನ್ನು ಮಾಡಿ ಲೋಕಕಲ್ಯಾಣ ಮಾಡುವುದೆಂದರೆ ಆ ಸ್ಥಿತಿಯಲ್ಲಿ ಲೋಕವೇ ಉಳಿಯುವುದಿಲ್ಲ. ಸರ್ವೋದಯ ಸರ್ವಮುಕ್ತಿರೂಪವಾದ ಲೋಕಕಲ್ಯಾಣ ಸಾಧ್ಯವಿದ್ದರೆ ಈ ಜಗತ್ತು ಹೀಗಿರುತ್ತಿರಲೇ ಇಲ್ಲ. ಆದರೂ ಜಗತ್ತಿನ ಭಯ-ದುಃಖಗಳನ್ನು ಶಮನಮಾಡಿ, ಅಭಯ-ಸುಖಗಳನ್ನು ವೃದ್ಧಿಮಾಡುವ ಅಖಂಡ ಪ್ರಯತ್ನವೂ ನಿತ್ಯೋತ್ಸಾಹದಿಂದ ನಡೆದೇ ಇದೆ, ನಡೆಯಲೇಬೇಕು. ಇದು ದ್ವಂದ್ವಾತ್ಮಕ ಜಗತ್ತಿನ ಮಂಗಳಕರವಾದ ಉದಯೋನ್ಮುಖ ವಿಲಾಸ; ಪ್ರಕೃತಿಮಂಡಲದಲ್ಲಿ ಸತ್ತ್ವೋತ್ಕರ್ಷವಾದುದರ ಪ್ರಭಾವ.

ಆದರೆ ದೈವಾಸುರ ಶಕ್ತಿಗಳ ಎಡೆಬಿಡದ ಹೋರಾಟವೇ ಈ ಜಗತ್ತು. ಈ ಅನಾದ್ಯನಂತವಾದ ಸಂಗ್ರಾಮದಲ್ಲಿ ಒಮ್ಮೆ ದೈವೀಶಕ್ತಿಯು ವಿಜಯಶಾಲಿಯಾಗಿ ವಿಜೃಂಭಿಸಿದರೆ, ಇನ್ನೊಮ್ಮೆ ಆಸುರೀಶಕ್ತಿಯು ಪ್ರಚಂಡವಾಗಿ ಪ್ರಳಯಭೈರವನರ್ತನ ಮಾಡುತ್ತದೆ. ಪುನಃ ಆ ಆಸುರೀ ಪ್ರಳಯಾಟ್ಟಹಾಸವನ್ನು ಪರಾಭವಗೊಳಿಸಿ ದೈವೀಪ್ರಭಾವವು ಪರಮಾಧಿಕವಾಗಿ ವಿರಾಜಿಸುತ್ತದೆ. ಮಾನವೇತಿಹಾಸವನ್ನು ತೆಗೆದುಕೊಂಡರೆ ಎಂದಿನಿಂದಲೂ ಸುಖದುಃಖಗಳ ಒಟ್ಟು ಮೊತ್ತವು ಜಗತ್ತಿನಲ್ಲಿ ಒಂದೇ ಆಗಿ ಕಾಣುತ್ತದೆ. ಸತ್ತ್ವಗುಣಾಂಶವು

ಅಧಿಕವಾಗಿ ಧರ್ಮಶಕ್ತಿಯ ಬಲವು ಹೆಚ್ಚಾಗಿದ್ದಂಥ ಕೃತ-ತ್ರೇತಾಯುಗಗಳಲ್ಲಿ ಕೂಡ ದೈವಾಸುರ ಶಕ್ತಿಗಳ ಸ್ಪರ್ಧೆಗಳೂ ಯುದ್ಧಗಳೂ ತಪ್ಪದೇ ನಡೆದೇ ಇದ್ದವು.

ಆದ್ದರಿಂದ ದಾನಮಾಡತಕ್ಕ ಶ್ರೀಮಂತರಾರೂ ಲೋಕದ ದುಃಖ-ದಾರಿದ್ರ್ಯಗಳನ್ನು ಕಳೆಯುವ ಉಪಕಾರಕ ಮನೋಭಾವದಿಂದ ಉದ್ಧಟ ಪೀಠದಲ್ಲಿ ನಿಂತು ದಾನ ಮಾಡದೇ ವಿನಯದಿಂದ ಕೆಳಗಿಳಿದು ಪೂಜ್ಯ ಪೀಠಕ್ಕೆ ದೀನ-ದರಿದ್ರನಾರಾಯಣನನ್ನು ಕೈಹಿಡಿದೇರಿಸಿ, ತಮ್ಮ ಧನ್ಯತೆಗಾಗಿ ಪೂಜಾ ಸೇವೆಗಳನ್ನು ಭಕ್ತಿಯಿಂದ ಸಮರ್ಪಿಸಬೇಕು. ಪೂಜಾಪ್ರಸಾದವನ್ನು ಪಡೆದು ಅನುಗ್ರಹೀತನಾಗುವವನು ದಾನ ಕೊಡತಕ್ಕವನೇ ಹೊರತು ದಾನ ಕೊಳ್ಳುವವನಲ್ಲ. ಆದ್ದರಿಂದ ಪಾರಮಾರ್ಥಿಕವಾಗಿ ಉಪಕಾರವಾಗುವುದು ದಾನಿಗೇ ಹೊರತು ಪ್ರತಿಗ್ರಹಿಗಲ್ಲ.

ಶ್ರೀಮಂತನು ತನ್ನಲ್ಲಿರುವ ಐಶ್ವರ್ಯದ ಸಂರಕ್ಷಕನೇ ಹೊರತು ಸ್ವಾಮಿಯಲ್ಲ. ಸಮಾಜದ ಹಿತಕ್ಕಾಗಿ ತನ್ನ ಧನವನ್ನು ಹಂಚಿ, ಸದ್ವಿನಿಯೋಗ ಮಾಡುವ ಹೊಣೆಗಾರಿಕೆಯುಳ್ಳ ಆರ್ಥಿಕ ಧರ್ಮದರ್ಶಿ ಅವನು. ಇದನ್ನು ನೆನಪು ಕೊಡುವುದಕ್ಕಾಗಿಯೇ ಪುರೋಹಿತರು ದಾನಕೊಡಿಸಿದ ಕೂಡಲೇ **"ಇದಂ ನಮಮ ನಮಮ "**—ಇದು ನನ್ನದಲ್ಲ ನನ್ನದಲ್ಲ-ಎನ್ನಿಸುತ್ತಾರೆ. ಈ ಮಂತ್ರವು ದತ್ತವಸ್ತುವಿನ ಸ್ವಾಮಿತ್ವವನ್ನು ನಿರಾಕರಣೆ ಮಾಡುತ್ತದೆ.

ಈ ಜಗತ್ತೇ ಒಂದು ಮಹತ್ತಾದ ಪರೀಕ್ಷಾ-ಪ್ರಯೋಗ-ಸಾಧನ ಮಂದಿರ. ಜನತೆಯೊಡನೆ ಮಾಡುವ ವ್ಯವಹಾರದಿಂದ ನಮ್ಮ ಹೃದಯವನ್ನು ನಾವೇ ಪರೀಕ್ಷೆ ಮಾಡಿಕೊಂಡು, ಅದರಲ್ಲಿರುವ ಗುಣ-ದೋಷಗಳನ್ನೂ ಶಕ್ತಿಗಳನ್ನೂ ತಿಳಿದು, ಸರ್ವದೋಷಗಳನ್ನೂ ನುಂಗಿ ನೀರು ಕುಡಿಯುವ ಸತ್ಯ-ಧರ್ಮ-ವಿಶ್ವಪ್ರೇಮಗಳೆಂಬ ತತ್ವತ್ರಯಗಳ ನಿಷ್ಠೆಯನ್ನು ನಮ್ಮ ವ್ಯವಹಾರದಲ್ಲಿ ಪ್ರಯೋಗಮಾಡಿ, ತ್ಯಾಗ, ಔದಾರ್ಯ, ನಿಸ್ವಾರ್ಥತಾ, ನಯ, ವಿನಯ, ದಯ ಮೊದಲಾದ ಸದ್ಗುಣಗಳನ್ನು ಬೆಳೆಸಿಕೊಂಡು ಈ ವಿಶ್ವಸಾಧನ ಮಂದಿರದಲ್ಲಿ ನಿರಭಿಮಾನ, ನಿಸ್ಸಂಗ, ನಿಷ್ಕಾಮ, ನಿತ್ಯೋತ್ಸಾಹ, ನಿತ್ಯಸೇವಾ, ನಿತ್ಯಾನಂದ ಮೊದಲಾದ ಸದ್‌ವೃತ್ತಿಗಳನ್ನು ಸಾಧನ ಮಾಡಬೇಕು.

ಆದ್ದರಿಂದ ಯಜ್ಞದಾನಾದಿ ಸತ್ಕರ್ಮಗಳನ್ನು ಮಾಡುವುದು ನಮ್ಮ ಉಪಕಾರಕ್ಕಾಗಿಯೇ ಹೊರತು ಜಗತ್ತಿನ ಉಪಕಾರಕ್ಕಾಗಿ ಅಲ್ಲ. ಜಗತ್ತಿನ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕೆ ಸೃಷ್ಟಿ ಸ್ಥಿತಿಕರ್ತನಾದ ಸರ್ವಜ್ಞ, ಸರ್ವಶಕ್ತ ಪರಮೇಶ್ವರನಿರುವುದರಿಂದ ಯಾರೊಬ್ಬರ ಕೈಯನ್ನೂ ಕಾಯುತ್ತಾ ವಿಶ್ವವ್ಯಾಪಾರವು ನಿಸ್ಸಹಾಯವಾಗಿ ನಡೆಯುತ್ತಿಲ್ಲ ಅಥವಾ ನಿಂತಿಲ್ಲ. ಮಹ ಮಹಾ ಅವತಾರ ಪುರುಷರು ಅಳಿದರೂ ವಿಶ್ವವ್ಯಾಪಾರವು ಮಾತ್ರ ಅಳಿಯದೇ ಬೆಳೆದೇ ಇದೆ. ನಿಸ್ವಾರ್ಥವಾಗಿ ಲೋಕಕಲ್ಯಾಣ ಮಾಡುವುದಕ್ಕಾಗಿಯೇ ತಮ್ಮ ಪ್ರಾಣಗಳನ್ನೂ ತೆತ್ತ ಸಹಸ್ರಾರು ಹುತಾತ್ಮರೂ ಮಹಾತ್ಮರೂ ಲೋಕ ದಲ್ಲಿ ಶಾಶ್ವತವಾಗಿ ರಾಮರಾಜ್ಯವನ್ನೂ ಭೂವೈಕುಂಠವನ್ನೂ ಸ್ಥಾಪನೆ ಮಾಡ ದಿದ್ದರೂ ತಮ್ಮ ತಮ್ಮ ಧನ್ಯತೆಯನ್ನಂತೂ ತಾವು ತಪ್ಪದೇ ಸಾಧಿಸಿಕೊಂಡರು.

ಆದ್ದರಿಂದ ಕರ್ಮಯೋಗದಲ್ಲಿ ಸಕರ್ತೃಕ ದೃಷ್ಟಿಯು (Subjective aspect) ಪ್ರಧಾನವೇ ಹೊರತು ಸವಿಷಯಕ ದೃಷ್ಟಿಯು (Objective aspect) ಮುಖ್ಯವಲ್ಲ. ಕರ್ಮಯೋಗದಲ್ಲಿ ಆತ್ಮಹಿತಸಾಧನೆಯೂ ಲೋಕ ಹಿತಸಾಧನೆಯೂ ಎರಡೂ ಇದ್ದರೂ ಕರ್ಮಯೋಗವು ಹೆಚ್ಚು ಆತ್ಮಹಿತ ಸಾಧನೆಗೇ ಸಂಬಂಧಪಟ್ಟಿದೆ. ಬ್ರಹ್ಮಪ್ರಾಪ್ತಿಗೆ ಸಾಧನವಾಗುವ ಕರ್ಮ ಯೋಗವು ವೈಯಕ್ತಿಕವೇ ಹೊರತು ಸಾಮೂಹಿಕವಲ್ಲ.

ತೆರೆಗಳೂ ಉಬ್ಬರವಿಳಿತಗಳೂ ಇಲ್ಲದ ಸಮುದ್ರವು ಎಲ್ಲಿಯೂ ಇರದಂತೆ ಸುಖ-ದುಃಖಗಳು ಇಲ್ಲದ ಸಂಸಾರವಿಲ್ಲ. ಸಂಸಾರ ಶರಧಿಯ ಉಬ್ಬರವಾದ ಸುಖದ ಕಡೆ ದೃಷ್ಟಿಯುಳ್ಳವರು ಆಶಾವಾದಿಗಳಾಗಿಯೂ ಇಳಿತವಾದ ದುಃಖದ ಕಡೆ ದೃಷ್ಟಿಯುಳ್ಳವರು ನಿರಾಶಾವಾದಿಗಳಾಗಿಯೂ ತತ್ತ್ವದೃಷ್ಟಿಯುಳ್ಳವರು ಸರ್ವಕ್ಕೂ ಬ್ರಹ್ಮವಾದಿಗಳಾಗಿಯೂ ಆಗುತ್ತಾರೆ.

ದಾನಧರ್ಮಗಳನ್ನು ಮಾಡುವ ಲೌಕಿಕ ಕರ್ಮಿಯು ಉಪಕಾರವನ್ನು ಹೊಂದುವವನಿಂದ ಏನನ್ನೂ ಬಯಸದಿದ್ದರೂ ಕೊನೆಗೆ ಕೃತಜ್ಞತೆಯನ್ನಾದರೂ ಬಯಸದೇ ಬಿಡುವುದಿಲ್ಲ. ಆದರೆ ಅಧ್ಯಾತ್ಮಿಯಾದ ಕರ್ಮಯೋಗಿಯು ತನ್ನ ಕೃತಾರ್ಥತೆಯ ಸಾಧನೆಗಾಗಿ ದಾನಮಾಡುವಾಗ ಪ್ರತಿಗ್ರಹಮಾಡುವವನಿಂದ ಕೃತಜ್ಞತೆಯನ್ನು ಸಹ ನಿರೀಕ್ಷಿಸಬಾರದು. ತನ್ನ ದಾನಸಾಧನೆಗೆ ದಯೆಯಿಂದ

ಅಥವಾ ದೈನ್ಯದಿಂದ ಅವಕಾಶ ಕಲ್ಪಿಸಿಕೊಟ್ಟುದಕ್ಕಾಗಿ ತಾನೇ ಅವನಿಗೆ ಕೃತಜ್ಞನಾಗಿರಬೇಕು. ಪರರಿಗೆ ಸಹಾಯ ಅಥವಾ ಉಪಕಾರ ಮಾಡುವುದೆಂಬ ಲೋಕರೂಢಿಯ ಭಾವದಲ್ಲಿ ಅಹಂಕಾರದ ದುರ್ಗಂಧವಿದೆ. ಆದರೆ ಕರ್ಮಯೋಗಿಯ ಯಜ್ಞದಾನಗಳಲ್ಲಿ ನಯ ವಿನಯ ಸೌಜನ್ಯಾದಿ ಮಧುರ ಗುಣಗಳ ಸೌರಭವಿದೆ. ನ್ಯಾಯವಾಗಿಯೋ ಅನ್ಯಾಯವಾಗಿಯೋ ತಾನು ಮಾಡಿರುವ ವಸ್ತು-ಶಕ್ತಿಗಳ ಸಂಗ್ರಹವು ಮಿಕ್ಕವರಿಂದ ತಾನು ಮಾಡಿರುವ ಅಪಹರಣವೆಂದು ತಿಳಿದರೆ ದಾನಿಯಲ್ಲಿ ಅಹಂಕಾರಕ್ಕೆ ಬದಲು ನಾಚಿಕೆಯೂ, ನಯವೂ, ವಿನಯವೂ, ದಾನಕೊಳ್ಳುವನ ವಿಷಯದಲ್ಲಿ ಕೃತಜ್ಞತೆಯೂ ಮೂಡುತ್ತವೆ. ಪರಿಗ್ರಹವು ಕಳ್ಳತನವಾದ್ದರಿಂದ ದಾನವೇ ಅದರ ಪ್ರಾಯಶ್ಚಿತ್ತ.

ದಾನ ಮಾಡುವವನು ಸದ್ವಿನಿಯೋಗ ಮಾಡುವ ಸತ್ಪಾತ್ರನಿಗೆ ಯೋಗ್ಯವಾದ ದೇಶಕಾಲಗಳಲ್ಲಿ ದಾನಮಾಡಬೇಕು. “**ದಾನಂ ಪ್ರಿಯವಾಕ್ ಸಹಿತಂ**” ಎಂದೂ “**ಪ್ರದಾನಂ ಪ್ರಚ್ಛನ್ನಂ**” ಎಂದೂ ನೀತಿವಿದರು ಹೇಳುವಂತೆ ಪ್ರಿಯಭಾಷಣಪೂರ್ವಕವಾಗಿ ದಾನಮಾಡಬೇಕಲ್ಲದೆ ಮಹತ್ತಾಗಿ ದಾನಮಾಡಿದರೂ ಪ್ರದರ್ಶನಾಪೇಕ್ಷೆಯಾಗಲೀ ಕೀರ್ತಿಕಾಂಕ್ಷೆಯಾಗಲೀ ಇಲ್ಲದೆ ದಾನಮಾಡಬೇಕು. ಮಹಾತ್ಮಾ ಏಸುಕ್ರಿಸ್ತನು ಹೇಳುವಂತೆ ಬಲಗೈ ದಾನ ಮಾಡಿದುದನ್ನು ತನ್ನ ಎಡಗೈಯೇ ತಿಳಿಯದಂತೆ ದಾನಮಾಡಬೇಕು. ಪ್ರತಿಗ್ರಹ ಮಾಡುವವನನ್ನು ಭಗವದ್ಭಾವನೆಯಿಂದ ಕಂಡು ದಾನಮಾಡಬೇಕು. ಹೀಗೆ ಮಾಡುವ ದಾನವು ಸಾತ್ವಿಕವು.

ಪ್ರತ್ಯುಪಕಾರವನ್ನಾಗಲೀ ಫಲವನ್ನಾಗಲೀ ಬಯಸಿ ಲೋಭದಿಂದಾಗಲೀ ವ್ಯಥೆಯಿಂದಾಗಲೀ ಮಾಡುವ ದಾನವು ರಾಜಸವು.

ಅಯೋಗ್ಯವಾದ ದೇಶಕಾಲಗಳಲ್ಲಿ ಅಪಾತ್ರನಿಗೆ ಆದರವಿಲ್ಲದೆ ಅವಮಾನಪೂರ್ವಕವಾಗಿ ಮಾಡಿದ ದಾನವು ತಾಮಸವು.

ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳುವುದೇನೆಂದರೆ; “**ಶ್ರದ್ಧಯಾ ದೇಯಂ । ಅಶ್ರದ್ಧಯಾ ಅದೇಯಂ । ಶ್ರಿಯಾ ದೇಯಂ । ಹ್ರಿಯಾ ದೇಯಂ । ಭಿಯಾ ದೇಯಂ । ಸಂವಿದಾ ದೇಯಂ ।**”

“ಕೊಡುವುದನ್ನು ಶ್ರದ್ಧೆಯಿಂದ ಕೊಡಬೇಕು, ಅಶ್ರದ್ಧೆಯಿಂದ ಕೊಡಬಾರದು;

ಸಮೃದ್ಧಿಯಾಗಿ ಕೊಡಬೇಕು; ತಾನು ಕೊಡುವುದು ಅತ್ಯಲ್ಪವೆಂಬ ಭಾ
ಲಜ್ಜೆಯಿಂದ ಕೊಡಬೇಕು; ಭಯಭಕ್ತಿಯಿಂದ ಕೊಡಬೇಕು; ಕರುಣೆ
ಕೊಡಬೇಕು."

ದ್ರವ್ಯದಾನಗಳಲ್ಲಿ "**ನಾನ್ನೋದಕ ಸಮಂ ದಾನಂ**" ಅನ್ನ
ಸಮವಾದ ದಾನವು ಇನ್ನೊಂದಿಲ್ಲ. ಮಹಾ ಯಜ್ಞಗಳು ಪರಿಪೂರ್ತಿ
ವುದೂ ಸಾರ್ಥಕಗೊಳ್ಳುವುದೂ ಪ್ರಭೂತವಾದ ಅನ್ನದಾನದಿಂದಲೇ. ಪ
ವಿದ್ಯಾಸಂಸ್ಕೃತಿಗಳ ಪ್ರಭಾವದಿಂದ ಈಚಿಗೆ ನಮ್ಮ ದೇಶದಲ್ಲಿಯೂ ಅನ್ನ
ದಲ್ಲಿ ಅಶ್ರದ್ಧೆಯುಂಟಾಗುತ್ತಿದ್ದರೂ ಈಶ್ವರಾನುಗ್ರಹದಿಂದಲೂ, ಮಹಾ
ಆಶೀರ್ವಾದಬಲದಿಂದಲೂ ಸನಾತನಧರ್ಮದ ಪ್ರಭಾವವು ಇನ್ನೂ ಉಳಿ
ನಮ್ಮ ಭಾರತದಲ್ಲಿ ಭಯಂಕರವಾದ ಆಹಾರಕೊರತೆಯ ಕಾಲದಲ್ಲಿಯೂ
ಕಲ್ಯಾಣಾರ್ಥವಾದ ಯಜ್ಞಗಳೂ ತದಂಗವಾದ ಅನ್ನದಾನಗಳೂ
ಭೋಜನಗಳೂ ನಡೆದೇ ಇದ್ದವು.

ಒಂದು ದಿನ ಮಾತ್ರ ತೃಪ್ತಿಯೀಯುವ ಅನ್ನದಾನಕ್ಕಿಂತಲೂ ನಿ
ಅನ್ನವನ್ನು ಉತ್ಪತ್ತಿಮಾಡುವ ಭೂಮಿ ಮೊದಲಾದ ಉತ್ಪಾದನಾ ಸ
ಗಳನ್ನು ದಾನಮಾಡುವುದು ಶ್ರೇಷ್ಠವು.

ಆದರೆ ತಾತ್ಕಾಲಿಕವಾದ ತೃಪ್ತಿಯನ್ನುಂಟುಮಾಡುವ ಈ ಅನ್ನ
ದಾನಕ್ಕಿಂತಲೂ ಲೌಕಿಕವಾದ ಸರ್ವಾರ್ಥಸಾಧಕವಾದ ವಿದ್ಯಾದಾ
ಶ್ರೇಷ್ಠವು. ಲೌಕಿಕ ವಿದ್ಯಾದಾನಕ್ಕಿಂತಲೂ ಬಂಧವಿಮೋಚನೆಯನ್ನು
ನಿತ್ಯತೃಪ್ತಿಯನ್ನು ಕೊಡುವ ಅಧ್ಯಾತ್ಮವಿದ್ಯಾದಾನವು ಪರಮಶ್ರೇಷ್ಠವು.
ಯಲ್ಲಿಯೂ ಪರಮಾತ್ಮನು "**ಅಧ್ಯಾತ್ಮ ವಿದ್ಯಾ ವಿದ್ಯಾನಾಂ**"
ಹೇಳಿದ್ದಾನೆ.

ದಾನಕ್ಕೆ ಹೃದಯದಲ್ಲಿ ಪ್ರಿಯವೂ ಹೊರಗೆ ತ್ಯಾಗವೂ ಬೇಕು. "
**ಶ್ಚೇತ್ ಸುಗುಣೇನ ಕಿಂ**" ತ್ಯಾಗಗುಣವೊಂದಿದ್ದರೆ ಬೇರೆ ಯಾವ ಸ
ದಿಂದೇನು? ಎಲ್ಲಾ ಸದ್ಗುಣಗಳಲ್ಲಿಯೂ ಶ್ರೇಷ್ಠವಾದುದು ತ್ಯಾಗ
ತ್ಯಾಗದಿಂದಲೇ ಯೋಗ; "**ತೇನ ತ್ಯಕ್ತೇನ ಭುಂಜೀಥಾಃ**"
ಈಶೋಪನಿಷತ್ತಿನಂತೆ ತ್ಯಾಗದಿಂದಲೇ ನಿರ್ದುಷ್ಟವಾದ ಭೋಗ;

ದಿಂದಲೇ ಸಂಕುಚಿತ ಸ್ವಾರ್ಥದ ನಾಶ; ತ್ಯಾಗದಿಂದಲೇ ಹೃದಯ ವಿಕಾಸ, ತ್ಯಾಗದಿಂದಲೇ ಪಾಪಕ್ಷಯ ಮತ್ತು ವಿಶ್ವಪ್ರೇಮ ಸಾಧನೆ.

ಇವರ ವಿರುದ್ಧ ಸುಭಾಷಿತಕಾರರು ಹೇಳುವಂತೆ **“ ಲೋಭಶ್ಚೇದ ಗುಣೇನ ಕಿಂ ”** ಲೋಭಗುಣವೊಂದಿದ್ದರೆ ಯಾವ ದುರ್ಗುಣದಿಂದೇನು ? ಎಲ್ಲಾ ದುರ್ಗುಣಗಳಲ್ಲಿಯೂ ನೀಚವಾದುದು ಲೋಭಗುಣ. ಲೋಭದಿಂದ ಸಂಕುಚಿತ ಭಾವವೂ, ಸ್ವಾರ್ಥವೂ ಬೆಳೆಯುತ್ತದೆ. ದುರ್ಗುಣ ವೃಕ್ಷಕ್ಕೆ ತಾಯಿಬೇರೇ ಲೋಭ. ತನ್ನ ಗಳಿಕೆಯಲ್ಲಿ ಎರಡನೆಯವರಿಗೆ ಒಂದು ಕುರುಡು ಕಾಸನ್ನೂ ಕೊಡಬಾರದೆಂಬ ಜಿಗುಟುತನವೇ ಲೋಭ. ಆತ್ಮನಾಶಕ್ಕಿರುವ ನರಕದ ಮೂರು ದ್ವಾರಗಳಲ್ಲಿ ಈ ಲೋಭಗುಣವೂ ಒಂದಾಗಿದೆ.

ಆದ್ದರಿಂದ ಆತ್ಮೋದ್ಧಾರವನ್ನು ಬಯಸುವ ಕರ್ಮಯೋಗಿಯು ಮಹಾ ತ್ಯಾಗಿಯೂ ಮಹಾದಾನಿಯೂ ಆಗಬೇಕು.

ಸತ್ಕರ್ಮ ಮಾಡತಕ್ಕವನಿಗೆ ಸದಭಿಮಾನವು ಬರುವುದು ಸ್ವಭಾವ ವಾಗಿದೆ. ಇದು ಅತ್ಯಂತ ಸೂಕ್ಷ್ಮವಾದ ಮಧುರ ಮಾಯೆ, ಬಂಗಾರದ ಸಂಕೋಲೆ, ಕಬ್ಬಿಣದ ಬೇಡಿಯಷ್ಟೇ ಅಥವಾ ಇನ್ನೂ ಹೆಚ್ಚಾಗಿ ಬಂಧಕ ವಾದುದು.

ಒಂದು ದೊಡ್ಡ ಗಿರಿದುರ್ಗವನ್ನು ನಿರ್ಮಾಣ ಮಾಡುವುದರಲ್ಲಿ ನಿಯೋ ಜಿತರಾಗಿದ್ದ ಸಹಸ್ರಾರು ಜನ ಕೆಲಸಗಾರರನ್ನು ಒಂದು ದಿನ ಮಧ್ಯಾಹ್ನ ಶಿವಾಜಿ ಮಹಾರಾಜನು ಎತ್ತರವಾದ ಗಿರಿಯ ಮೇಲೆ ನಿಂತು ನೋಡುತ್ತಾ ಇರುವಾಗ ಉದ್ಯೋಗವಿಲ್ಲದೆ ಸಾಯುತ್ತಿದ್ದ ಅಷ್ಟು ಸಹಸ್ರ ಜನರಿಗೆ ತಾನು ಉದ್ಯೋಗ ವನ್ನು ಒದಗಿಸಿ ಅನ್ನ ಹಾಕುತ್ತಿದ್ದೇನೆಂದು ಆ ರಾಜನಿಗೆ ಅಭಿಮಾನ ಬಂದಿ ತಂತೆ. ಆಗಲೇ ಸಮರ್ಥ ರಾಮದಾಸರು ಎಲ್ಲಿಂದಲೋ ಬಂದು ಅಲ್ಲಿಯೇ ಇದ್ದ ಒಂದು ಘನವಾದ ಬಂಡೆಯನ್ನು ಒಡೆಸಲು ಶಿವಾಜಿಗೆ ಹೇಳಿದರಂತೆ. ಶಿವಾಜಿಯು ತನ್ನ ಆಳುಗಳಿಂದ ಆ ಬಂಡೆಗಲ್ಲನ್ನು ಒಡೆಸಲು ಅದರ ಘನಗರ್ಭ ದಿಂದ ಒಂದು ಕಪ್ಪೆಯು ಪುಳಕ್ಕನೆ ಕುಪ್ಪಳಿಸಿ ಈಚೆಗೆ ಹಾರಿಬಂದಿತು. ಆ ಕಪ್ಪೆಯು ಕುಳಿತಿದ್ದ ಬಂಡೆಯ ಪದರಿನಲ್ಲಿ ಅದರ ಆಹಾರಕ್ಕಾಗಿ ಸ್ವಲ್ಪ ನೀರೂ ಪಾಚಿಯೂ ಇದ್ದುದನ್ನು ಎಲ್ಲರೂ ಕಂಡರು. ಎಲ್ಲರಿಗೂ ಆಶ್ಚರ್ಯವಾಯಿತು.

“ ಈ ಕಪ್ಪೆಗೂ ಇಲ್ಲಿ ನೀನೇ ಅನ್ನ-ನೀರುಗಳನ್ನು ಕೊಟ್ಟು ಕಾಪಾಡುವೆ
ಎಂಬ ಪ್ರಶ್ನಾರ್ಥಕ ಭಾವದಿಂದ ಸಮರ್ಥರು ನಗುತ್ತಾ ಶಿವಾಜಿಯ
ವನ್ನು ನೋಡಿದರು. ಪರಿಶುದ್ಧ ಹೃದಯವುಳ್ಳ ಶಿವಾಜಿಗೆ ಗುರುಗಳ
ಅರ್ಥವಾಗಿ ತನ್ನಲ್ಲಿ ಅವಿವೇಕದಿಂದ ಉದಿಸಿದ್ದ ವ್ಯದುವಾದ ಅಭಿ
ನಾಚಿ ತಲೆತಗ್ಗಿಸಿ ನಮಸ್ಕರಿಸಿದನು.

ಕುರುಕ್ಷೇತ್ರದ ಯುದ್ಧಾನಂತರ ಧರ್ಮರಾಜಾದಿಗಳು ಮಾಡಿ
ಮಹಾ ಯಜ್ಞದಲ್ಲಿ ಸಮೃದ್ಧಿಯಾಗಿ ಅನ್ನದಾನವಾಯಿತು. ಉಂಡು
ರಾದ ಲಕ್ಷೋಪಲಕ್ಷ ಜನರು ಆ ಸಮಾರಾಧನೆಯು ಅಭೂತಪೂರ್ವ
ಅದ್ಭುತವೆಂದೂ ಬಾಯಿತುಂಬಾ ಹೊಗಳುತ್ತಾ ಇದ್ದರು. ಊಟಮಾ
ಪತ್ರಾವಳಿಗಳೇ ಪರ್ವತೋಪಮವಾಗಿ ಬಿದ್ದಿದ್ದವು. ಅದನ್ನು ನೋಡಿ
ರಾಜಾದಿಗಳಿಗೆ ತಾವು ಮಾಡಿದ ಮಹತ್ತಾದ ಯಜ್ಞದಾನಾದಿಗಳಲ್ಲಿ
ವಾದ ಅಭಿಮಾನವಂಕುರಿಸಿ ಮನಸ್ಸಿಗೆ ಉಲ್ಲಾಸವಾಯಿತು. ಆಗ
ವಳಿಯ ಪರ್ವತದಲ್ಲಿ ಒಳಹೊಕ್ಕು ಹೊರಹೊರಡುತ್ತಾ, ಎಂಜಲು ಗ
ಗಳಲ್ಲಿ ಹೊರಳಾಡುತ್ತಾ ತನ್ನ ಮೈಯ ಒಂದು ಮಗ್ಗುಲನ್ನು ಮಾತ್ರ
ದಿಂದ ನೋಡಿಕೊಳ್ಳುತ್ತಿದ್ದ ಒಂದು ಮುಂಗಸಿಯನ್ನು (ನಕುಲವನ್ನು)
ರಾಜಾದಿಗಳು ಕಂಡು ಬೆರಗಾದರು. ಅದರ ದೇಹದ ಒಂದು ಭಾ
ಸುವರ್ಣಮಯವಾಗಿತ್ತು. ಎಲ್ಲರೂ ಅದನ್ನೇ ಕುತೂಹಲದಿಂದ
ತ್ತಿರಲು ಆ ಮುಂಗಸಿಯು ಹೇಳುವುದಕ್ಕೆ ತೊಡಗಿತು. ಹಲವು ವ
ದುರ್ಭಿಕ್ಷವು ಬಂದ ಒಂದು ಗ್ರಾಮದಲ್ಲಿ ಬಡಬ್ರಾಹ್ಮಣ ಕುಟುಂಬ
ಬಹಳ ದಿನಗಳು ಆಹಾರವಿಲ್ಲದೇ ಸೊರಗಿ ಸಾಯುತ್ತಿರುವ ಕಾಲದಲ್ಲಿ
ಸ್ವಲ್ಪ ಹಿಟ್ಟು ಸಿಕ್ಕು ಅದರಿಂದ ರೊಟ್ಟಿಯನ್ನು ಮಾಡಿಕೊಂಡು ಮನೆ
ನಾಲ್ಕು ಜನರೂ ತಿನ್ನುವುದಕ್ಕೆ ಸಿದ್ಧರಾದಾಗ ಅಕಸ್ಮಾತ್ ಒಬ್ಬ ಅ
ಬಂದು ಬೇಡಿದನೆಂದೂ ಧರ್ಮಿಷ್ಠನಾದ ಯಜಮಾನನು ತನ್ನ ಭಾಗದ
ಯನ್ನು ಪೂರ್ಣವಾಗಿ ಆ ಅತಿಥಿಗೆ ಕೊಟ್ಟರೂ ಅವನು ತುಷ್ಟನಾಗದೇ
ಮತ್ತಷ್ಟು ಕೆರಳಿದ ಕಿಚ್ಚಿನಿಂದ ಹೆಚ್ಚು ಹೆಚ್ಚು ಬೇಡುತ್ತಿರಲು ಬ
ಪತ್ನಿಯೂ ಪುತ್ರನೂ ಸೊಸೆಯೂ ಕೂಡ ತಮ್ಮ ತಮ್ಮ ಭಾಗಗಳನ್ನು
ಕೊಟ್ಟು ತೃಪ್ತಿಪಡಿಸಿ ಆಹಾರವಿಲ್ಲದೇ ರಾತ್ರಿ ಆ ಕುಟುಂಬದವರೆಲ್ಲರ

ಯನ್ನು ಹೊಂದಿದರೆಂಬೂ ಅಕಸ್ಮಾತ್ ತಾನು ಅಲ್ಲಿಗೆ ಹೋಗಿ ಅಲ್ಲಿ ಬಿದ್ದಿದ್ದ ಅತಿಥಿಪ್ರಸಾದದ ಲೇಶವನ್ನು ತಿಂದಿದ್ದರಿಂದ ತನ್ನ ಅರ್ಧ ದೇಹವೇ ಸುವರ್ಣ ಮಯವಾಯಿತೆಂದೂ ಅಂದಿನಿಂದ ಇಂದಿನವರೆಗೂ ಮಿಕ್ಕ ಅರ್ಧ ದೇಹವನ್ನು ಸುವರ್ಣ ಮಾಡಿಕೊಳ್ಳಬೇಕೆಂಬ ಆಶೆಯಿಂದ ಎಲ್ಲೆಲ್ಲಿ ಯಜ್ಞಗಳೂ ಅನ್ನ ದಾನಾದಿಗಳೂ ನಡೆದರೂ ಅಲ್ಲೆಲ್ಲಾ ಹೋಗಿ ಯಜ್ಞಶಿಷ್ಟಾಮೃತವನ್ನು ಸೇವಿಸಿ ನೋಡುತ್ತಿರುವುದಾಗಿಯೂ ಲೋಕವೆಲ್ಲಾ ಪದ್ಯಸ್ವಮಯಕ್ಕೆ ಧರ್ಮರಾಜನ ಮಹಾಯಜ್ಞವನ್ನೂ ಅದ್ಭುತವಾದ ಅನ್ನದಾನವನ್ನೂ ಹೇರಳವಾಗಿ ಹೊಗಳು ತ್ತಿದ್ದುದರಿಂದ ಇಲ್ಲಿಯೂ ಬಂದು ಯಜ್ಞಶಿಷ್ಟಾಶನವನ್ನು ಯಥೇಚ್ಛವಾಗಿ ಸೇವಿಸಿದರೂ ಆ ರಾಶಿಯಲ್ಲೇ ಉರುಳಾಡುತ್ತಿದ್ದರೂ ಒಂದು ರೋಮ ಕೂಡ ಸುವರ್ಣವಾಗದೆ ವ್ಯರ್ಥವಾಯಿತೆಂದೂ, ಗುಪ್ತವಾಗಿಯೂ ನಿಸ್ವಾರ್ಥವಾಗಿಯೂ ನಿರಾಡಂಬರವಾಗಿಯೂ ತಮ್ಮ ಪ್ರಾಣಗಳನ್ನೇ ಬಲಿಗೊಟ್ಟು ಅತಿಥಿಗೆ ಅನ್ನ ದಾನ ಮಾಡಿದ ಆ ಮಹಾತ್ಮರ ಆ ಮಹಾಯಜ್ಞಕ್ಕೆ ಸಮಾನ ಮಹಿಮೆಯುಳ್ಳ ಮತ್ತೊಂದು ಯಜ್ಞವು ಅದುವರೆಗೆ ಎಲ್ಲಿಯೂ ನಡೆದಿಲ್ಲವೆಂದೂ ಅಭಿಮಾನ ಪೂರ್ಣವಾಗಿ ಮಾಡಿದ ಸತ್ಕರ್ಮವೆಲ್ಲವೂ ವಿಷಭಕ್ಷ್ಯಕ್ಕೆ ಸಮಾನವೆಂದೂ ಹೇಳಿ ಅಂತರ್ಧಾನವಾಯಿತು.

ಹೀಗೆ ಎಷ್ಟು ಹೆಚ್ಚಾದ ಯಜ್ಞದಾನಾದಿಗಳನ್ನು ಮಾಡಿದರೂ ಅದರಲ್ಲಿ ಅಭಿಮಾನವನ್ನು ವಹಿಸುವುದಾದರೆ ಅದರಿಂದಾಗಬೇಕಾದ ಆಧ್ಯಾತ್ಮಿಕಶುದ್ಧಿಯ ಫಲವು ಆಗದೇಹೋಗುವುದು. ಆದರಿಂದಲೇ ಸರ್ವವನ್ನೂ ಭಗವದ್ಭಾವನೆ ಯಿಂದಲೂ ಭಗವದರ್ಪಣ ಬುದ್ಧಿಯಿಂದಲೂ ಮಾಡಿದರೆ ಶ್ರೇಯಸ್ಸುಂಟಾಗುವು ದೆಂದು ಗೀತೆಯಲ್ಲಿ ಹೇಳಿದೆ.

ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ ಬ್ರಹ್ಮಣಾಹುತಂ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥

" ಬ್ರಹ್ಮವಿದನು ಯಜ್ಞದಲ್ಲಿ ಅರ್ಪಣಕರ್ಮವನ್ನೂ (ಯಜ್ಞಸಾಧನ ಗಳನ್ನೂ) ಹೋಮದ್ರವ್ಯಗಳನ್ನೂ ಅಗ್ನಿಯನ್ನೂ ಯಜಮಾನನಾದ ತನ್ನನ್ನೂ ಪ್ರತ್ಯಗಾತ್ಮ ದೃಷ್ಟಿಯಿಂದ ಸರ್ವವನ್ನೂ ಬ್ರಹ್ಮವೆಂದೇ ತಿಳಿಯುತ್ತಾನೆ. ಸಾಧನ ಸಹಿತವಾದ ಸರ್ವಕರ್ಮವನ್ನೂ ಬ್ರಹ್ಮಮಾತ್ರವೃತ್ತಿಯಿಂದ ನೋಡತಕ್ಕ ದೃಷ್ಟಿ

ಯುಳ್ಳವನು ತಾನೇ ಬ್ರಹ್ಮವೆಂದು ಬ್ರಹ್ಮವನ್ನೇ ಹೊಂದುತ್ತಾನೆ." ಇಂಥಾ ಅಖಂಡವಾದ ಬ್ರಹ್ಮಾಕಾರ ವೃತ್ತಿಯಿಂದ ಕರ್ಮವು ಅಕರ್ಮವಾಗುವುದರಿಂದ ಬಂಧಕ್ಕೆ ಕಾರಣವಾಗುವುದಿಲ್ಲ.

ಅಭಿಮಾನ, ಆಸಕ್ತಿ, ಆಶೆಗಳೆಲ್ಲಾ ನಾಶವಾಗಿ ಚಿತ್ತಶುದ್ಧಿಯುಂಟಾಗುವುದರಿಂದ ಜ್ಞಾನನಿಷ್ಠೆ ಪಡೆಯಲೆಂದೇ ಯಜ್ಞದಾನಾದಿಗಳನ್ನು ಮಾಡಿದರೂ ಆ ಅಭಿಮಾನಾದಿ ದೋಷಗಳು ಪುನಃ ಬಿಡದೇ ಆ ಯಜ್ಞಾದಿ ಸಾಧನಗಳನ್ನೇ ಹಿಡಿದು ಜೀವಿದರೆ ಅವುಗಳ ನಾಶಕ್ಕೆ ವಿವೇಕವನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ.

ಪಿಶಾಚಗ್ರಸ್ತರಾದವರನ್ನು ಪಿಶಾಚಿಯನ್ನು ಬಿಡಿಸುವುದಕ್ಕಾಗಿ 'ಪಿಶಾಚ ವಿಮೋಚನ' ವೆಂಬ ಪುಣ್ಯಕ್ಷೇತ್ರಕ್ಕೆ ಕರೆದುಕೊಂಡು ಹೋಗಿ ಅಲ್ಲಿ 'ಪಿಶಾಚ ನಾಶಿನಿ' ಎಂಬ ಪುಣ್ಯತೀರ್ಥದಲ್ಲಿ ಸ್ನಾನಮಾಡಿಸಿದರೂ ಮೊದಲೇ ಮೈಯಲ್ಲಿದ್ದ ಪಿಶಾಚಿಯೊಡನೆ ಆ ತೀರ್ಥದಲ್ಲಿದ್ದ ಬೇರೆ ಪಿಶಾಚಿಗಳೂ ಬಂದು ಸೇರಿದರೆ ಮಾಡುವುದೇನು ?

ಯಜ್ಞದಾನಾದಿಗಳನ್ನು ಮಾಡಿಯೂ ಅಭಿಮಾನಪಡುವುದೆಂದರೆ ಆ ರೀತಿಯೇ ಆಗುತ್ತದೆ. ಆದ್ದರಿಂದ ಕರ್ಮಯೋಗಿಯು ಮಹಾ ವಿವೇಕಿಯೂ ಆಗಬೇಕು.

ಇನ್ನು ತಪಸ್ಸಿನ ವಿಚಾರ. '**ತಪ್**' ಎಂದರೆ ಕಾಯು ; '**ತಪ**' ಎಂದರೆ ಕಾವು. ಕಾವಿಲ್ಲದೇ ಯಾವುದೂ ಕರಗುವುದಿಲ್ಲ. ಅಸಂಸ್ಕೃತವೂ, ಕಠಿಣವೂ ಆದ ಹೃದಯವು ಕರಗಿ ಸುಸಂಸ್ಕೃತವೂ ನಿರ್ಮಲವೂ ಕೋಮಲವೂ ಆಗುವುದಕ್ಕೆ ಸಾತ್ವಿಕವಾದ ತಪಸ್ಸು ಬೇಕು. ಸ್ವರ್ಗಾದಿ ಸಾಧನಗಳ ವಿಷಯ ದಲ್ಲಿ ಸರ್ವಜ್ಞನು ಹೀಗೆಯೇ ಹೇಳಿದ್ದಾನೆ.

**ದಂಡಿಸದೆ ದೇಹವನು ಖಂಡಿಸದೆ ಕರಣವನು ।**
**ಉಂಡುಂಡು ಸ್ವರ್ಗವನ್ನೈದಲಿಕದನೇನು**
**ರಂಡೆಯಾಳುವಳೆ ಸರ್ವಜ್ಞ ॥**

ಬ್ರಹ್ಮನೂ ಸೃಷ್ಟಿಮಾಡುವ ಶಕ್ತಿಯನ್ನು ತಪಸ್ಸಿನಿಂದಲೇ ಪಡೆದನು. ತೈತ್ತಿರೀಯದಲ್ಲಿ "**ಸೋಕಾಮಯತ । ಬಹುಸ್ಯಾಂ ಪ್ರಜಾಯೇಯೇತಿ । ಸ ತಪೋತಪ್ಯತ । ಸ ತಪಸ್ತಪ್ತ್ವಾ । ಇದಂ ಸರ್ವಮಸೃಜತ ।**"

"ಪರಮಾತ್ಮನು ಇಚ್ಛಿಸಿದನು ; 'ನಾನೇ ಬಹುರೂಪಿಯಾಗಿ ಜನಿಸುತ್ತೇನೆ' (ಇದಕ್ಕಾಗಿ) ಅವನು ತಪಸ್ಸು ಮಾಡಿದನು ; ತಪಸ್ಸನ್ನು ಮಾಡಿ ಈ ಎಲ್ಲವುಗಳನ್ನೂ ಸೃಷ್ಟಿಸಿದನು" ಎಂದು ಹೇಳಿದೆ.

ತೈತ್ತಿರೀಯದಲ್ಲಿಯೇ ಇನ್ನೊಂದೆಡೆ "**ತಪಸಾ ಬ್ರಹ್ಮ ವಿಜಿಜ್ಞಾಸಸ್ವ। ತಪೋ ಬ್ರಹ್ಮೇತಿ।**" "ತಪಸ್ಸಿನಿಂದ ಬ್ರಹ್ಮವನ್ನು ತಿಳಿ; ತಪಸ್ಸೇ ಬ್ರಹ್ಮ" ಎಂದು ಹೇಳಿದೆ ಇದರಿಂದ ಶ್ರದ್ಧಾಯುಕ್ತವಾಗಿ ಮಾಡುವ ಬ್ರಹ್ಮವಿಚಾರವೇ ತಪಸ್ಸೆಂದು ತಿಳಿಯುತ್ತದೆ.

ಯೋಗವಾಸಿಷ್ಠದಲ್ಲಿ ಚಿತ್ತೇಂದ್ರಿಯಗಳ ಏಕಾಗ್ರತೆಯೇ ಶ್ರೇಷ್ಠ ತಪಸ್ಸೆಂದು ಹೇಳಿದೆ. ಯಮನಿಯಮಾದಿಗಳಿಂದ ಕೂಡಿದ ಧಾರಣಾ-ಧ್ಯಾನ-ಸಮಾಧಿ ರೂಪವಾದ ಸಂಯಮವನ್ನು ತಪಸ್ಸೆನ್ನಬಹುದು.

ಮಹಾ ಕರ್ಮಯೋಗಿಯೂ ಧ್ಯಾನಯೋಗಿಯೂ ಆದ ಬುದ್ಧದೇವನು, ಮೊದಲು ಸಂಯಮರೂಪ ತಪಸ್ಸು ಮಾಡಿಯೇ ನಿರ್ವಾಣ ಶಾಂತಿಯನ್ನು ಪಡೆದು ಲೋಕಕಲ್ಯಾಣ ಸಾಧನರೂಪ ಯಜ್ಞಾಚರಣೆಯಿಂದ ಲೋಕಕ್ಕೆ ಧರ್ಮೋಪದೇಶವನ್ನೂ ಶಾಂತಿಸಂದೇಶವನ್ನೂ ದಾನಮಾಡಿದನು.

ತಪಸ್ಸು ಹೊರಹೊಮ್ಮಿದರೆ ಯಜ್ಞವಾಗಿಯೂ ಯಜ್ಞವು ಹೊರಚಿಮ್ಮಿ ದಾನವಾಗಿಯೂ ರೂಪುಗೊಳ್ಳುವುವೆಂದು ಹೇಳಬಹುದು. ಅಂತು ದಾನಕ್ಕಿಂತಲೂ ಹೆಚ್ಚು ಆಂತರಂಗಿಕವು ಯಜ್ಞವೂ ಯಜ್ಞಕ್ಕಿಂತಲೂ ಆಂತರಂಗಿಕವು ತಪಸ್ಸೂ ಆಗಿವೆ. ತಪಸ್ಸಿಲ್ಲದೆ ಯಜ್ಞವಿಲ್ಲ; ಯಜ್ಞವಿಲ್ಲದೆ ದಾನವಿಲ್ಲ

ಭೌತವಿಜ್ಞಾನ ಯಜ್ಞಶಾಲೆಯಲ್ಲಿ ವಿಜ್ಞಾನಿಯ ತಪಸ್ಸಿನಿಂದಲೇ ಆವಿಷ್ಕರಣಗಳಾಗಿ ಜಗತ್ತಿಗೆ ನೂತನ ಸುಖ-ಸಾಧನೆಗಳ ದಾನವಾಗುವುದು. ವಿಶಿಷ್ಟರೀತಿಯ ಕರ್ಮಯೋಗಿಗಳಾದ ವಿಜ್ಞಾನಿಗಳು ವಸ್ತು-ಶಕ್ತಿಗಳ ರಹಸ್ಯಜ್ಞಾನದಿಂದ ಅವುಗಳನ್ನು ಸ್ವಾಧೀನಪಡಿಸಿಕೊಂಡು ಲೋಕದ ಸುಖಸೌಕರ್ಯಗಳನ್ನು ಬೆಳೆಸಬೇಕೆಂಬ ತಪಸ್ಸಿನಿಂದಲೇ ವೈಜ್ಞಾನಿಕ ಮಹಾಶೋಧ-ಸಾಧನೆಗಳಾದರೂ ಆಗಿವೆ ಅಣುಗರ್ಭದಲ್ಲಿ ವಿಜ್ಞಾನಿಗಳು ಮಾಡಿದ ಸಂಯಮ ತಪಸ್ಸಿನಿಂದಲೇ ಆಟಂ ಬಾಂಬಿನ ನಿರ್ಮಾಣವಾಯಿತು. ಆದರೆ ಇದು ವಿನಾಶಕ್ಕಾಗಿ ಪ್ರಯೋಗಿಸಿದರೆ ತಾಮಸವಾಗುತ್ತದೆ.

ವಿಶ್ವಾಮಿತ್ರ ಮಹರ್ಷಿಯಾದರೂ ಸಂಯಮ ತಪಸ್ಸಿನಿಂದ ಪ್ರಾಣೋಪಾಸನೆಯನ್ನೂ ಅಗ್ನಿ ಜಲಾದಿ ದೇವತೋಪಾಸನೆಯನ್ನೂ ಮಾಡಿ ಸೃಷ್ಟಿಯ ರಹಸ್ಯವನ್ನು ತಿಳಿದು, ಮಂತ್ರ-ತಂತ್ರ-ದ್ರವ್ಯಮಯವಾದ ಯಜ್ಞವನ್ನೂ ಹೂಡಿ, ಆ ತಪೋಯಜ್ಞಗಳ ಪ್ರಭಾವದಿಂದ ತ್ರಿಶಂಕು ಮಹಾರಾಜನಿಗೆ ಸ್ವರ್ಗಾರೋಹಣ ಸಾಮರ್ಥ್ಯವನ್ನೂ ದಾನಮಾಡಿದನು. ಪುನಃ ಅಸಂತುಷ್ಟನಾದ ಇಂದ್ರನಿಂದ ತ್ರಿಶಂಕುವು ಸ್ವರ್ಗದಿಂದ ನೂಕಿಸಲ್ಪಟ್ಟು ತಲೆಕೆಳಗಾಗಿ ಭೂಮಿಗೆ ಬೀಳುತ್ತಾ ಹಾಹಾಕಾರ ಮಾಡುತ್ತಿರಲು ವಿಶ್ವಾಮಿತ್ರನು ತನ್ನ ತಪೋಯಜ್ಞಗಳ ಸಾಮರ್ಥ್ಯದಿಂದ ಅವನನ್ನು ಅಂತರಿಕ್ಷದಲ್ಲಿಯೇ ನಿಲ್ಲಿಸಿ ಅವನಿಗಾಗಿ ಪ್ರತಿಸ್ವರ್ಗವನ್ನು ಕಲ್ಪಿಸಿ ತ್ರಿಶಂಕುವು ಇಚ್ಛಿಸಿದ ಸ್ವಭೋಗಗಳನ್ನು ಅಲ್ಲಿಯೇ ಅನುಭವಿಸಿ ಕಲ್ಪಾಂತರದಲ್ಲಿ ಸ್ವತಃ ಇಂದ್ರನೇ ಆಗುವ ಶಕ್ತಿಯನ್ನು ತ್ರಿಶಂಕುವಿಗೆ ದಾನಮಾಡಿದನು.

ಅರ್ಜುನಾದಿ ಕ್ಷತ್ರಿಯರು ತಪಸ್ಸುಮಾಡಿಯೇ ದಿವ್ಯಾಸ್ತ್ರಗಳನ್ನು ಪಡೆದು ಸಮರಯಜ್ಞದಲ್ಲಿ ಶತ್ರುಸಂಹಾರಮಾಡಿ ಪ್ರಜೆಗಳಿಗೆ ಸುಖಸಂಪತ್ತನ್ನೂ ಶಾಂತಿ ಸಮೃದ್ಧಿಯನ್ನೂ ದಾನಮಾಡಿದರು.

ಮಹಾಕರ್ಮಯೋಗಿಗಳಾದ ಮಹಾತ್ಮಾ ಗಾಂಧಿಜೀಯವರು ಸತ್ಯ-ಅಹಿಂಸಾ-ತ್ಯಾಗ-ವಿಶ್ವಪ್ರೇಮ-ಶಾಂತಿರೂಪ ತಪಸ್ಸಿನಿಂದಲೇ ಸ್ವರಾಜ್ಯಸಾಧನೆಯ ಮಹಾಯಜ್ಞವನ್ನು ಚರಿಸಿ ಭಾರತಕ್ಕೆ ರಾಷ್ಟ್ರೀಯ ಸ್ವಾತಂತ್ರ್ಯವನ್ನು ದಾನ ಮಾಡಿದರು.

ಯಜ್ಞ ದಾನ ತಪಸ್ಸುಗಳ ವಿಶ್ವವ್ಯಾಪಕ ಭಾವದಿಂದಲೇ ರಾಷ್ಟ್ರದಲ್ಲಿ ಪ್ರಚಂಡವಾದ ಅಹಿಂಸಾಮಯ ಆರ್ಥಿಕ ಹಾಗೂ ಸಾಂಸ್ಕೃತಿಕ ಕ್ರಾಂತಿಯಾಗುತ್ತದೆ. ಕ್ರಾಂತಿಯೆಂದರೆ ಪರಿವರ್ತನೆಯಾದುದರಿಂದ ಕ್ರಾಂತಿಯು ಶಾಂತಿಯಿಂದಲೂ ಅಹಿಂಸೆಯಿಂದಲೂ ಸಾಧ್ಯವಾಗುವುದು ಈ ಬೌದ್ಧಯುಗದ ವೈಶಿಷ್ಟ್ಯ.

ಆಧ್ಯಾತ್ಮ ಯಜ್ಞದೀಕ್ಷಿತನಾದ ಮುಮುಕ್ಷುವು ಗುರುಸೇವಾ-ಶ್ರವಣ-ಮನನ-ನಿದಿಧ್ಯಾಸರೂಪ ತಪಸ್ಸಿನಿಂದ ಬ್ರಹ್ಮಸಾಕ್ಷಾತ್ಕಾರ ಪಡೆದು ಕೃತಕೃತ್ಯತಾರೂಪ ಗುರುದಕ್ಷಿಣೆಯನ್ನು ಗುರುವಿಗೆ ನೀಡಿ, ಜಗತ್ತಿಗೆ ತನ್ನ ಆಧ್ಯಾತ್ಮ ಜ್ಞಾನವನ್ನು ದಾನಮಾಡುತ್ತಾನೆ.

ತಪಸ್ಸಿನಲ್ಲಿ ಸಾತ್ವಿಕ-ರಾಜಸ-ತಾಮಸವೆಂದು ಮೂರು ಬಗೆ. ಫಲಾಪೇಕ್ಷೆಯಿಲ್ಲದೆಯೂ ಪರಮ ಶ್ರದ್ಧೆಯಿಂದಲೂ ಏಕಾಗ್ರಚಿತ್ತದಿಂದಲೂ ಪರಮೇಶ್ವರ ಭಕ್ತಿಯಿಂದಲೂ ಮಾಡಿದ ತಪಸ್ಸು ಸಾತ್ವಿಕವು.

ವಿದ್ವಾಂಸನೆಂದೂ ಸಾಧುವೆಂದೂ ಮಹಾಯೋಗಿಯೆಂದೂ ಸತ್ಕಾರವನ್ನು ಪಡೆಯುವುದಕ್ಕಾಗಿಯೂ ಬಹುಮಾನ ಪೂಜಾದಿಗಳನ್ನು ಹೊಂದುವುದಕ್ಕಾಗಿಯೂ ವೇಷಭಾಷಾದಿ ಪ್ರಕಾಶನದ ದಂಭದಿಂದಲೂ ಮಾಡುವ ತಪಸ್ಸು ಕ್ಷಣಿಕವಾದ ಭುಕ್ತಿಫಲವನ್ನು ಕೊಡುವುದರಿಂದ ರಾಜಸವು.

ತಾನು ಅತಿ ಮೂಢನಾದರೂ ತಾನೇ ಮಹಾ ಬುದ್ಧಿ ಶಾಲಿಯೆಂಬ ದುರಭಿಮಾನದಿಂದಲೂ ಕಾಯಕ್ಲೇಶದಿಂದಲೂ ಆಭಿಚಾರಿಕ ಕ್ರಿಯೆಯಿಂದ (ಮಾಟ ಮಾಡಿ) ಶತ್ರುಸಂಹಾರಾರ್ಥವಾಗಿಯೂ ಮಾಡುವ ತಪಸ್ಸು ತಾಮಸವು.

ತಪಸ್ಸು ಕಾಯಕ ವಾಚಕ ಮಾನಸಿಕವೆಂದೂ ಮೂರು ಬಗೆಯು.

**ದೇವ ದ್ವಿಜ ಗುರು ಪ್ರಾಜ್ಞ ಪೂಜನಂ ಶೌಚಮಾರ್ಜವಂ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥**

(ಗೀತಾ)

" ಅಗ್ನಿ ಮೊದಲಾದ ದೇವತೆಗಳನ್ನೂ ಶ್ರೋತ್ರಿಯ ಬ್ರಾಹ್ಮಣರನ್ನೂ ತಾಯಿ ತಂದೆ ಆಚಾರ್ಯ ಉಪಾಧ್ಯಾಯ ಮೊದಲಾದವರನ್ನೂ ಬ್ರಹ್ಮವೇತ್ತರನ್ನೂ ವಂದನ ಶುಶ್ರೂಷಾ ಅನ್ನಾದಿಗಳಿಂದ ಆರಾಧಿಸುವುದೂ ಬಾಹ್ಯಾಭ್ಯಂತರ ಶುದ್ಧಿಯೂ ಕರ್ತವ್ಯಕರ್ಮದಲ್ಲಿಯೂ ಸಾಧುಗಳಲ್ಲಿಯೂ ಮನಸ್ಸಿನಿಂದಲೂ ಮಾತಿನಿಂದಲೂ ದೇಹದಿಂದಲೂ ಏಕರೂಪವಾಗಿರುವುದೂ ನಿಷಿದ್ಧಕಾಲದಲ್ಲಿ ಸ್ತ್ರೀರತಿಯಿಲ್ಲದಿರುವ ಬ್ರಹ್ಮಚರ್ಯವೂ ಇತರರನ್ನು ನೋಯಿಸದಿರುವುದೂ ಶರೀರದಿಂದ ಮಾಡುವ ತಪಸ್ಸು."

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯ ಹಿತಂಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥**

(ಗೀತಾ)

" ಇನ್ನೊಬ್ಬರನ್ನು ನೋಯಿಸದಿರುವ ವಾಕ್ಯವೂ ( ಹಾಗೂ ರೇಗಿಸದಿರುವಂತೆ ಮಾತನಾಡುವುದೂ ) ಇದ್ದುದನ್ನು ಇದ್ದಂತೆ ಹೇಳುವುದೂ ಮನಸ್ಸಿಗೂ

ಕಿವಿಗೂ ಸಂತೋಷಕರವಾಗಿ ನುಡಿಯುವುದೂ ಧರ್ಮ ಮೊದಲಾದ ಪುರುಷಾರ್ಥಗಳನ್ನು ಬೋಧಿಸುವುದೂ ಸರಿಯಾದ ಸ್ವರೋಚ್ಚಾರಣದ ಮೂಲಕ ವೇದಶಾಸ್ತ್ರಗಳ ಅಧ್ಯಯನವೂ ವಾಙ್ಮಯ ತಪಸ್ಸು."

**ಮನಃ ಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥** (ಗೀತಾ)

"ಮನಸ್ಸನ್ನು ವಿಷಯಗಳ ಕಡೆ ಹರಿಯಬಿಡದೆ ಆತ್ಮನಲ್ಲಿಯೇ ನೆಲೆಗೊಳಿಸುವುದರಿಂದ ಲಭಿಸುವ ಮನಃಪ್ರಸನ್ನತೆಯೂ ಉಪಕಾರಿಗಳಲ್ಲಿಯೂ ಅಪಕಾರಿಗಳಲ್ಲಿಯೂ ಇಷ್ಟಜನರಲ್ಲಿಯೂ ಅನಿಷ್ಟಜನರಲ್ಲಿಯೂ ಪಕ್ಷಪಾತವಿಲ್ಲದೇ ಸಮವಾಗಿಯೂ ಕೋಮಲವಾಗಿಯೂ ಮನಸ್ಸನ್ನಿಟ್ಟುಕೊಳ್ಳುವುದೂ ಸಗುಣ ಅಥವಾ ನಿರ್ಗುಣ ತತ್ತ್ವದ ಅನುಸಂಧಾನಪರಾಯಣತೆಯೂ (ಧ್ಯಾನ ಪರಾಯಣನಾದವನೇ ಮುನಿಯು; ಮುನಿಯ ಭಾವವೇ ಮೌನ. ಅಲ್ಲದೆ ಮಾತನ್ನು ಬಿಟ್ಟರೇ ಮೌನವಲ್ಲ, ಏಕೆಂದರೆ ಆ ವಾಙ್ಮಾತ್ರ ಮೌನವು ಪಶ್ವಾದಿಗಳಿಗೆ ಸ್ವಾಭಾವಿಕವಾಗಿಯೇ ಇದೆ.) ಮನಸ್ಸನ್ನು ವಿಷಯಗಳಲ್ಲಿ ತೊಡಕಿಸದೆ ತಡೆದಿಟ್ಟುಕೊಳ್ಳುವುದೂ ಅಂತಃಕರಣದಲ್ಲಿ ರಾಗದ್ವೇಷಾದಿ ದೋಷಗಳಿಲ್ಲದಿರುವುದೂ ಮಾನಸಿಕ ತಪಸ್ಸು.

ಈ ಯಜ್ಞದಾನ ತಪಸ್ಸುಗಳನ್ನಾದರೂ ಅಭಿಮಾನವನ್ನೂ ಆಸಕ್ತಿಯನ್ನೂ ಫಲಾಪೇಕ್ಷೆಯನ್ನೂ ಬಿಟ್ಟು ಕರ್ತವ್ಯಕ್ಕಾಗಿಯೂ ಈಶ್ವರ ಪ್ರೀತಿ ಸಂಪಾದನೆಗಾಗಿಯೂ ಮಾಡಬೇಕು.

ಶ್ರೀ ಶಂಕರರು ಹೇಳುವಂತೆ "**ಚಿತ್ತಸ್ಯ ಶುದ್ಧಯೇ ಕರ್ಮ**" ಕರ್ಮಯೋಗದ ಅಭ್ಯಾಸದಿಂದ ಚಿತ್ತಶುದ್ಧಿಯಾಗಿ ಜ್ಞಾನನಿಷ್ಠೆಗೆ ಅಧಿಕಾರವುಂಟಾಗುವುದು. ಈಶ್ವರನನ್ನು ಒಪ್ಪದಿದ್ದರೂ ಈಶ್ವರಭಕ್ತಿಯಿಲ್ಲವಾದರೂ ಬುದ್ಧದೇವನಂತೆ ಕೇವಲ ನಿಸ್ವಾರ್ಥಸೇವಾರೂಪ ಕರ್ಮಯೋಗದಿಂದಲೇ ಮುಕ್ತಿಯು ಅಥವಾ ಪರಮಪುರುಷಾರ್ಥವು ಸಾಧ್ಯವಾಗುವುದೆಂದೂ ಬೇರೆ ಯೋಗಗಳ ಸಹಾಯವಿಲ್ಲದೆ ಕರ್ಮಯೋಗವೊಂದೇ ಸ್ವತಂತ್ರವಾಗಿ ಕೈವಲ್ಯಪ್ರದವೆಂದೂ ಕೆಲವು ಮಹಾತ್ಮರು ವಾದಿಸಿದ್ದಾರೆ.

**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥**

ಎಂಬ ಗೀತೋಕ್ತಿಯಂತೆ ಕರ್ಮ ಭಕ್ತಿ ಮೊದಲಾದುವುಗಳೆಲ್ಲವೂ ಜ್ಞಾನಕ್ಕೇ ಸಾಧನವಾದ್ದರಿಂದ ಜ್ಞಾನದಿಂದಲೇ ಮೋಕ್ಷವೆಂದು ಶ್ರೀ ಶಂಕರರ ಮತವು.

ಪೂರ್ಣ ನಿರಭಿಮಾನದಿಂದಲೂ ನಿಸ್ವಾರ್ಥಭಾವದಿಂದಲೂ ಕರ್ಮವನ್ನು ಮಾಡಬೇಕಾದರೂ ಆತ್ಮನು (ತಾನು) ಅಕರ್ತಾ ಅಭೋಕ್ತಾ ಎಂಬ ಜ್ಞಾನವು ಅವಶ್ಯ ಇರಲೇಬೇಕು. ಏಕೆಂದರೆ ತನಗಾಗಿ ಯಾವ ಭೋಗವನ್ನೂ ಬಯಸದೇ ತನ್ನ ಪ್ರಾಣಧಾರಣ ಮಾತ್ರಕ್ಕೆ ಅನ್ನವಸ್ತ್ರಗಳನ್ನು ಬಳಸುತ್ತಾ ಪೂರ್ಣ ನಿಸ್ವಾರ್ಥವಾಗಿ ಲೋಕಸೇವೆ ಮಾಡುವುದರಲ್ಲಿಯೇ ಆನಂದಪಡತಕ್ಕ ವಿವೇಕಿಯಾದ ಕರ್ಮಯೋಗಿಯು, ಆ ತನ್ನ ಆನಂದವು ಭೋಗಾಧೀನವಾಗಿಲ್ಲದೆ ತನ್ನೊಳಗೇ ಸ್ವತಂತ್ರವಾಗಿರುವುದೆಂದೂ ಲೋಕಸೇವೆಯಿಂದ ಬೆಳೆಯುತ್ತಿರುವ ಲೋಕಸುಖವೇ ತನ್ನ ಸುಖವೆಂದೂ ತನ್ನ ಆನಂದವೇ ಸರ್ವಲೋಕದಲ್ಲಿಯೂ ವ್ಯಾಪಿಸಿರುವುದಾಗಿಯೂ ಸಹಜವಾಗಿ ತನ್ನೊಳಗೇ ಮನಗಾಣುತ್ತಾನೆ. ತಾನು ಆನಂದಸ್ವರೂಪನೆಂದೂ ಆನಂದಸ್ವರೂಪನಾದ ತಾನೇ ಸರ್ವರಲ್ಲಿಯೂ ವ್ಯಾಪಿಸಿರುವನೆಂದೂ ಅದು ನಿರ್ವಿಷಯವಾದ ನಿಜಾನಂದವೆಂದೂ ಆ ಆನಂದವು ಸರ್ವತಂತ್ರ ಸ್ವತಂತ್ರವೆಂದೂ ತಿಳಿಯುವುದೇ ಜ್ಞಾನ.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥**

(ಗೀತಾ)

ಅನೇಕ ಕೋಟಿ ಜನ್ಮಗಳ ಪುಣ್ಯಾಪುಣ್ಯ ಕರ್ಮಗಳನ್ನು ನಿರ್ಮೂಲನಮಾಡುವ ಸಾಮರ್ಥ್ಯದಿಂದ ಶುದ್ಧಿಕಾರಣವೂ ಮುಕ್ತಿಕಾರಣವೂ ಆದ ಆತ್ಮಜ್ಞಾನವನ್ನು ಕರ್ಮಯೋಗ ಸಿದ್ಧಿಯಿಂದ ಶುದ್ಧಾಂತಃಕರಣನಾದವನು ಕಾಲಾನುಕ್ರಮದಿಂದ ತನ್ನಲ್ಲಿ ತಾನೇ ಹೊಂದುತ್ತಾನೆ.

ಮೇಲೆ ಹೇಳಿದಂತೆ ಆನಂದಸ್ವರೂಪನೇ ತಾನೆಂಬ ಅನುಭವವುಳ್ಳ ವಿವೇಕಿಯಾದ ಕರ್ಮಯೋಗಿಗೆ–ಆನಂದವೇ ಬ್ರಹ್ಮವಾದ್ದರಿಂದ–ನಿಜವಾದ ಈಶ್ವರನಲ್ಲಿ ಶ್ರದ್ಧೆಯೂ ನಿಷ್ಠೆಯೂ ಭಕ್ತಿಯೂ ಸಹ ಇದ್ದಂತೇ ಆಯಿತು

ಆತನ ಮನಸ್ಸು ವಿಷಯಗಳ ಕಡೆ ಹರಿದಾಡದೇ ನಿರ್ಮಲವಾದ ಆನಂದದಲ್ಲಿಯೇ ಸಂಯಮಿತವಾಗಿರುವುದರಿಂದ ಆ ವಿವೇಕಿಯಲ್ಲಿ ರಾಜಯೋಗದ ಸಾಧನವೂ ಇದ್ದಂತಾಯಿತು. ಆದರೆ ಅವನ ಆನಂದವು ವಿಶಿಷ್ಟ ಸಂಸ್ಕಾರದ

ಪ್ರಭಾವದಿಂದ ನಿಸ್ಸ್ವಾರ್ಥ ಸೇವೆಯೆಂಬ ಉಪಾಧಿಯನ್ನೇ ಪ್ರಬಲವಾಗಿ ಕಚ್ಚಿ ಕೊಂಡಿರುವುದರಿಂದ 'ಕರ್ಮಯೋಗಿ' ಎನ್ನಿಸಿಕೊಂಡಿದ್ದಾನೆ. ಆ ವಿವೇಕಿಗೆ ಅವನ ಕರ್ಮಯೋಗವು ಚಿತ್ತಶುದ್ಧಿಸಾಧನರೂಪವೂ ಆಗಿರುವಂತೆ ಚಿತ್ತಶುದ್ಧಿ ಯಿಂದ ಜ್ಞಾನನಿಷ್ಠಾಪ್ರಾಪ್ತಿಯ ನಂತರ ಮೊದಲಿಗಿಂತಲೂ ಹೆಚ್ಚಾಗಿಯೂ ಚೆನ್ನಾಗಿಯೂ ಲೋಕಕಲ್ಯಾಣಸಾಧನರೂಪವೂ ಆಗಬಹುದು.

ಇದುವರೆಗೆ ಈ ಕರ್ಮಯೋಗದಲ್ಲಿ ಯಾವ ಕರ್ಮವನ್ನಾದರೂ ಅಕರ್ಮ ರೂಪವಾಗಿಯೂ ಅಭಿಮಾನವಿಲ್ಲದೆಯೂ ಫಲಾಪೇಕ್ಷೆಮಾಡದೆಯೂ ಅನಾಸಕ್ತಿ ಯಿಂದಲೂ ಕರ್ತವ್ಯಬುದ್ಧಿಯಿಂದಲೂ ಭಗವದರ್ಪಣಭಾವದಿಂದಲೂ ಮಾಡ ಬೇಕೆಂದು ವಿಚಾರಮಾಡಿದೆವು. ಅಕರ್ಮಜ್ಞಾನ, ಅನಾಸಕ್ತಿ, ಅತುಲಾಕಾಂಕ್ಷೆ ಕರ್ತವ್ಯಬುದ್ಧಿ, ಈಶ್ವರಾರ್ಪಣಭಾವ ಎಂಬ—ಕರ್ಮಯೋಗದ—ಈ ಪಂಚ ಭಾವಗಳಲ್ಲಿ ಇದುವರೆಗೆ ಅಕರ್ಮಜ್ಞಾನವನ್ನು ವಿಶೇಷವಾಗಿಯೂ ಮಿಕ್ಕ ಭಾವ ಗಳನ್ನು ಸ್ವಲ್ಪಸ್ವಲ್ಪವಾಗಿಯೂ ವಿಚಾರಿಸಿದ್ದೇವೆ. ಆದ್ದರಿಂದ ಇವುಗಳಲ್ಲಿ ಉಳಿದ ಅನಾಸಕ್ತಿ ಮೊದಲಾದ ಭಾವಗಳನ್ನು ಇಲ್ಲಿ ಸಂಕ್ಷೇಪವಾಗಿ ವಿಚಾರ ಮಾಡೋಣ. ಧರ್ಮವಿಷಯವನ್ನು ವಿಚಾರಮಾಡುವಾಗ "ಯಾರು ಯಾವಾಗ ಏನನ್ನು ಮಾಡುವುದು ಉತ್ತಮವಾದ ಕರ್ತವ್ಯವು ?" ಎನ್ನುವುದು ಮುಖ್ಯ ವಾದಂತೆ ಕರ್ಮಯೋಗವನ್ನು ವಿಚಾರಮಾಡುವಾಗ ಆ ಕರ್ತವ್ಯವನ್ನು 'ಹೇಗೆ ಮಾಡಬೇಕು ?' ಎನ್ನುವುದು ಮುಖ್ಯವಾಗುತ್ತದೆ. ಆದ್ದರಿಂದ ಧರ್ಮದಲ್ಲಿ 'ಮಾಟವು' ಮುಖ್ಯವಾದರೆ ಕರ್ಮಯೋಗದಲ್ಲಿ 'ನೋಟವು' ಮುಖ್ಯ. ಧರ್ಮ ದಲ್ಲಿ ಸಕರ್ಮಕ ದೃಷ್ಟಿಯೂ, ಕರ್ಮಯೋಗದಲ್ಲಿ ಸಕರ್ತೃಕ ದೃಷ್ಟಿಯೂ ಮುಖ್ಯವಾದುವು. ಧರ್ಮವು ಆಚಾರವಾದರೆ ಕರ್ಮಯೋಗವು ಆಕರ್ಮ ವಿಚಾರವಾಗಿದೆ.

ಜೀವನಿಗೆ ಬಂಧನಕಾರಿಯಾಗಿರುವ ಶೃಂಖಲೆಗೆ ಅಥವಾ ಸರಪಳಿಗೆ ಮುಖ್ಯವಾಗಿ ಅವಿದ್ಯಾ–ಕಾಮ–ಕರ್ಮಗಳೆಂಬ ಮೂರು ಕೊಂಡಿಗಳಿವೆ. ಅವಿದ್ಯಾಕಾಮಕರ್ಮರೂಪವಾದುದೇ ಈ ಸಂಸಾರ, ಈ ಜಗತ್ತು. ಈ ಸರಪಳಿ ಯನ್ನೇ ಸ್ವಲ್ಪ ವಿಂಗಡಿಸಿ ಬಿಚ್ಚಿ ಐದು ಕೊಂಡಿಗಳನ್ನಾಗಿ ಹೇಳಬಹುದು. ಇವೇ ಅವಿದ್ಯಾ ಅಥವಾ ಅಜ್ಞಾನ, ಕಾಮ, ಆಸಕ್ತಿ, ಕರ್ಮ, ಕರ್ಮಫಲ.

ಇವುಗಳ ಪರಿಹಾರಕ್ಕೆ ಕ್ರಮವಾಗಿ 'ಅಕರ್ಮ'ಜ್ಞಾನ ನಿಷ್ಕಾಮವೃತ್ತಿ, ಅನಾಸಕ್ತಿ, ಕರ್ತವ್ಯಬುದ್ಧಿ, ಈಶ್ವರಾರ್ಪಣ ಭಾವ ಇವೇ ಸಾಧನಗಳು.

ಅಜ್ಞಾನವನ್ನು ಪರಿಹರಿಸುವ ಶಕ್ತಿಯು ಅಕರ್ಮಜ್ಞಾನಕ್ಕೆ ಅಂದರೆ ಆತ್ಮಜ್ಞಾನಕ್ಕೆ ಮಾತ್ರ ಇದೆ. ಅಕರ್ಮವೆಂಬುದು ಆತ್ಮವೊಂದೇ. ಅಕರ್ಮಜ್ಞಾನವೇ ಆತ್ಮಜ್ಞಾನ. ಕತ್ತಲನ್ನು ಕಳೆಯಲು ಬೆಳಕಿನ ಹೊರತು ಮಿಕ್ಕವೆಲ್ಲಾ ಹೇಗೆ ನಿಷ್ಫಲವೋ ಹಾಗೆ ಆತ್ಮನ ವಿಷಯಕವಾದ ಅಜ್ಞಾನವನ್ನು ಕಳೆಯಲು ಆತ್ಮಜ್ಞಾನದ ಹೊರತು ಉಳಿದವೆಲ್ಲಾ ನಿರರ್ಥಕ.

ತಾನಾರೆಂಬುದು ತಿಳಿಯದ ಅಜ್ಞಾನದಿಂದ ತಾನಲ್ಲದ ಬುದ್ಧಿಯಿಂದ ಹಿಡಿದು ದೇಹದವರೆಗಿನ ಎಲ್ಲಾ ಕರಣಗಳಲ್ಲಿಯೂ ತಾನೆಂಬ ವೃತ್ತಿ ಉದಿಸಿರುವುದೇ ಅಹಂಕಾರ. ಪೂಜ್ಯ ರಮಣಮಹರ್ಷಿಗಳು ಹೇಳಿರುವಂತೆ ಅಜ್ಞಾನವೇ ಅಹಂಕಾರವಾಗಿದೆ. ಕರ್ಮಗಳನ್ನು ಮಾಡತಕ್ಕವುಗಳೂ ಫಲಗಳನ್ನು ಅನುಭವಿಸತಕ್ಕವುಗಳೂ ಕರಣಗಳೇ ಆದರೂ ಅಜ್ಞಾನದ ಪ್ರಭಾವದಿಂದ ಅವುಗಳಲ್ಲಿ ಅಭಿಮಾನ ಉದಿಸಿ ನಾನೇ ಕರ್ತೃ, ನಾನೇ ಭೋಕ್ತೃ ಎಂಬ ಭಾವವು ಬಂದಿದೆ. ದುಃಖಕ್ಕೆ ಕಾರಣವಾದ ಸರ್ವಸಂಸಾರವೂ ಇದೇ ಆಗಿದೆ. ಆದ್ದರಿಂದ ನಿಷ್ಕ್ರಿಯನಾದ ತಾನು ಮಾಡತಕ್ಕವನೂ ಅನುಭವಿಸತಕ್ಕವನೂ ಅಲ್ಲವೆಂಬ (ಅಕರ್ತಾ, ಅಭೋಕ್ತಾ) ಭಾವನಾಬಲದಿಂದಲೇ ಈ ಅಭಿಮಾನವನ್ನು ಕಳೆಯಬೇಕು.

ಅಭಿಮಾನವು ಬಹಳ ಕ್ಷುದ್ರವಾದುದು. "ನನ್ನ ಸಮಾನ ದಾನ ಮಾಡುವವರಿಲ್ಲ, ನನ್ನ ಸಮಾನ ತಪಸ್ವಿಗಳಿಲ್ಲ" ಎಂದು ಮೊದಲಾಗಿ ಅಭಿಮಾನಪಟ್ಟಿದ್ದರಿಂದ ಎಂಥಾ ಮಹಾಪುರುಷರಿಗೂ ಎಷ್ಟು ಹಾನಿಯಾಯಿತೆಂಬುದಕ್ಕೆ ವಿಸ್ತಾರವಾದ ಪುರಾಣೇತಿಹಾಸಗಳೇ ಸಾಕ್ಷಿ. ಇಂಥಾ ಅಭಿಮಾನಿಗಳ ಮನಸ್ಸನ್ನು ವಿಶ್ಲೇಷಣಮಾಡಿ ಕೆದಕಿ ನೋಡಿದರೆ ಒಂದು ವಿಶೇಷವಾದ ಗುಣ–ಕರ್ಮ–ಶಕ್ತಿಗಳ ಪ್ರದರ್ಶನದಿಂದ ತಾವು ಗೌರವ ಪಡೆಯಬೇಕೆಂಬ ಭಾವವು ಸೂಕ್ಷ್ಮವಾಗಿಯೂ ಗೂಢವಾಗಿಯೂ ಒಳಗೆ ಅಡಗಿದೆಯೆಂದು ತಿಳಿಯುತ್ತದೆ. ಇದರಿಂದ ಆ ವಿಶೇಷವಾದ ಗುಣ–ಶಕ್ತಿ–ಕರ್ಮಗಳೂ ಅವುಗಳ ಪ್ರಕಾಶಕ್ಕೆ ಸಾಧನವಾದ ದೇಹವೂ ತಾನೆಂಬ ತಿಳಿವಿರುವುದು ವ್ಯಕ್ತವಾಗುತ್ತದೆ. ಇದು

ತಪ್ಪು ತಿಳಿವಳಿಕೆ. ಇದರಿಂದ ನಿಜವಾಗಿ ತನ್ನನ್ನು ಕೀಳುಮಾಡಿಕೊಂಡಂ ತಾಯಿತು. ತನ್ನ ನಿಜಗೌರವಕ್ಕೆ ಹಾನಿಯಾಯಿತು. ಎಲ್ಲಾ ದೇಹಗಳೂ ಅವುಗಳಿಂದ ಪ್ರಕಾಶವಾಗುವ ಗುಣ-ಶಕ್ತಿ-ಕರ್ಮಗಳೂ ಆತ್ಮದೇವನಾದ ತನ್ನವೇ ಆಗಿವೆ. ಅಷ್ಟೇ ಅಲ್ಲ, ಪುರುಷಸೂಕ್ತದಲ್ಲಿ ಹೇಳುವಂತೆ **"ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ"** ಸಮಸ್ತ ವಿಶ್ವವೂ ತನ್ನ ಒಂದಂಶದ ಅಭಿವ್ಯಕ್ತತೆ ಮಾತ್ರವಾಗಿದೆ. ಇವುಗಳಿಗೆ ಮಿಗಿಲಾದ ಮೂರಂಶವು ಸೃಷ್ಟಿರೂಪದಿಂದ ವ್ಯಕ್ತವಾಗದೇ ಅಮೃತವೂ ದಿವ್ಯವೂ ಆಗಿದೆ. ಬ್ರಹ್ಮವೆಂದರೆ ದೊಡ್ಡದು ಎರಡನೆಯದೇ ಇಲ್ಲದಷ್ಟು ದೊಡ್ಡವನು ತಾನು, ಅಂದರೆ ಬ್ರಹ್ಮವೇ ತಾನು. ಬ್ರಹ್ಮವೇ ತಾನೆಂದು ತಿಳಿಯುವುದೇ ತನಗೆ ನಿಜವಾದ ಗೌರವ. 'ಗುರು' ಇದರ ಭಾವವೇ ಗೌರವ. ಯಾವುದು ಬ್ರಹ್ಮವೋ ಅದು ಗುರು, ಯಾವುದು ಗುರುವೋ ಅದೇ ಬ್ರಹ್ಮ. (ಆದ್ದರಿಂದ ಸರ್ವಜ್ಞನೂ ಸರ್ವ ಶಕ್ತನೂ ಆದ ಈಶ್ವರನಿಗಿಂತಲೂ ದೊಡ್ಡದಾದ ಬ್ರಹ್ಮವೇ ತಾನೆಂಬ ನಿರಂತರ ದೃಢಭಾವದಿಂದ ಕರ್ಮಗಳು ನಡೆಯುತ್ತಿದ್ದರೆ ನಿರಭಿಮಾನವೂ, ನಿಸ್ವಾರ್ಥ ಭಾವವೂ ತಮ್ಮಿಂದ ತಾವೇ ಚೆನ್ನಾಗಿ ಅಳವಡುತ್ತವೆ.)

ಕರ್ಮಯೋಗಕ್ಕೆ ಸಾಧನಗಳಾದ ಪಂಚಭಾವಗಳಲ್ಲಿ ಅಕರ್ಮಜ್ಞಾನವೇ (ಕರ್ಮದಲ್ಲಿ ಅಕರ್ಮವನ್ನು ತಿಳಿಯುವುದೇ) ಮೂಲವೂ ಮುಖ್ಯವೂ ಆಗಿದೆ. ಅಕರ್ಮಜ್ಞಾನದ ಬಲದಿಂದ ಅಹಂಕಾರವೃತ್ತಿಯೂ ಅನಹಂಕಾರದಿಂದ ಅಕಾಮವೂ (ನಿಷ್ಕಾಮವೂ) ಅಕಾಮದಿಂದ ಅನಾಸಕ್ತಿಯೂ ಹುಟ್ಟುತ್ತವೆ. ಈ ಒಂದೊಂದೂ ಅತ್ಯಂತ ಕಠಿಣವಾದ ಸಾಧನಗಳಾಗಿ ಕಂಡರೂ, ಶ್ರದ್ಧಾ ಪೂರ್ವಕವಾದ ಅಭ್ಯಾಸಕ್ಕೆ ಮೀರಿದವುಗಳೇನೂ ಅಲ್ಲ. ಆರೋಗ್ಯವನ್ನು ಬಯಸತಕ್ಕವನು ತನ್ನಲ್ಲಿ ಆರೋಗ್ಯದ ಕೊರತೆಯನ್ನೂ, ಧನವನ್ನು ಬಯಸ ತಕ್ಕವನು ತನ್ನಲ್ಲಿ ಧನದ ಕೊರತೆಯನ್ನೂ, ಹೀಗೆಯೇ ಯಾರು ಏನನ್ನು ಬಯಸಿದರೂ ಅದರ ಕೊರತೆಯನ್ನೇ ತನ್ನಲ್ಲಿ ಒಪ್ಪಿಕೊಂಡಂತೆ ಕರ್ಮಗಳಿಂದ ಸುಖವನ್ನು ಬಯಸುವವನು ತನ್ನಲ್ಲಿ ಸುಖದ ಕೊರತೆಯನ್ನೇ ಒಪ್ಪಿಕೊಳ್ಳು ತ್ತಿದ್ದಾನೆ. ಆದರೆ ಚೆನ್ನಾಗಿ ವಿಚಾರಮಾಡಿದರೆ, ಹೊರಗಿನಿಂದ ನಾವು ಪ್ರಯತ್ನ ಪೂರ್ವಕವಾಗಿ ಪಡೆಯಬೇಕೆಂದು ಹಂಬಲಿಸುತ್ತಿರುವ ಸುಖವು ನಮ್ಮೊಳಗೇ ಇದೆಯೆಂಬುದು ಸ್ಪಷ್ಟವಾಗುತ್ತದೆ.

ನಾವೇ ಸುಖಸ್ವರೂಪರಾಗಿರುವುದರಿಂದ, ಸಮುದ್ರದಲ್ಲಿ ಹೇಗೆ ನೀರಿಗೆ ಕೊರತೆಯಿಲ್ಲವೋ ಹಾಗೆ ನಮ್ಮಲ್ಲಿಯೂ ಸುಖಕ್ಕೆ ಕೊರತೆಯೇ ಇಲ್ಲ. ಆದರೂ ಸಮುದ್ರಜಲದಲ್ಲಿ ನೀರಡಿಕೆಯನ್ನೇ ಹೆಚ್ಚಿಸುವ ಉಪ್ಪೂ ಬೆರೆತಿರುವಂತೆ ನಮ್ಮಲ್ಲಿಯೂ ಸುಖದ ಹಂಬಲನ್ನೇ ಬೆಳೆಸುವ ಬಯಕೆಯೂ ಇದೆ. ಹೇಗೆ ಸಮುದ್ರಕ್ಕೆ ಹೊರಗಿನಿಂದ ನೀರನ್ನು ತಂದು ತುಂಬುವುದು ಬೇಡವೋ ಹಾಗೆ ನಮ್ಮಲ್ಲಿಯೂ ಹೊರಗಿನಿಂದ ಸುಖವನ್ನು ತಂದು ತುಂಬಿಕೊಳ್ಳುವುದು ಅಗತ್ಯ ವಿಲ್ಲ. ನೀರಡಿಕೆಯನ್ನು ಹೆಚ್ಚಿಸುವ ಉಪ್ಪನ್ನು ಮಾತ್ರ ಸಮುದ್ರದಿಂದ ಕಳೆದರೆ ಸಮುದ್ರವೇ ಮಧುರವಾಗುವಂತೆ, ಸುಖದ ಹಂಬಲದಿಂದ ಸುಖದ ಕೊರತೆ ಯನ್ನೇ ಹೆಚ್ಚುಹೆಚ್ಚಾಗಿ ಬೆಳೆಸಿ ತೋರಿಸುತ್ತಿರುವ ಬಯಕೆಯನ್ನು (ಕಾಮ ವನ್ನು) ಮಾತ್ರ ಕಳೆದರೆ ನಾವೇ ಅಮೃತಮಯರಾಗುತ್ತೇವೆ. ಆದರೆ ಅಂತಃ ಕರಣದಿಂದ ಕಾಮವನ್ನು ಕಳೆಯುವುದೆಂಬುದು ಸಮುದ್ರಜಲದಿಂದ ಉಪ್ಪನ್ನು ಕಳೆದಷ್ಟೇ ದುಸ್ಸಾಧ್ಯವಾಗಿದೆ. ಏಕೆಂದರೆ ತೈತ್ತಿರೀಯವು '**ಸೋಕಾಮಯತ**' ಎಂದು ಹೇಳುವಂತೆ ಸೃಷ್ಟಿಯಾಗಿರುವುದೇ ಕಾಮದಿಂದಲಾದ್ದರಿಂದ – ಮಣ್ಣೇ ಮಡಿಕೆಯಾಗಿರುವಂತೆ – ಈಶ್ವರನ ಕಾಮವೇ ಕರ್ಮರೂಪ ಸೃಷ್ಟಿಯಾಗಿದೆ. ಜೀವಲೋಕದಲ್ಲಿಯೂ ಕಾಮದಿಂದಲೇ ಸೃಷ್ಟಿಸ್ಥಿತಿಗಳನ್ನು ನೋಡುತ್ತೇವೆ. ಕಾಮಹರನಾದವನು ಹರನೊಬ್ಬನೇ. ಒಂದು ದೃಷ್ಟಿಯಿಂದ "ಮಣ್ಣನ್ನು ಪೂರಾ ಕಳೆದು ಮಡಿಕೆಯನ್ನು ಉಳಿಸುವಂತೆಯೇ ಕಾಮವನ್ನು ಪೂರಾ ಕಳೆದು ಲೋಕವನ್ನು ಉಳಿಸುವುದು' ಎನ್ನಬಹುದು. ಲೋಕಪಾಲಕನೂ ವಿಶ್ವ ವ್ಯಾಪಿಯೂ ಆದ ವಿಷ್ಣುವಿನ (ಕೃಷ್ಣನ) ಮಗನೇ ಕಾಮ ಅಥವಾ ಮನ್ಮಥ. ವಿಷ್ಣುವು ಪ್ರವೃತ್ತಿಧರ್ಮಕ್ಕೆ ಅಧಿದೇವ. ಹರನು ಅಥವಾ ಶಿವನು ನಿವೃತ್ತಿ ಧರ್ಮಕ್ಕೆ ಅಭಿಮಾನಿ ದೇವತೆ. ಆದ್ದರಿಂದ ನಿವೃತ್ತಿನಾಥನಾದ ಪರಶಿವನು ಮನ್ಮಥಹರನಾದ. ಪ್ರವೃತ್ತಿಗೊಡೆಯನಾದ ವಿಷ್ಣುವು (ಕೃಷ್ಣನು),

**ಧರ್ಮಾವಿರುದ್ಧೋ ಕಾಮೋಸ್ಮಿ ಭೂತೇಷು ಭರತರ್ಷಭ ।**

" ಪ್ರಾಣಿಗಳಲ್ಲಿ ಧರ್ಮಕ್ಕೆ ಅವಿರೋಧಿಯಾದ ಕಾಮವೇ ನಾನು " ಎಂದಿದ್ದಾನೆ. ಕಾಮವು ನಿಷ್ಕಾಮವಾಗಬೇಕಾದರೆ ಜೀವರಲ್ಲಿ ಸ್ವೇಚ್ಛಾವಿಲಾಸಿಯಾಗಿರುವ ಕಾಮವು ಮೊದಲು ಧರ್ಮದ ಅಂಕಿತಕ್ಕೆ ಬಂದು ಧರ್ಮಕಾಮವಾಗಬೇಕು. ಅನಂತರ ಧರ್ಮಕ್ಕೆ ವಿರೋಧವಿಲ್ಲದಂತೆ ಧನಕಾಮ, ಸ್ತ್ರೀಕಾಮ ಮೊದಲಾದವು

ಗಳು ಬೆಳೆಯಬಹುದು. ಪ್ರಮಾಣ, ಸಂವಿಧಾನಗಳನ್ನು ತಿಳಿದು ಶಾಸ್ತ್ರೀಯವಾಗಿ ಹಿತ-ಮಿತವಾಗಿ ಉಪಯೋಗಿಸುವುದರಿಂದ ವಿಷವೂ ಔಷಧವಾಗುವಂತೆ ಕಾಮವೂ ಧರ್ಮಸಮ್ಮತವಾದರೆ ಅಮೃತವೇ ಆಗುತ್ತದೆ. ಕುಟುಂಬಿಯು ಪರಿವಾರವುಳ್ಳವನಾದುದರಿಂದ ಆ ಕುಟುಂಬದ ಸಂರಕ್ಷಣವು ಅವನ ಧರ್ಮವಾಗಿದೆ. ತನ್ನ ಧರ್ಮಪಾಲನೆಗಾಗಿ ಅವನು ಧನಧಾನ್ಯಾದಿಗಳನ್ನು ಬಯಸಿ ಅದಕ್ಕೆ ತಕ್ಕವಾದ ಕರ್ಮಮಾಡಿದರೆ ಅವನ ಸಂಪಾದನೆಯು ಧರ್ಮಕ್ಕಾಗಿಯೇ ಅಂದರೆ ಜನರಲ್ಲಿ ಹಂಚುವುದಕ್ಕಾಗಿಯೇ ಇರುವುದರಿಂದ ತಪ್ಪಾಗುವುದಿಲ್ಲ. ಏಕೆಂದರೆ ಗೃಹಸ್ಥನು ಶಾಸ್ತ್ರೀಯವಾಗಿ ಸಕಾಲದಲ್ಲಿ ಸ್ತ್ರೀರತಿ ಮಾಡಿದರೂ ಬ್ರಹ್ಮಚಾರಿಯೆನ್ನಿಸಿಕೊಳ್ಳುವಂತೆ ಗೃಹಸ್ಥನ ಧರ್ಮಸಮ್ಮತವಾದ ಕಾಮವನ್ನೂ ನಿಷ್ಕಾಮವೆಂದೇ ಹೇಳಬೇಕು.

ಧರ್ಮಕಾಮವು ಲೋಕಕಲ್ಯಾಣ ಕಾಮವೂ ಆಗಬಹುದು. ಶುದ್ಧವಾದ ಧರ್ಮಕಾಮವು ತಪಸ್ತೇಜದಿಂದ ಪುಟವಿಟ್ಟಂತಾಗಿ ಮೋಕ್ಷಕಾಮವಾದಾಗ ಕಾಮವು ಪವಿತ್ರವಾಗುವುದು. ಆದರೆ ಆ ಕಾಮವು, ಪೂರ್ಣಕಾಮನೂ ಪ್ರೇಮಾನಂದರೂಪನೂ ಆದ ಪರಶಿವನನ್ನು ಹೊಂದಿದಾಗ ಅದು ಧನ್ಯವಾಗಿಯೂ ಸಾರ್ಥಕವಾಗಿಯೂ ಪೂರ್ಣ ನಿಷ್ಕಾಮವಾಗಿಯೂ ಆಗುತ್ತದೆ.

ಕರ್ಮಯೋಗದಲ್ಲಿ ನಿಷ್ಕಾಮವಾಗಿ ಕರ್ಮವನ್ನು ಮಾಡಬೇಕೆಂಬುದು ಪರಮಾದರ್ಶವಾದರೂ ಧರ್ಮಕಾಮಿಯು ಮೋಕ್ಷಕಾಮದಿಂದಲೂ, ಭಗವತ್ಪ್ರೇಮದಿಂದಲೂ ಲೋಕಸಂರಕ್ಷಣ ಕಾಮದಿಂದಲೂ ಕರ್ಮಮಾಡುವುದು ಉತ್ತರೋತ್ತರ ಉತ್ತಮವಾದ ಕೆಲಸಗಳು.

ಪೌರಾಣಿಕವಾಗಿ ಕಾಮನ ಪತ್ನಿಯೇ ರತೀದೇವಿಯಿರುವಂತೆ ತಾತ್ತ್ವಿಕವಾಗಿ ಕಾಮನ ಶಕ್ತಿಯೇ ರತಿಯಾಗಿದೆ; ಅಥವಾ ವಿಷಯಕಾಮನೆಯಿಂದ ವಿಷಯಾಸಕ್ತಿಯುಂಟಾಗುವುದು ಸಹಜವಾಗಿದೆ. ಗೀತೆಯಲ್ಲಿ ಶ್ರೀಕೃಷ್ಣನು,

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ |**
**ಸಂಗಾತ್ ಸಂಜಾಯತೇ ಕಾಮಃ .... ... .... .... ||**

“(ತನ್ನನ್ನು ತಾನು ಮರೆತು) ವಿಷಯಗಳನ್ನು ಚಿಂತಿಸುವುದಕ್ಕೆ ತೊಡಗಿದೊಡನೆ ವಿಷಯಗಳಲ್ಲಿಯೇ ಮನಸ್ಸು ತೊಡಕಿಕೊಳ್ಳುತ್ತದೆ; ಅಥವಾ ವಿಷಯಗಳಲ್ಲಿ

ನಮಗೆ ಅಭಿಮಾನ ಅಭಿನಿವೇಶಗಳುಂಟಾಗುತ್ತವೆ. ವಿಷಯಸಂಗದಿಂದ ವಿಷಯಕಾಮನವೂ, ವಿಷಯೇಚ್ಛೆಯಿಂದ ವಿಷಯಾಸಕ್ತಿಯೂ ಉಂಟಾಗುತ್ತವೆ. ಯಾವ ವಿಷಯವನ್ನೂ ಸ್ಮರಿಸದೇ ಇದ್ದರೆ ಮನಸ್ಸು ವಿಷಯದಲ್ಲಿ ತೊಡಕಿ ವಿಷಯಾಕಾರವಾಗುವುದಿಲ್ಲ. ವಿಷಯಾಕಾರವಾಗದೇ ವಿಷಯದ ಬಯಕೆಯೂ ಉಂಟಾಗುವುದಿಲ್ಲ. ಬಯಕೆಯೇ ಉಂಟಾಗದೇ ವಿಷಯಾಸಕ್ತಿಯೂ ಉದಿಸುವುದಿಲ್ಲ. ಆಸಕ್ತಿಯೆಂದರೆ ತಾನು ಬಯಸಿದ ವಿಷಯವು ತನಗೆ ಬೇಕೇಬೇಕೆಂದೂ ಅದು ತನ್ನ ಜೀವಪ್ರಾಣವೆಂದೂ ಅದರಿಂದಲೇ ತನ್ನ ಸುಖವಿರುವುದೆಂದೂ ತಿಳಿಯುವ ತೀವ್ರವಾದ ಮನೋಭಾವ. ಯಾವುದೊಂದು ವಿಷಯದಲ್ಲಾಗಲೀ ಕರ್ಮದಲ್ಲಾಗಲೀ ಕರ್ಮಫಲದಲ್ಲಾಗಲೀ ಆಸಕ್ತಿಹೊಂದಿದರೆ ಆ ಸಂಬಂಧವಾದ ವೃತ್ತಿಯೇ ಹೃದಯವನ್ನೆಲ್ಲಾ ಆಕ್ರಮಿಸಿ ಅವಿಚಾರಿಯನ್ನಾಗಿಯೂ ಅಸ್ವತಂತ್ರನನ್ನಾಗಿಯೂ ಮಾಡುತ್ತದೆ. ಯಾವುದೊಂದು ವಿಷಯದಲ್ಲಿ ಆಸಕ್ತವಾದ ವೃತ್ತಿಯಲ್ಲಿ ವಿವೇಕವಾಗಲೀ ಆತ್ಮಸ್ಫುರಣವಾಗಲೀ ಆನಂದವಾಗಲೀ ಸ್ವಾತಂತ್ರ್ಯವಾಗಲೀ ಮುಕ್ತತೆಯಾಗಲೀ ಉಳಿಯುವುದಿಲ್ಲ. ಅದರಿಂದ ಮನಸ್ಸು ವಿವೇಕಯುಕ್ತವಾದ ಬುದ್ಧಿಯ ನಿಯಂತ್ರಣಕ್ಕೆ ಸಿಕ್ಕದೇ ಯಾವುದಾದರೊಂದು ವಿಷಯಚಿಂತನದ ತೊಡಕಿನಲ್ಲಿಯೇ ಪುನಃ ಪುನಃ ಸಿಕ್ಕು ಪೇಚಾಡುತ್ತಿರುವ ಚಟವನ್ನೇ ಅಭ್ಯಾಸಮಾಡಿದಂತಾಗುತ್ತದೆ. ಇದರಿಂದ ಅಂತಃಕರಣವು ನಿಸ್ಸತ್ವವೂ ದುರ್ಬಲವೂ ತಪೋಹೀನವೂ ತೇಜೋರಹಿತವೂ ಆಗುತ್ತವೆ. ಆದರೆ ಕರ್ಮಯೋಗದ ಉದ್ದೇಶವು ಕರ್ಮೇಂದ್ರಿಯಗಳಿಂದ ಕರ್ಮವನ್ನು ಮಾಡಿದರೂ ಅಂತಃಕರಣದಲ್ಲಿ ಆತ್ಮಸ್ಫುರಣವೂ, ಆನಂದವೂ ಸ್ವಾತಂತ್ರ್ಯವೂ ಶಾಂತಿಯೂ ಇರಬೇಕೆಂಬುದೇ ಆಗಿದೆ. ಕರ್ಮಮಾಡುವುದಕ್ಕೆ ಅಗತ್ಯವಾದುದಕ್ಕಿಂತಲೂ ಹೆಚ್ಚಿನ ಮಾನಸಿಕ ಶಕ್ತಿಯು ನಿರರ್ಥಕವಾಗಿ ಆಸಕ್ತಿಯಿಂದ ವ್ಯಯವಾಗುತ್ತದೆ. ಆದ್ದರಿಂದ ಶಕ್ತಿಯನ್ನು ಸದ್ವಿನಿಯೋಗ ಮಾಡುವುದಕ್ಕೂ ಸಂರಕ್ಷಣ ಮಾಡುವುದಕ್ಕೂ ಅನಾಸಕ್ತಿಯು ಅಗತ್ಯ. ನಿಸ್ಸಂಗನಾಗದೇ ನಿಷ್ಕಾಮನಾಗುವುದಕ್ಕೂ ನಿಷ್ಕಾಮನಾಗದೇ ನಿರಾಸಕ್ತನಾಗುವುದಕ್ಕೂ ಬರುವುದಿಲ್ಲ. ನಿರಾಸಕ್ತನಾಗದೇ ಜನ್ಮಕರ್ಮಗಳೂ ದುಃಖವೂ ವಿಷಯಪರಾಧೀನತೆಯೂ ತಪ್ಪುವುದಿಲ್ಲ; ಹಾಗೂ ನಿಜಾನಂದವೂ ಆತ್ಮಸ್ವಾತಂತ್ರ್ಯವೂ ಉಳಿಯುವುದಿಲ್ಲ.

ಒಂದು ಜಾತ್ರೆಗೆ ಹೋದಾಗ ನಾವು ಸಹಸ್ರಾರು ಜನ ಹೊಸಬರನ್ನ ನೋಡಬಹುದು. ಆದರೆ ಯಾರ ವಿಷಯದಲ್ಲಿ ಮನಸ್ಸಿಗೆ ಹೆಚ್ಚು ಆಸ ಯಿರುವುದೋ ಆ ವ್ಯಕ್ತಿಯನ್ನೇ ಮನಸ್ಸು ನೆನಪಿಟ್ಟುಕೊಳ್ಳುತ್ತದೆ. ಆ ವ್ಯಕ್ತಿ ಸಂಬಂಧಪಟ್ಟ ಅನೇಕ ವರ್ಷಗಳ ಹಲವು ವಿಷಯಗಳು ತರಂಗ ತರಂಗವಾ ಅಂತರಂಗದ ಅಂತರಾಳದಿಂದ ಮೇಲೆದ್ದು ಬಂದು ಮನಸ್ಸನ್ನೆಲ್ಲಾ ಮುಸು ಬಿಡುತ್ತವೆ. ಆಸಕ್ತಿಪೂರ್ಣವಾದ ಭಾವನೆಯು ತೀವ್ರವಾಗಿ ಆ ವ್ಯಕ್ತಿಯ ಕಣ್ಣಿಗೆ ಕಟ್ಟಿದಂತಾಗುತ್ತದೆ. ಆ ವ್ಯಕ್ತಿಯು ನಮಗೆ ಇಷ್ಟವಾದವನೋ ಅನಿಷ್ಟವಾದವನೋ ಎನ್ನುವುದರ ಮೇಲೆ ಆಸಕ್ತಿಯ ತೀವ್ರತೆಯನ್ನು ಅ ಲಂಬಿಸಿಯೇ ರಾಗದ್ವೇಷವೃತ್ತಿಗಳೂ ಆಕರ್ಷಣ-ವಿಕರ್ಷಣ ಶಕ್ತಿಗಳೂ ಉ ಸುತ್ತವೆ. ಅಂತು ಆಸಕ್ತಿಯು ಚಿತ್ತದಲ್ಲಿ ಆಳವಾದ ಚಿತ್ರವನ್ನು ಕೆತ್ತುತ್ತದೆ ಆ ಚಿತ್ರವನ್ನು ಚಿತ್ತವು ತನ್ನಲ್ಲಿ ಮುಚ್ಚಿಟ್ಟುಕೊಂಡು ಬೇಕುಬೇಕಾದಾಗ ಮೇಲಕ್ಕೆ ಸ್ಮೃತಿರೂಪವಲ್ಲ ತೆಗೆದು ಕಣ್ಣೆದುರಿಗೆ ಹಿಡಿದುಕೊಂಡು ಅನುರಾ ವನ್ನೋ ವಿದ್ವೇಷವನ್ನೋ ಮಾಡುತ್ತಿರುತ್ತದೆ. ಆ ಭಾವಗಳಿಗೆ ಅನುಸಾ ವಾದ ಕರ್ಮವೂ ಕರ್ಮಾನುಗುಣವಾದ ಫಲವೂ ತಪ್ಪುವುದಿಲ್ಲ. ಆದ್ದರಿಂ ಸರ್ವ ಅನರ್ಥಗಳಿಗೂ ಆಸಕ್ತಿಯೇ (ಸಮೀಪ) ಸಾಕ್ಷಾತ್ ಸಾಧನವಾಗಿದೆ. ಜಾತ್ರೆಯಲ್ಲಿ ಬೇರೆ ಅನೇಕರನ್ನು ನೋಡಿದ್ದರೂ ಅವರ ವಿಷಯದಲ್ಲಿ ಮನಸ್ಸಿ ಆಸಕ್ತಿಯಿಲ್ಲವಾದ್ದರಿಂದ ಅವರ ಗುಣ-ಸ್ವಭಾವ-ನಾಮ-ರೂಪಗಳು ಮನಸ್ಸಿ ನಲ್ಲಿ ಮತ್ತೆ ಮತ್ತೆ ಅಲೆಯಲೆಯಾಗಿ ಎದ್ದು ಶಾಂತಿಗೆ ಭಂಗ ತರುವುದಿಲ್ಲ ನಿಶ್ಚಿಂತೆಯಿಂದಲೇ ಮನಶ್ಶಾಂತಿಯೂ ಆನಂದವೂ ಮುಕ್ತಿಯೂ ಲಭಿಸುವುದು ಆದರೆ ವಿಷಯಾಸಕ್ತಿಯು ಇದಕ್ಕೆ ಭಂಗಕಾರಿ. ಆಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡುವುದಕ್ಕೆ ಕರ್ತವ್ಯಭಾವನೆಯೇ ಸಾಕಾಗಿದೆ.

ಕರ್ಮದಲ್ಲಿ ಧರ್ಮವಾದುದು ಆವುದೋ ಅದೇ ಕರ್ತವ್ಯ. ಈ ಗ್ರಂಥ ಪ್ರಥಮ ಭಾಗದಲ್ಲಿ 'ಧರ್ಮ' ವನ್ನು ವಿಶೇಷವಾಗಿ ವಿಚಾರಮಾಡಿರುವುದರಿಂ ಅದರ ವಿಷಯದಲ್ಲಿ ನಾಲ್ಕು ಮಾತುಗಳನ್ನು ಮಾತ್ರ ಇಲ್ಲಿ ಹೇಳಬಹುದು ವೈಯಕ್ತಿಕವಾಗಿ ಅವರವರ ವಯೋನುಗುಣವಾಗಿಯೂ ಗುಣ-ಸ್ವಭಾವ- ಕ್ರಿಯಾಶಕ್ತಿಗಳಿಗನುಸಾರವಾಗಿಯೂ ಮತ್ತು ಸಾಮಾಜಿಕವಾಗಿ ಅವರವ ಸ್ಥಿತಿಗತಿ-ಸ್ಥಾನಮಾನಗಳ ಮೇಲೂ ಕರ್ತವ್ಯಗಳು ಬೇರೆಬೇರೆಯೇ ವ್ಯವಸ್ಥಿ

ವಾಗುತ್ತವೆ. ಚಿಕ್ಕ ವಯಸ್ಸಿನಲ್ಲಿ ಎಲ್ಲರೂ ವಿದ್ಯಾಭ್ಯಾಸಮಾಡುವುದು ಕರ್ತವ್ಯ ವಾದರೆ ದೊಡ್ಡವರಾದ ಮೇಲೆ ವಿದ್ಯಾದಾನ ಮಾಡುವುದೂ, ಉದ್ಯೋಗಮಾಡಿ ಧನಸಂಪಾದನೆ ಮಾಡುವುದೂ ಕರ್ತವ್ಯವಾಗುತ್ತದೆ. ಸಾತ್ವಿಕ ಗುಣವುಳ್ಳವ ನಿಗೆ ಅಹಿಂಸೆಯೂ ಶಾಂತಿಯೂ ಧರ್ಮವಾದರೆ ರಜೋಗುಣವುಳ್ಳವನಿಗೆ ದುಷ್ಟ ಶಿಕ್ಷಣವೂ ಪ್ರಗತಿಶೀಲ ಕ್ರಾಂತಿಯೂ ಕರ್ತವ್ಯವಾಗುತ್ತವೆ. ಬುದ್ಧಿಬಲವುಳ್ಳವ ನಿಗೆ ತನ್ನ ಬುದ್ಧಿಶಕ್ತಿಯನ್ನು ಸರ್ವರ ಹಿತಕ್ಕೂ ಉಪಯೋಗಿಸುವುದು ಕರ್ತವ್ಯ ವಾದರೆ ದೇಹಬಲವುಳ್ಳವನಿಗೆ ದೇಹಬಲವನ್ನೇ ಸರ್ವರ ಸುಖಕ್ಕೂ ಉಪ ಯೋಗಿಸುವುದು ಕರ್ತವ್ಯವಾಗುತ್ತದೆ. ಗೋರಕ್ಷಣವು ಹಿಂದುಗಳೆನಿಸಿಕೊಂಡವ ರಿಗೆ ಕರ್ತವ್ಯವಾದರೆ ಗೋಭಕ್ಷಣವೇ ಮುಹಮ್ಮದೀಯರಿಗೆ ಕರ್ತವ್ಯವಾಗ ಬಹುದು. ಹೀಗೆ ಒಬ್ಬರಿಗೆ ಕರ್ತವ್ಯವಾದುದು ಇನ್ನೊಬ್ಬರಿಗೆ ಕರ್ತವ್ಯವಲ್ಲ. ಒಬ್ಬನಿಗೇ ಒಂದು ಸಂದರ್ಭದಲ್ಲಿ ಕರ್ತವ್ಯವಾದುದು ಇನ್ನೊಂದು ಸಂದರ್ಭದಲ್ಲಿ ಕರ್ತವ್ಯವಾಗದಿರಬಹುದು. ಕೇವಲ ಬಾಹ್ಯದೃಷ್ಟಿಯಿಂದ ಇಂಥಾದ್ದೊಂದು ಕರ್ಮವು ಜಗತ್ತಿನಲ್ಲಿ ಎಲ್ಲರಿಗೂ ಕರ್ತವ್ಯವಾದುದೆಂದು ಹೇಳುವಂತೆಯೇ ಇಲ್ಲ. ವ್ಯಕ್ತಿಯ ನೈತಿಕ, ಆಧ್ಯಾತ್ಮಿಕ ಉನ್ನತಿಗೆ ಯಾವುದು ಸಾಧನವೋ ಅದೇ ಧರ್ಮವೆಂದೂ, ಕರ್ತವ್ಯವೆಂದೂ, ಸಾಮಾನ್ಯವಾಗಿ ಸಕರ್ತೃಕ ದೃಷ್ಟಿಯಿಂದ ಹೇಳಬಹುದು. ಸದಾಚಾರ ಸತ್ಸಂಪ್ರದಾಯಗಳೂ ಕರ್ತವ್ಯಕ್ಕೆ ಪ್ರಮಾಣ ಗಳಾಗಿವೆ. ಪರೋಪಕಾರವು ಸರ್ವರಿಗೂ ಸರ್ವ ದೇಶಕಾಲಗಳಲ್ಲಿಯೂ ಕರ್ತವ್ಯ. ಪರಹಿಂಸೆಯು ಸರ್ವರಿಗೂ ಪರಿತ್ಯಾಜ್ಯ. ಯಾರುಯಾರಿಗೆ ಯಾವ ಯಾವ ಕಾಲದಲ್ಲಿ ಏನೇನು ಕರ್ತವ್ಯವೆಂಬುದಕ್ಕೆ ಶಾಸ್ತ್ರವೇ ಪ್ರಮಾಣ ವೆಂದು ಗೀತೆಯು ಹೇಳುತ್ತದೆ.

**ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯ ವ್ಯವಸ್ಥಿತಾ |**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ||**

ನೀತಿನಿಷ್ಠವಾದ ಶುದ್ಧಾಂತಃಕರಣವುಳ್ಳವರಿಗೆ, ಯಾವ ಕಾಲದಲ್ಲಿ ಯಾವುದು ಕರ್ತವ್ಯವೆಂಬುದಕ್ಕೆ ಅವರವರ ಅಂತಃಕರಣದಲ್ಲಿ ತಾನೇತಾನಾಗಿ ಯಾವ ವೃತ್ತಿಯು ನಿರ್ಣಯಾತ್ಮಕವಾಗಿ ಎದ್ದು ನಿಲ್ಲುವುದೋ ಅದೇ ಕರ್ತವ್ಯ ವೆಂಬುದಕ್ಕೆ ಪ್ರಮಾಣವು.

ಪ್ರತಿಯೊಬ್ಬರಲ್ಲಿಯೂ ದೈವಿಕವಾದ ಮನಸ್ಸಾಕ್ಷಿಯಿದೆ. ಆದರೆ ಸಜ್ಜನ-ದುರ್ಜನರ ಮನಸ್ಸಾಕ್ಷಿಗಳು ಭಿನ್ನಭಿನ್ನವಾಗಿರುವುದರಿಂದ ಲೋಕಹಿತಕ್ಕೆ ಸಾಧಕವಾದ ಮನಸ್ಸಾಕ್ಷಿಯೇ ಸಾಧುವೂ ಪವಿತ್ರವೂ ಶಾಸ್ತ್ರಸಮ್ಮತವೂ ಆದುದು. ಪ್ರತಿಯೊಂದು ಸಂದರ್ಭದಲ್ಲಿಯೂ ಎಷ್ಟಾದರೂ ಅಪ್ರಿಯವೂ ಕಷ್ಟವೂ ಆಗಲಿ, ತಮ್ಮ ತಮ್ಮ ಮನಸ್ಸಾಕ್ಷಿಗೆ ಒಪ್ಪಾಗುವಂತೆ ನಡೆಯುವುದೇ ಅವರವರ ಕರ್ತವ್ಯ. ಮನಸ್ಸಾಕ್ಷಿಯನ್ನು ಮನ್ನಿಸುತ್ತಾ ಮನ್ನಿಸುತ್ತಾ ಅದು ಉಜ್ಜ್ವಲವಾಗಿರುವವರಲ್ಲಿ ಕರ್ತವ್ಯಜಾಗೃತಿಯೂ ಇರುತ್ತದೆ; ಮತ್ತು ಯಾವ ಸಂದರ್ಭದಲ್ಲಿ ಯಾವುದು ಕರ್ತವ್ಯವೆನ್ನುವುದು ಅವರ ಅಂತಃಕರಣದಲ್ಲಿ ಸ್ವಯಂಸ್ಫೂರ್ತವಾಗಿಯೇ ಉದಿಸುತ್ತದೆ.

ಕರ್ತವ್ಯದೃಷ್ಟಿಯಿಂದ ಕರ್ಮವನ್ನು ಮಾಡುವುದರಲ್ಲಿ ಅಭಿಮಾನಕ್ಕೂ ಆಸಕ್ತಿಗೂ ಫಲಾಪೇಕ್ಷೆಗೂ ಅವಕಾಶವಿರುವುದಿಲ್ಲ. ಯಾವ ಕರ್ಮವಾದರೂ ಶ್ರಮದಾಯಕವಾದುದರಿಂದ ಆಯಾಸಕರವಾದ ಕರ್ಮದಲ್ಲಿ ತೊಡಗಬೇಕಾದರೆ ಒಂದು ಪ್ರಚೋದನಾಶಕ್ತಿಯೂ ಪ್ರತೀಕ್ಷೆಯೂ ಬೇಕು. ಕರ್ಮದಲ್ಲಿರುವ ಅಭಿಮಾನವೂ ಆ ಕರ್ಮದಿಂದ ಲಭಿಸುವ ಫಲದ ಕಾಮನೆಯೂ ಕರ್ಮಫಲವನ್ನು ಸಾಧಿಸಿಯೇ ತೀರಬೇಕೆಂಬ ಆಸಕ್ತಿಯೂ ಕರ್ಮಕ್ಕೆ ಪ್ರಚೋದನಾಶಕ್ತಿಗಳು. ಆದರೆ ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದರೆ ಅಭಿಮಾನ, ಆಸಕ್ತಿ, ಫಲಕಾಮನೆಗಳೇ ಬಾಧಕಗಳೂ ಬಂಧಕಗಳೂ ಆಗಿವೆ; ಜೀವನ ಬ್ರಾಹ್ಮೀ ಶಕ್ತಿಯು ವ್ಯಕ್ತವಾಗುವುದಕ್ಕೆ ಈ ವೃತ್ತಿಗಳೇ ಪ್ರತಿಬಂಧಕಗಳಾಗಿವೆ. ಆದ್ದರಿಂದ ಈ ಅಭಿಮಾನಾದಿಗಳನ್ನು ತೊರೆದರೂ ಕರ್ಮಮಾಡಿಸುವುದಕ್ಕೆ ಪ್ರಬಲವಾದ ಪ್ರೇರಕಶಕ್ತಿಯಾಗಿರುವುದೆಂದರೆ ಅದು ಕರ್ತವ್ಯಭಾವನೆ ಒಂದೇ.

ತಾಯಿಯು ತನ್ನ ಮಕ್ಕಳನ್ನು ಸಲಹುವುದರಲ್ಲಾಗಲೀ, ರಾಜನು (ಅಥವಾ ರಾಜ್ಯಾಂಗವು) ತನ್ನ ಪ್ರಜೆಗಳನ್ನು ರಕ್ಷಣಮಾಡುವುದರಲ್ಲಾಗಲೀ ಅಭಿಮಾನಪಡುವಂತೆಯೂ ಗರ್ವಪಡುವಂತೆಯೂ ಯಾವುದೊಂದು ಫಲವನ್ನು ಬಯಸುವಂತೆಯೂ ಇಲ್ಲ. ರಕ್ಷಣವು ಅವರವರ ಕರ್ತವ್ಯವೆಂಬುದು ಜಗತ್ಪ್ರಸಿದ್ಧವೇ ಇರುವುದರಿಂದ ಅವರವರು ಆಯಾ ಕರ್ಮಗಳನ್ನು ಕರ್ತವ್ಯಭಾವನೆಯಿಂದಲೇ ಮಾಡುತ್ತಾರೆ. ಕರ್ತವ್ಯಭಾವನೆಯಿಂದ ಕರ್ಮಗಳನ್ನು ಮಾಡುವುದರಲ್ಲಿ ಸಮಾಧಾನವೂ ಸಂತೋಷವೂ ಇದೆ. ಕರ್ತವ್ಯಚ್ಯುತಿಯಾದಲ್ಲಿ

ಸಹೃದಯರಿಗೆ ನೈತಿಕಭೀತಿಯೂ ಇರುತ್ತದೆ; ಮತ್ತು ಕರ್ತವ್ಯ ನಡೆಸುವುದರಲ್ಲಿ ಸಾತ್ವಿಕವಾದ ಉದಾತ್ತ ಪ್ರೀತಿಯೂ ಇದೆ. ಕರ್ಮಾಚರಣೆಗೆ ಇದೇ ಸಾಕಷ್ಟು ಪ್ರಚೋದನಾಶಕ್ತಿಯಾಗಿದೆ.

ಕರ್ಮಯೋಗದಲ್ಲಿ ಕರ್ತವ್ಯನಿರ್ವಹಣೆ ಮಾಡುವುದರಿಂದ ದೊರೆಯುವ ಒಂದು ನೈತಿಕ ಸಮಾಧಾನವೂ ಸಂತೋಷವೂ ಮುಖ್ಯವೇ ಹೊರತು ಕರ್ಮಫಲವಾಗಲೀ ಅದರ ಅಭಿಮಾನ ಆಸಕ್ತಿಗಳಾಗಲೀ ಮುಖ್ಯವಲ್ಲ. ಕರ್ಮವು ಕರ್ತವ್ಯವೆಂಬ ಪವಿತ್ರ ಪೀಠಕ್ಕೆ ಏರಿದೊಡನೆಯೇ ಪೂಜ್ಯವೂ ದಿವ್ಯವೂ ಆಗುತ್ತದೆ. ಕರ್ತವ್ಯದಲ್ಲಿ ನೀಚವೆಂಬುದೂ ನಿಂದ್ಯವೆಂಬುದೂ ಪಾಪವೆಂಬುದೂ ಪಶ್ಚಾತ್ತಾಪಕರವೆಂಬುದೂ ಇಲ್ಲವೇ ಇಲ್ಲ. ಕರ್ತವ್ಯಭಾವನೆಯಿಂದ ಅಪರಾಧಿಗೆ ಮರಣದಂಡನೆಯನ್ನು ವಿಧಿಸುವ ನ್ಯಾಯಮೂರ್ತಿಯು ಎಷ್ಟು ಗೌರವನೀಯನೋ, ಅವನ ಆಜ್ಞೆಯನ್ನು ಕರ್ತವ್ಯದೃಷ್ಟಿಯಿಂದ ಕಾರ್ಯರೂಪಕ್ಕೆ ತಂದು ಆ ಅಪರಾಧಿಗಳ ಪ್ರಾಣಹರಣ ಮಾಡುವ ಕಠೋರಕರ್ಮಿಯಾದ ದಂಡನಾಯಕನೂ ಅಷ್ಟೇ ಮಾನ್ಯನು. ಏಕೆಂದರೆ ನ್ಯಾಯಾಧೀಶನೂ ಅವನ ಆಜ್ಞಾನಿರ್ವಾಹಕನಾದ ಕೊಲೆಗಡುಕನೂ ಉಭಯರೂ ಪರಸ್ಪರ ಪೂರಕರೂ, ಪ್ರತಿಯೊಂದು ಸಮಾಜಕ್ಕೂ ರಾಷ್ಟ್ರಕ್ಕೂ (ಜಗತ್ತಿಗೂ)—ದುಷ್ಟನಿಗ್ರಾಹಕವಾದ ಕ್ಷಾತ್ರಧರ್ಮಪಾಲನೆಗೆ—ಅತ್ಯಗತ್ಯರೂ ಆಗಿದ್ದಾರೆ. ಆ ಅಧಿಕಾರಿಗಳೂ ಅವರ ಕರ್ತವ್ಯಗಳೂ ಸದ್ಯಃಪ್ರಪಂಚ ಪರಿಸ್ಥಿತಿಯಲ್ಲಿ ಇಲ್ಲದಿದ್ದರೆ ಜಗತ್ತೇ ಉಳಿಯುವಂತಿಲ್ಲ. ಕೃತಯುಗದಲ್ಲಿಯೂ ರಾಮರಾಜ್ಯದಲ್ಲಿಯೂ ಅವರಿದ್ದರು. ಆದ್ದರಿಂದ ಆ ಇಬ್ಬರಲ್ಲಿಯೂ ಲೋಕರಕ್ಷಣ ದೃಷ್ಟಿಯಿಂದ ವಿಷ್ಣುತ್ವದ ಅಂಶವೂ, ಲಯಕರ್ಮದ ದೃಷ್ಟಿಯಿಂದ ರುದ್ರತ್ವದ ಅಂಶವೂ ಇವೆ.

ಸಿಂಹಾಸನದ ಮೇಲಿರುವ ಸಾರ್ವಭೌಮನ ರಾಜ್ಯಪರಿಪಾಲನವು ಎಷ್ಟು ಕರ್ತವ್ಯವೋ ಬೀದಿಯಲ್ಲಿರುವ ಝಾಡಮಾಲಿಯು ಬೀದಿ ಗುಡಿಸುವ ಕರ್ಮವೂ ಅಷ್ಟೇ ಕರ್ತವ್ಯ ಹಾಗೂ ಅಗತ್ಯ ಮತ್ತು ಮಾನ್ಯ. ಯಾವುದೊಂದಿಲ್ಲದಿದ್ದರೂ ಜಗತ್ತಿನ ವ್ಯವಹಾರವು ನಡೆಯುವುದಿಲ್ಲ. ಅವುಗಳಲ್ಲಿ ಉಚ್ಚನೀಚಗಳೂ ಇಲ್ಲ. ಭಂಗಿಯ (ಪಾಯಖಾನ ಬಾಚುವ) ಕರ್ಮವು ನೀಚವಾದರೆ ಆ ಭಂಗಿಯನ್ನು

ನಿರಂತರ ಆ ನೀಚಕರ್ಮದಲ್ಲಿಯೇ ನಿಯಮಿಸಿಕೊಂಡಿರತಕ್ಕ ಜನರೂ ಸಮಾಜವೂ ಎಷ್ಟು ನೀಚವೆನ್ನಿಸಿಕೊಳ್ಳಬೇಕು ? ಹಾಗಾದರೆ ನಿರ್ದಾಕ್ಷಿಣ್ಯವಾಗಿ ಎಲ್ಲರನ್ನೂ ನೀಚರೆನ್ನೋಣ ಎಂದರೆ. ಉಚ್ಚವೆನ್ನುವುದೊಂದು ಇಲ್ಲದೆ ನೀಚವೆನ್ನುವ ಭಾವವೇ ಹುಟ್ಟುವುದಿಲ್ಲ. ಭಂಗಿಯ ಅಗತ್ಯವಿಲ್ಲದೆ ತಮ್ಮ ತಮ್ಮ ಮಲಗಳ ವ್ಯವಸ್ಥೆಯನ್ನು ತಾವುತಾವೇ ಮಾಡಿಕೊಳ್ಳುವವರೇ ಉಚ್ಚರೆನ್ನುವು ದಾದರೆ, ಇಂಥಾ ದುರಭಿಮಾನಿಗಳಾದ ಸ್ವಾರ್ಥಿಗಳಿಗಿಂತಲೂ ಹೇಸಿಕೆಯಿಲ್ಲದೆ ಕರ್ತವ್ಯಭಾವನೆಯಿಂದ ಊರಿನ ಮಲವನ್ನೆಲ್ಲಾ ಸ್ವಚ್ಛಮಾಡತಕ್ಕ ಪರೋಪಕಾರಿಯಾದ ಭಂಗಿಯೇ ಉಚ್ಚವರ್ಗದವನೂ ವಂದ್ಯನೂ ಆಗಿರುವನೆನ್ನಬಾರದೇಕೆ ? ಆದ್ದರಿಂದಲೇ ಗೀತೆಯಲ್ಲಿ ಕೃಷ್ಣನು,

**ಸರ್ವಾರಂಭಾಹಿ ದೋಷೇಣ ಧೂಮೇನಾಗ್ನಿರಿವಾವೃತಾ ॥**

"ಬೆಂಕಿಯಿರುವಲ್ಲೆಲ್ಲಾ ಅಸ್ಟಿಷ್ಟು ಹೊಗೆಯೂ ಇದ್ದೇ ಇರುವಂತೆ ಎಲ್ಲಾ ಕರ್ಮಗಳೂ ದೋಷಗಳಿಂದ ಕೂಡಿವೆ." ಆದರೆ ಕರ್ತವ್ಯವೆಂಬ ಯಜ್ಞಕುಂಡಕ್ಕೆ ಸೇರಿದ ಯಾವ ಕರ್ಮವೂ ಹೋಮವಾಗದೆಯೂ ಪವಿತ್ರವಾಗದೆಯೂ ಉಳಿಯುವುದಿಲ್ಲ.

ಆದ್ದರಿಂದ ಕರ್ತವ್ಯಕರ್ಮವು ಪುಣ್ಯವಾಗಲೀ ಪಾಪವಾಗಲೀ ಹಿಂಸೆಯಾಗಲೀ ಅಹಿಂಸೆಯಾಗಲೀ ಅದರಿಂದ ಸುಖವಾಗಲೀ ದುಃಖವಾಗಲೀ ಲಾಭವಾಗಲೀ ನಷ್ಟವೇ ಆಗಲಿ, ಜಯವಾಗಲಿ ಅಪಜಯವೇ ಆಗಲಿ, ಕೀರ್ತಿ ಬರಲಿ ಅಪಕೀರ್ತಿಯೇ ಬರಲಿ ಕರ್ತವ್ಯನಿಷ್ಠನು ಆ ದ್ವಂದ್ವಗಳ ಬಗೆಗೆ ಉದಾಸೀನನೂ ನಿರ್ಲಕ್ಷ್ಯಸ್ವಭಾವದವನೂ ಸಮಬುದ್ಧಿಯುಳ್ಳವನೂ ಸಂತೋಷವೃತ್ತಿಯುಳ್ಳವನೂ ಧೀರನೂ ದಕ್ಷನೂ ಪರಾಕ್ರಮಿಯೂ ಉತ್ಸಾಹಶಾಲಿಯೂ ಆಗಿರುತ್ತಾನೆ. ಕರ್ತವ್ಯಭಾವನೆಯಲ್ಲಿ ಅದ್ಭುತ ಮಾಂತ್ರಿಕಶಕ್ತಿಯಿದೆ; ಇಂದ್ರಜಾಲಶಕ್ತಿಯಿದೆ. ಬೇರೆ ಯಾವ ಭಾವನೆಯಿಂದಲೂ ಮಾಡಿಸಲಿಕ್ಕಾಗದ ಒಂದು ಕಾರ್ಯವನ್ನು ಕರ್ತವ್ಯಭಾವನೆಯನ್ನು ಹುಟ್ಟಿಸುವುದರಿಂದ ಮಾಡಿಸಬಹುದು.

ಭಯಂಕರವಾದ ಯುದ್ಧಕರ್ಮವನ್ನು ಮಾಡಿ ಬಂಧುಬಾಂಧವರನ್ನೂ ಗುರುವರ್ಗದವರನ್ನೂ ಕೊಲ್ಲುವುದು ಪಾಪಕರವೆಂದೂ ನರಕಹೇತುವೆಂದೂ

ಮೋಹಿತನೂ ಶೋಕಸಂವಿಷ್ಟನೂ ಆದ ಅರ್ಜುನನು ಶಸ್ತ್ರಾಸ್ತ್ರಗಳನ್ನು ವಿಸರ್ಜಿಸಿ ಕುರುಕ್ಷೇತ್ರದಲ್ಲಿ ನಿರ್ವಿಣ್ಣನಾಗಿ ಕುಳಿತಿರಲು ಶ್ರೀಕೃಷ್ಣನು ಅವನಿಗೆ ಅನೇಕ ಬಗೆಯಿಂದ ಉಪದೇಶಿಸಿ ಅವನ ಶೋಕಮೋಹಗಳನ್ನು ಕಳೆದನು. ಯುದ್ಧಮಾಡುವುದಕ್ಕಾಗಿಯೇ ಬಂದಿದ್ದ ಅರ್ಜುನನಿಗೆ ಪ್ರತಿಬಂಧಕವಾಗಿದ್ದ ಮೋಹವನ್ನು ಕೃಷ್ಣನು ಪರಿಹರಿಸಿದೊಡನೆ ಅರ್ಜುನನು ತನ್ನ ಕರ್ತವ್ಯವಾದ ಯುದ್ಧಕರ್ಮವನ್ನು ಮಾಡಿ ವಿಜಯವನ್ನು ಹೊಂದಿ ಶ್ರೀಕೃಷ್ಣಾನುಗ್ರಹವನ್ನು ಸಂಪಾದಿಸಿದನು.

ಶ್ರೀಕೃಷ್ಣನ ಉಪದೇಶದಲ್ಲಿ ಸಾಂಖ್ಯ, ಯೋಗ, ವೇದಾಂತ ಮೊದಲಾದ ವಿಧವಿಧವಾದ ದಾರ್ಶನಿಕ ತತ್ತ್ವಗಳಡಗಿದ್ದರೂ ಯುದ್ಧದಿಂದ ಹಿಂದೆಗೆದ ಅರ್ಜುನನಿಂದ ಯುದ್ಧಮಾಡಿಸುವುದರಲ್ಲಿ ಪ್ರಚಂಡ ಪ್ರಭಾವವನ್ನು ಬೀರಿದ ಕರ್ತವ್ಯಬೋಧಕವಾದ ಎರಡುಮೂರು ಮಾತುಗಳು ಮುಖ್ಯವಾಗಿವೆ. ಅವು ಯಾವುವೆಂದರೆ,

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ**
**ನ ವಿದ್ಯತೇ ॥**

“ಕ್ಷತ್ರಿಯನಾದ ನೀನು ನಿನ್ನ ಧರ್ಮವನ್ನು ವಿಚಾರಿಸಿದರೂ ಹೆದರಲು ಯೋಗ್ಯವಲ್ಲ. ಏಕೆಂದರೆ ಧರ್ಮಯುದ್ಧಕ್ಕಿಂತಲೂ ಬೇರೆ ಶ್ರೇಯಸ್ಕರವಾದುದು ಕ್ಷತ್ರಿಯನಿಗೆ ಯಾವುದೂ ಇರುವುದಿಲ್ಲ.”

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥**

“ಲಾಭನಷ್ಟಗಳನ್ನೂ ಜಯಾಪಜಯಗಳನ್ನೂ ಅವುಗಳಿಂದೊದಗುವ ಫಲರೂಪವಾದ ಸುಖದುಃಖಗಳನ್ನೂ ಮನಸ್ಸಿನಿಂದ ಹರ್ಷವಿಷಾದಗಳನ್ನೂ ಹೊಂದದೆ ಸಮವಾಗಿ ತಿಳಿದು ಯುದ್ಧಕ್ಕೆ ಸಿದ್ಧನಾಗು ; ಹೀಗೆ ಮಾಡುವುದರಿಂದ ನೀನು (ಯುದ್ಧದಲ್ಲಿ ಗುರುಗಳೇ ಮೊದಲಾದವರನ್ನು ಕೊಂದರೂ) ಪಾಪವನ್ನು ಹೊಂದುವುದಿಲ್ಲ.”

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥**

"ಸರಿಯಾಗಿ ಅನುಸರಿಸಲ್ಪಟ್ಟ ಪರಧರ್ಮಕ್ಕಿಂತಲೂ ಗುಣರಹಿತವಾದ ತನ್ನ ಧರ್ಮವೇ ಶ್ರೇಯಸ್ಕರವಾದುದು. ತನ್ನ ಧರ್ಮದಲ್ಲಿ ಮರಣವೂ ಸಹ ಶ್ರೇಯಸ್ಕರವು; ಪರಧರ್ಮವು ಭಯವನ್ನುಂಟುಮಾಡುವುದು."

ಶ್ರೀ ಕೃಷ್ಣನ ಈ ಉಪದೇಶದಿಂದ ಯುದ್ಧಮಾಡುವುದು ತನ್ನ ಕರ್ತವ್ಯವೆಂಬ ಭಾವನೆಯು ಜಾಗೃತವಾದ್ದರಿಂದಲೇ ಅರ್ಜುನನು ಶೋಕಮೋಹಗಳನ್ನು ತೊರೆದು ಘೋರವಾದ ಯುದ್ಧಮಾಡಿದುದು.

ಸಾಮಾನ್ಯವಾಗಿ ಯಾರಿಗಾದರೂ ಜುಗುಪ್ಸೆ ಬರುವಂಥ ಪ್ರಸಂಗದಲ್ಲಿಯೂ ವೈದ್ಯನು ಶಸ್ತ್ರಚಿಕಿತ್ಸೆ ಮೊದಲಾದುವುಗಳನ್ನು ಮಾಡುವುದೂ ಕೇವಲ ಕರ್ತವ್ಯಬುದ್ಧಿಯಿಂದಲೇ ಆಗಿದೆ.

ಮಹಾಭಾರತದ ಧರ್ಮವ್ಯಾಧನು ಮಹಾ ಜ್ಞಾನಿಯಾದರೂ ತನ್ನ ಜನ್ಮಸಿದ್ಧವಾಗಿ ತನಗೆ ಬಂದ ಕರ್ತವ್ಯವಾದ ಕಟುಕರ ವೃತ್ತಿಯನ್ನೇ ನಡೆಸುತ್ತಿದ್ದನು. ಆದ್ದರಿಂದ ಕರ್ತವ್ಯಕರ್ಮಗಳನ್ನು ಮಾಡುವುದರಲ್ಲಿ ಪುಣ್ಯಪಾಪಗಳ ವಿವೇಚನೆಯೂ ಭಯವೂ ಇಲ್ಲ.

ಮೊನ್ನೆ ಮೊನ್ನೆ ಸೆಷನ್ಸ್ ನ್ಯಾಯಾಧೀಶರೊಬ್ಬರು ಒಂದು ಕಗ್ಗೊಲೆಯ ಕೇಸಿನಲ್ಲಿ ಶಿಕ್ಷೆಯನ್ನು ವಿಧಿಸುವ ದಿನ ತಮ್ಮ ತೀರ್ಮಾನವನ್ನು ಹೀಗೆ ಬರೆದು ಓದಿ ಹೇಳಿದರು; "ನಿರಪರಾಧಿಯಾದ ಒಬ್ಬನನ್ನು ಬಹುಕಾಲದ ದ್ವೇಷ ಸಾಧನ-ಸಂಚುಗಳಿಂದ ಈ ನಾಲ್ಕು ಜನರೂ ಕೊಲೆಮಾಡಿರುವರೆಂದು ಸಾಕ್ಷಿಗಳಿಂದಲೂ ವಾದಗಳಿಂದಲೂ ನಿಸ್ಸಂದೇಹವಾಗಿ ಸಿದ್ಧವಾಗಿರುವುದರಿಂದ ನನ್ನ ಕರ್ತವ್ಯವಾಗಿ ಈ ನಾಲ್ಕು ಜನರಿಗೂ ಮರಣದಂಡನೆಯನ್ನು ವಿಧಿಸಿದ್ದೇನೆ. 'ಒಂದು ಪ್ರಾಣವು ಹತವಾದುದಕ್ಕೆ ಪ್ರಾಯಶ್ಚಿತ್ತವಾಗಿ ನಾಲ್ಕು ಪ್ರಾಣಗಳನ್ನು ಆಹುತಿ ತೆಗೆದುಕೊಳ್ಳುವುದು ನ್ಯಾಯವೇ?' ಎನ್ನಿಸಬಹುದು; ಆದರೆ ಯಾರೊಬ್ಬರಿಗೆ ಸ್ವಲ್ಪ ನೋವಾದರೂ ಮರುಗುವ ಸ್ವಭಾವವುಳ್ಳ ನಾನೇ ನ್ಯಾಯಾಧೀಶನಾಗಿ ಕುಳಿತಾಗ, ಅನ್ಯಾಯವಾಗಿ ಒಬ್ಬ ಮನುಷ್ಯನ ಕೊಲೆಯಾದುದಕ್ಕೆ ದ್ವೇಷದಿಂದ ನೂರು ಜನರು ಕಾರಣರಾಗಿದ್ದಾರೆಂದು ಸಿದ್ಧವಾದರೂ

ನೂರು ಜನರಿಗೂ ನಿರ್ದಯದಿಂದ ಮರಣದಂಡನೆಯನ್ನು ವಿಧಿಸುವುದು ನ್ನ ಕರ್ತವ್ಯವೆಂದು ಭಾವಿಸುತ್ತೇನೆ. ”

ಇದರಿಂದ ಕರ್ತವ್ಯಭಾವನೆಯು ಎಂಥಾ ಕಠೋರಕರ್ಮವನ್ನಾದರೂ ೀಮಲ ಮನಸ್ಸಿನವರಿಂದಲೂ ಮಾಡಿಸುವ ಶಕ್ತಿಯುಳ್ಳದೆಂಬುದು ವ್ಯಕ್ತ ಾಗುವುದು.

ಜಮದಗ್ನಿಯು ತನ್ನ ಪತ್ನಿಯಾದ ರೇಣುಕೆಯ ಮಾನಸಿಕ ವ್ಯಭಿಚಾರ ಕ್ಕಾಗಿ ಆಕೆಯನ್ನು ಸಂಹಾರಮಾಡಬೇಕೆಂದು ತನ್ನ ಮಕ್ಕಳನ್ನು ಕರೆದು ಆಜ್ಞಾ ಪಿಸಿದರೂ ಯಾರೂ ಅದನ್ನು ಮನ್ನಿಸಲಿಲ್ಲ. ಆಗ ಜಮದಗ್ನಿಯು ಎಲ್ಲರಿಗೂ ಿಕ್ಕವನಾದ ಪರಶುರಾಮನನ್ನು ಕರೆದು ತಾಯಿಯೊಡನೆ ಎಲ್ಲಾ ಬಂಧು ಳನ್ನೂ ಸಂಹರಿಸಬೇಕೆಂದು ಅಪ್ಪಣೆಮಾಡಲು, ಕರ್ತವ್ಯಪಾಲನಾಮಹಿಮೆ ಪನ್ನರಿತ ಪರಶುರಾಮನು ತಂದೆಯ ಆಜ್ಞೆಯಂತೆ ಕೂಡಲೇ ಆ ಎಲ್ಲರನ್ನೂ ಂಹರಿಸಿದನು. ಆದರಿಂದ ಜಮದಗ್ನಿಯು ಸಂತುಷ್ಟನಾಗಿ ಪರಶುರಾಮನಿಗೆ ರವನ್ನು ಬೇಡಿಕೊಳ್ಳೆಂದು ಹೇಳಿದಾಗ ಪರಶುರಾಮನು ತನ್ನ ಸಹೋದರ ಡನೆ ತಾಯಿಯು ಬದುಕಬೇಕೆಂತಲೂ, ಅವರಿಗೆ ವಧೆಯ ನೆನಪಿರಬಾರ ಂತಲೂ ಬೇಡಿಕೊಂಡನು. ಮಹಾತಪಸ್ವಿಯೂ ಬ್ರಹ್ಮನಿಷ್ಠನೂ ಆದ ಮದಗ್ನಿಯ ವರಪ್ರಸಾದದಿಂದಲೂ ಪರಶುರಾಮನ ಕರ್ತವ್ಯನಿಷ್ಠಾಪ್ರಭಾವ ಂದಲೂ ನಿದ್ದೆಯಿಂದ ಎಚ್ಚೆತ್ತವರಂತೆ ಎಲ್ಲರೂ ಬದುಕಿ ಎದ್ದು ಕುಳಿತರು.

ಹೀಗೆ ಕರ್ತವ್ಯವು ಎಷ್ಟೋ ವೇಳೆ ಅತಿ ಕಠೋರವೂ ಅತ್ಯಂತ ಅಪ್ರಿಯವೂ ದರೂ ಪವಿತ್ರವೂ ತಾರಕವೂ ಆಗುತ್ತದೆ. ಆದ್ದರಿಂದ ಕರ್ಮಯೋಗದಲ್ಲಿ ್ರಯಾಪ್ರಿಯಗಳನ್ನೂ ಪುಣ್ಯಪಾಪಗಳನ್ನೂ ಸುಖದುಃಖಗಳನ್ನೂ ಲೇಶವೂ ಮನಿಸದೇ ಶ್ರದ್ಧೆಯಿಂದಲೂ ದಕ್ಷತೆಯಿಂದಲೂ ಕರ್ತವ್ಯನಿರ್ವಹಣೆ ಮಾಡು ದೇ ಮುಖ್ಯ ಸಾಧನ.

ಶಿಬಿ ಚಕ್ರವರ್ತಿ, ದಿಲೀಪ ಮೊದಲಾದವರಂಥ ಕರ್ತವ್ಯನಿಷ್ಠರು ಆಶ್ರಿತ ಕ್ಷಣಾದಿ ತಮ್ಮ ಕರ್ತವ್ಯಪಾಲನೆಗಾಗಿ ಸ್ವಂತ ದೇಹವನ್ನೂ ಪ್ರಾಣವನ್ನೂ ಪ್ಪಿಸಿ ಕರ್ಮಯೋಗಸಾಧನೆಯ ಸಾಫಲ್ಯವನ್ನು ಹೊಂದಿದ್ದಾರೆ.

ಮಹಾಕರ್ಮಯೋಗಿಗಳಾದ ಸುಭಾಷಚಂದ್ರ ಬೋಸ್, ಮಹಾತ್ಮಾ

ಗಾಂಧಿಜಿ ಮೊದಲಾದವರು ಸ್ವರಾಜ್ಯಸಾಧನಾ ರಾಮರಾಜ್ಯಸಾಧನಾದಿ ಕರ್ತವ್ಯ ಪಾಲನೆಯಲ್ಲಿಯೇ ತಮ್ಮ ತನುಮನಧನಾದಿ ಸರ್ವಸ್ವಗಳೊಡನೆ ಪ್ರಾಣವನ್ನೂ ಅರ್ಪಣಮಾಡಿ ಕೀರ್ತಿಮಂತರೂ ಕೃತಕೃತ್ಯರೂ ಆದರು.

ಹೀಗೆ ಕರ್ತವ್ಯಭಾವನೆಯ ಮುಂದೆ ತನು-ಮನ-ಧನ-ಜನ-ಪ್ರಾಣ ಮೊದಲಾದ ಸರ್ವ ಜಗತ್ತೂ ಹುಲ್ಲಿಗಿಂತಲೂ ಕಡೆಯಾಗುತ್ತದೆ. ಕರ್ತವ್ಯ ಭಾವನೆಯು ಸ್ಪರ್ಶಮಣಿಯಿದ್ದಂತೆ; ಪೌರಾಣಿಕ ಸ್ಪರ್ಶಮಣಿಯು ಸೋಂಕಿ ದ್ದೆಲ್ಲಾ ಹೇಗೆ ಬಂಗಾರವಾಗುವುದೋ ಹಾಗೆಯೇ ಕರ್ತವ್ಯಭಾವನೆಯಿಂದ ನಿರ್ವಹಿಸಲ್ಪಟ್ಟ ಸರ್ವಕರ್ಮಗಳೂ ದಿವ್ಯವೂ ಪವಿತ್ರವೂ ತಾರಕವೂ ಆಗುತ್ತವೆ.

ಇನ್ನು ಭಗವದರ್ಪಣ ಭಾವವನ್ನು ವಿಚಾರಿಸೋಣ. ಸ್ಪರ್ಶಮಣಿ ಯಂತೆ ಕರ್ತವ್ಯಭಾವನೆಯಾದರೆ ಅಗ್ನಿಯಂತೆ ಈಶ್ವರಾರ್ಪಣ ಭಾವ. ಸ್ಪರ್ಶ ಮಣಿಯು ತಾನು ಸೋಂಕಿದ್ದನ್ನೆಲ್ಲಾ ಸ್ವರ್ಣಮಯ ಮಾಡಬಲ್ಲುದೇ ಹೊರತು ತನ್ನಂತೆ ಮತ್ತೊಂದನ್ನು ಸ್ಪರ್ಶಮಣಿಯನ್ನಾಗಿಯೇ ಮಾಡಲಾರದು. ಆದರೆ ಅಗ್ನಿಯು ತನ್ನಲ್ಲಿ ಬಂದು ಬಿದ್ದ ಸರ್ವವನ್ನೂ ತನ್ನಂತೆಯೇ ಜ್ವಾಲಾಮಾಲಿ ಯನ್ನಾಗಿ ಮಾಡುತ್ತದೆ. ಕಠೋರವಾದ ಕರ್ಮವನ್ನೂ ಕರ್ತವ್ಯರೂಪವಾಗಿ ನಡೆಸುವಾಗ ವಿವೇಕಿಗೆ ಒಂದೊಂದು ವೇಳೆ "ಇಷ್ಟು ಕ್ರೂರವಾದ ಕರ್ತವ್ಯ ವನ್ನು ಯಾರ ಸಂತೋಷಕ್ಕಾಗಿ, ಯಾರ ತೃಪ್ತಿಗಾಗಿ ಮಾಡುವುದು ?" ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟುತ್ತದೆ. ಕರ್ತವ್ಯಕ್ಕಾಗಿ ಕರ್ತವ್ಯವು ಎಂಬುವ ಒಂದು ವಾದವೂ ಇದೆ. ಈ ಒಣ ವಾದಕ್ಕೆ ಮರುಳಾಗಿ ಚೇತನನಾದ ಜೀವನು ಜಡವಾದ ಕರ್ತವ್ಯಕ್ಕಾಗಿ ಹಗಲಿರುಳೂ ದುಡಿದು ಹೆಣವಾಗುವುದು ವಿಚಾರ ಶೀಲನಿಗೆ ಒಪ್ಪಾಗುವುದೆ ? – ತೃಪ್ತಿಯೀಯುವುದೇ ? ಏಕೆಂದರೆ ಸಕಲ ಜಡ ವಸ್ತುಗಳೂ ಇರುವುದು ಚೇತನನ ಸುಖಕ್ಕಾಗಿಯೇ ಹೊರತು ಚೇತನನು ಜಡ ಕ್ಕಾಗಿ ಅಲ್ಲ. ಹೀಗಿರುವಾಗ ಚೇತನಾತ್ಮನು ತನ್ನ ಸ್ವಾತಂತ್ರ್ಯವನ್ನೂ ಪ್ರಭಾವ ವನ್ನೂ ಬಲಿಗೊಟ್ಟು ಕ್ಷುದ್ರವಾದ ಜಡಕ್ಕಾಗಿ ದುಡಿಯುವುದೆಂಬುದು ಚೈತನ್ಯ ಮಹಿಮೆಗೇ ಅಪಮಾನಕರವಾದುದು. ಆದ್ದರಿಂದ "ಕರ್ತವ್ಯಕ್ಕಾಗಿ ಕರ್ತವ್ಯ ಅಥವಾ ಜಡಕ್ಕಾಗಿ ಜಡ" ಎನ್ನದೆ ಸರ್ವಜ್ಞನೂ ಸರ್ವಶಕ್ತನೂ ಸರ್ವ ವ್ಯಾಪಿಯೂ ಆದ ಒಂದು ಚೈತನ್ಯಕ್ಕಾಗಿ ಕರ್ತವ್ಯಸಮರ್ಪಣೆಯಿಂದಲೇ ತೃಪ್ತಿಗೆ

ಲುಮೆ ಸಿಕ್ಕುತ್ತದೆ. ಭವ್ಯವಾದ ಭಗವದರ್ಪಣ ಭಾವದ ಮುಂದೆ ಅಂತಃ ರಣಕ್ಕೆ ತೊಳಲಾಟವಿಲ್ಲ. ಅದೇ ತುಟ್ಟತುದಿಯ ಗುರಿ; ಅಲ್ಲಿಯೇ ಎಲ್ಲಾ ರಿದಾಟಗಳ ಸಮಾಪ್ತಿ, ಪೂರ್ಣ ಸಂತೃಪ್ತಿ.

ಅಲ್ಲದೆ, ಕರ್ತವ್ಯಸಾಧನೆಯಲ್ಲಿ, ಒಂದು ಕರ್ತವ್ಯವನ್ನು ನಿರ್ವಹಿಸುವುದ ೂಳಗೆ ಇನ್ನೊಂದು, ಅದನ್ನು ಮುಗಿಸುವುದರೊಳಗೆ ಮತ್ತೊಂದು ಹೀಗೆ ಂತಃಕರಣದ ಮೇಲೆ ಅವಿಚ್ಛಿನ್ನವಾದ ಕರ್ತವ್ಯಪರಂಪರೆಯ ಆಕ್ರಮಣಕ್ಕೆ ಲುಗಡೆಯೇ ಇರುವುದಿಲ್ಲ. ಅಂದರೆ ಅಂತಃಕರಣವು ಸಂತತವೂ ಒಂದಲ್ಲೊಂದು ರ್ತವ್ಯಚಿಂತನೆಯ ಮತ್ತು ಪಾಲನೆಯ ಅಧೀನಕ್ಕೆ ಸಿಕ್ಕು ರಾಜನ ಆದರಕ್ಕೆ ಾತ್ರನಾದ ಪ್ರಧಾನಿಯಂತೆ ಕರ್ತವ್ಯಭಾರದಿಂದ ನರಳುತ್ತಲೇ ಇರುತ್ತದೆ. ದ್ದರಿಂದ ಕರ್ತವ್ಯಪಾಲನವೆಂಬ ಧರ್ಮಚಕ್ರವು ಸುಲಲಿತವಾಗಿ ಸುತ್ತುವುದ ್ಕಾದರೂ ಭಗವತ್ಪ್ರೇಮವೆಂಬ ಘನ ತೈಲಲೇಪನದ ಅಗತ್ಯವಿದೆ.

ನಮ್ಮಲ್ಲಿರುವ ದೇವತ್ವವನ್ನೇ ನಾವರಿಯದ ಅಪರಾಧಕ್ಕಾಗಿ ನಮ್ಮಲ್ಲಿ ುವ ಶಿಲ್ಪವಿದ್ಯಾಬಲದಿಂದ ಕಾಡುಗಲ್ಲನ್ನು ಕಟೆದು ನಾವು ಮಾಡಿದ ೂರ್ತಿಯೇ ನಮ್ಮಿಂದ ಸಕಲ ಪೂಜೋಪಚಾರಗಳನ್ನೂ ಹೊಂದುತ್ತಾ ನ್ಮನ್ನೇ ದಾಸರನ್ನಾಗಿ ಮಾಡಿಕೊಂಡಿರುವಂತೆ ನಮ್ಮಿಂದಲೇ ಪರಿಶುದ್ಧಿಪಡೆದ ರ್ಮದಿಂದ ರೂಪುಗೊಂಡ ಕರ್ತವ್ಯವು ನಮ್ಮ ತನು, ಮನ, ಪ್ರಾಣಾದಿ ರ್ವಸ್ವಗಳಿಂದಲೂ ಆರಾಧ್ಯವಾಗಿ ನಮ್ಮನ್ನೇ ಗುಲಾಮರನ್ನಾಗಿ ಮಾಡಿ ೂಂಡಿದೆ. ನಮ್ಮ ನಿಜವಾದ ಪ್ರಭುತ್ವವನ್ನು ನಮಗೇ ಮರೆಸಿ, ನಮ್ಮಿಂದ ನ್ಯವಾದುದೊಂದು ತನ್ನನ್ನು "ಕರ್ತವ್ಯ, ಕರ್ತವ್ಯ, ಕರ್ತವ್ಯ!" ಎಂದು ಗಲಿರುಳೂ ಜಪಿಸುವುದಕ್ಕೂ ಸೇವಿಸುವುದಕ್ಕೂ ಹಚ್ಚಿಕೊಂಡಿದೆ. ಎಲ್ಲಕ್ಕೂ ಂದು ಮೇರೆ ಇರಬೇಕಾದುದು ವಿಹಿತವಾದಂತೆ ಕರ್ತವ್ಯದ ಅಧಿಕಾರ-ವ್ಯಾಪ್ತಿ ಳಿಗೂ ಒಂದು ಮೇರೆ ಇರಬೇಕು. ಮನೆಯಲ್ಲಿ ಕಸಪೊರಿಕೆಗೂ ಅಗತ್ಯವೂ, ್ಥಾನಮಾನಗಳೂ ಇವೆ; ಆದಮಾತ್ರಕ್ಕೆ ಗೃಹಶುದ್ಧಿ ಮಾಡುವ ಕಸಪೊರಿಕೆಯು ಂದು ದೇವರ ಮಂಟಪದಲ್ಲಿ, ದೇವಪೀಠದಲ್ಲಿ ಕೂರುವುದಕ್ಕೆ ಬಾರದು. ಕಸ ೂಡೆಯದೇ ದೇವರನ್ನಿಡುವುದಕ್ಕೆ ಬಾರದೆಂದು ಕಸಹೊಡೆಯುವ ಹಿಡಿಯೇ ಂದು ದೇವರ ಮುಂದಾಸನದಲ್ಲಿ ಹೇಗೆ ಪ್ರತಿಷ್ಠಿತವಾಗಬಾರದೋ ಹಾಗೆ ಚಿತ್ತ

ಶುದ್ಧಿಯಿಲ್ಲದೆ ದೇವತ್ವದ ಕಳೆ ಬೆಳಗದೆಂದು ಕೇವಲ ಚಿತ್ತಶುದ್ಧಿಗೆ ಸಾಧನವಾ
ಕರ್ತವ್ಯಕರ್ಮವು ದೇವಮಂದಿರವಾದ ಹೃದಯವನ್ನೇ ಆಕ್ರಮಿಸಬಾರದು.

ಹಡೆದ ತಾಯಿಯ ಅಧಿಕಾರಕ್ಕೂ ಒಂದು ಮೇರೆ ಇದೆ. ಜನ್ಮವಿತ್ತ
ದೇಹದ ಮೇಲೆ ಆಕೆಗೆ ಪೂರ್ಣಾಧಿಕಾರವಿರಬಹುದು; ಆದರೆ ತನ್ನ ಕ
ಬಲದಿಂದ ಅನಂತ ಜನ್ಮಗಳನ್ನೆತ್ತುವುದಕ್ಕಾಗಿ ಇಂಥಾ ಕೋಟ್ಯಂತರ ತಾ
ತಂದೆಗಳನ್ನು ತಾನೇ ಮಾಡಿಕೊಳ್ಳುತ್ತಿರುವ ಮನಸ್ಸಿನ ಮೇಲೆ ಆ ತಾಯಿ
ಎಷ್ಟೂ ಅಧಿಕಾರವಿಲ್ಲ. ಹಾಗೆಯೇ ತಾಯಿಯಂತೆ ಚಿತ್ತಶುದ್ಧಿಯನ್ನು
ಮಾಡುವ ಕರ್ತವ್ಯಕ್ಕೂ ಮೇರೆ ಇದೆ. ಚಿತ್ತದ ಮೇಲೆ ಕರ್ತವ್ಯಕ್ಕೆ – ಸಮ
ನಿಷ್ಠೆಗಾಗಿ – ಕೆಲವುಮಟ್ಟಿಗೆ ಅಧಿಕಾರವಿರಬಹುದೇ ಹೊರತು ಜಟಿಲವಾ
ಕರ್ತವ್ಯಗಳನ್ನೇ ನಿರ್ಣಯಮಾಡುವ ಶಕ್ತಿಯುಳ್ಳ ಶುದ್ಧಬುದ್ಧಿಯ ಮೇ
ಅದಕ್ಕೆ ಎಳ್ಳಷ್ಟೂ ಅಧಿಕಾರವಿಲ್ಲ.

ಹಾಗೆಯೇ ಶಾಸ್ತ್ರಾಧಿಕಾರಕ್ಕೂ ಮೇರೆ ಇದೆ. ಅಜ್ಞಾನಿಗಳ ಮೇ
ಅಥವಾ ಅದೃಢಜ್ಞಾನದವರ ಮೇಲೆ ಅದರ ಅಧಿಕಾರವೇ ಹೊರತು ಜ್ಞಾನಿಗ
ಮೇಲೆ ಶಾಸ್ತ್ರಾಧಿಕಾರವಿಲ್ಲ; ಏಕೆಂದರೆ ಪರೋಕ್ಷ ಜ್ಞಾನದ ಪರಮಾವಧಿಯ
ಶಾಸ್ತ್ರಾಧಿಕಾರದ ಕೊನೆಯ ಮೇರೆ; ಅದರ ಆಚೆಗಿರುವ ಅಪರೋಕ್ಷ ಜ್ಞಾನ
ಶಾಸ್ತ್ರದಿಂದ ಲಭಿಸಲಾರದು.

ಅಂತೆಯೇ ಉಪಾಸ್ಯದೇವನ ಅಧಿಕಾರಕ್ಕೂ ಪರಿಮಿತಿಯಿದೆ. ಉಪಾ
ದೇವನಿಂದ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮುಕ್ತಿಗಳು ಲಭಿಸಬಹು
ಹೊರತು ಸಾಯುಜ್ಯಮುಕ್ತಿಯಾದ ಕೈವಲ್ಯವು ಸದ್ಗುರುಕೃಪೆಯಿಂದ
ದೊರಕಬೇಕು. ಈ ಸಂದರ್ಭಕ್ಕೆ ಸಂತ ನಾಮದೇವ ಮೊದಲಾದ ಮಹಾತ್
ಇತಿಹಾಸಗಳೇ ಸಾಕ್ಷಿಗಳಾಗಿವೆ. ಉಪಾಸ್ಯದೇವತೆಗಳ ಗತಿಯೇ ಹೀಗಾ
ಮೇಲೆ ಧರ್ಮದ ಗತಿ ಇನ್ನೇನು ?

ಪಾಕಕ್ಕಾಗಿ ಅಗ್ನಿಯು ಬೇಕು. ಪಾಕವಾದ ಮೇಲೆ ಅಗ್ನಿಯ ಆಗ
ಇಲ್ಲ. ವಿವೇಕವಿಲ್ಲದೆ ಪಾಕವಾದಮೇಲೂ ಬೆಂಕಿ ಹಚ್ಚುತ್ತಾ ಹೋದರೆ ಪಾಕ
ಸೀದು ಬೂದಿಯಾಗುತ್ತದೆ. ಪಾಕಕ್ಕಾಗಿ ಪಾಕವೂ ಇಲ್ಲ. ಭಗವದರ್ಪ
ಮಾಡಿ ಭೋಜನಮಾಡುವುದಕ್ಕಾಗಿ ಪಾಕವಿದೆ. ಹಾಗೆಯೇ ಸ್ವೇಚ್ಛಾವಿಹಾ
ಯಾದ ಮನಸ್ಸು ಶುದ್ಧವಾಗಿ ಪಾಕವಾಗುವುದಕ್ಕಾಗಿ ಕರ್ತವ್ಯಸಾಧನೆ

ತಪಸ್ಸು ಬೇಕಾಗಿದೆ. ಕರ್ತವ್ಯಸಾಧನೆಯ ಫಲವಾದ ಮನಃಪರಿಪಾಕವು ಈಶ್ವರಾರ್ಪಣವಾಗಬೇಕು. ಈಶ್ವರನ ಹೊರತು ನಿಜವಾಗಿ ಇನ್ನೊಂದು ಇಲ್ಲವೇ ಇಲ್ಲ; ಈಶ್ವರನೇ ಜಗತ್ತಾಗಿ ತೋರುತ್ತಿರುವುದು. ಧರ್ಮಾಧರ್ಮ ಗಳೆಂಬ ದ್ವಂದ್ವಗಳು ಸುಳ್ಳುಜಗತ್ತಿನೊಳಗೇ ಸೇರಿದವುಗಳು. ಆದ್ದರಿಂದ ಈಶ್ವರಾರ್ಪಣ ಸಾಧನದಿಂದ ಈಶ್ವರನಿಷ್ಠೆಯೂ ಈಶ್ವರಪ್ರಸಾದವೂ ಲಭಿಸಿ ನಾವು ಆನಂದಾಮೃತವನ್ನು ಅನುಭವಿಸಬೇಕು.

ಮೇರೆಯನ್ನು ಮೀರಿದ ಕರ್ತವ್ಯಚಿಂತೆಯ ಉರವಣಿಗೆಯನ್ನು ತಪ್ಪಿಸಿ ಶಾಂತಿಯನ್ನು ನೀಡುವುದಕ್ಕಾಗಿಯೇ ಗೀತೆಯ ಕಟ್ಟಕಡೆಯಲ್ಲಿ (18ನೇ ಅಧ್ಯಾಯದ 66ನೇ ಶ್ಲೋಕದಲ್ಲಿ) ಶ್ರೀಕೃಷ್ಣಪರಮಾತ್ಮನು,

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।**

"ಎಲ್ಲಾ ಧರ್ಮಗಳನ್ನೂ (ಅಂತಃಕರಣ ಧರ್ಮಗಳನ್ನೂ ಇಂದ್ರಿಯ ಧರ್ಮಗಳನ್ನೂ) ತೊರೆದು ಸರ್ವವ್ಯಾಪಿಯಾದ ನನ್ನೊಬ್ಬನನ್ನೇ ಶರಣುಹೊಂದು. (ಅಶಾಶ್ವತವಾದ ಅಹಂಕಾರಾದಿ ದೇಹಾಂತವಾದ ಪಾಂಚಭೌತಿಕ ಜಗತ್ತಿನ ಆಶ್ರಯವನ್ನು ಬಿಟ್ಟು ಶಾಶ್ವತ ಚೈತನ್ಯಸ್ವರೂಪನಾದ ಪರಮಾತ್ಮನನ್ನೇ ಆಶ್ರಯಿಸು) ಹೀಗೆ ಮಾಡಿದರೆ ನಾನು ನಿನ್ನನ್ನು ಎಲ್ಲಾ ಬಗೆಯ ಪಾಪಗಳಿಂದಲೂ ಬಿಡುಗಡೆ ಮಾಡುವೆನು; ದುಃಖಿಸಬೇಡ" ಎಂದು ಆಶ್ವಾಸನವಿತ್ತಿದ್ದಾನೆ. ಈ ಶ್ಲೋಕದ ನಿಜಾರ್ಥವನ್ನು ತಿಳಿಯಲು ಸೂಕ್ಷ್ಮವಾದ ವಿವೇಚನಾಶಕ್ತಿಯೂ ಶುದ್ಧಬುದ್ಧಿಯೂ ಬೇಕು. ಗೀತಾಪಾರಾಯಣಕ್ಕೆ ಸಾಂಪ್ರದಾಯಿಕವಾಗಿ ಅಗತ್ಯವಾದ ಅಂಗನ್ಯಾಸ ಕರನ್ಯಾಸಗಳಲ್ಲಿ, "**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜೇತಿ ಶಕ್ತಿಃ**" ಎಂದು ಹೇಳಿದೆ. ಈ ವಾಕ್ಯವೇ ಗೀತೆಯ ಸಾರಸರ್ವಸ್ವವೆನ್ನಬಹುದು. ಗೀತೆಯ ಮೊದಲಿಂದಲೂ ವಿಧವಿಧವಾಗಿ ಧರ್ಮಾಧರ್ಮಗಳ ವಿವೇಚನೆಯನ್ನೂ ಧರ್ಮತತ್ತ್ವದ ಉಪದೇಶವನ್ನೂ ಮಾಡಿದ ಕೃಷ್ಣನು ಕೊನೆಯಲ್ಲಿ ಸರ್ವೋಪದೇಶಗಳ ಸಾರವಾಗಿ "ಧರ್ಮಾಧರ್ಮಗಳ ಗೊಂದಲವನ್ನೆಲ್ಲಾ ಬಿಟ್ಟು ಸರಳವಾಗಿಯೂ ಸುಲಭವಾಗಿಯೂ ನೇರ

ವಾಗಿಯೂ ನನ್ನನ್ನೇ ಶರಣುಹೊಂದು, ನಾನು ನಿನ್ನನ್ನು ಸಕಲ ಪುಣ್ಯಪಾಪಗಳಿಂದಲೂ ಅವುಗಳಿಗೆ ಕಾರಣವಾದ ಅವಿದ್ಯಾಕಾಮಗಳಿಂದಲೂ ಬಿಡುಗಡೆ ಮಾಡುತ್ತೇನೆ; ಶೋಕಿಸಬೇಡ!" ಎಂದು ಅಭಯವಿತ್ತು ಗೀತೆಯ ಪರಮ ಧರ್ಮವನ್ನು ತಿಳಿಸಿದ್ದಾನೆ.

ರಾಜಾಶ್ರಯವನ್ನು ಹೊಂದಿ ರಾಜನ ಪ್ರೇಮಕ್ಕೆ ಪಾತ್ರನಾದವನು ಹೇಗೆ ಮಂತ್ರಿ ಮೊದಲಾದ ಯಾವ ಅಧಿಕಾರಿಗಳನ್ನೂ ಆಶ್ರಯಿಸುವ ಗೋಜಿಗೆ ಹೋಗದಿದ್ದರೂ ಎಲ್ಲರ ಒಲುಮೆಯ ಫಲವನ್ನೂ ಪಡೆಯುತ್ತಾನೋ ಹಾಗೆಯೇ "**ಧರ್ಮಸ್ಯ ಪ್ರಭುರಚ್ಯುತಃ**" ಎಂಬ ವ್ಯಾಸಮಹರ್ಷಿಗಳ ವಚನಾನುಸಾರ ಸರ್ವಧರ್ಮಗಳ ಪ್ರಭುವಾದ ಅಚ್ಯುತನನ್ನೇ ಶರಣುಹೊಂದಿ ಪ್ರೀತಿಸಂಪಾದನೆ ಮಾಡಿದವರಿಗೆ ಸರ್ವಧರ್ಮಗಳ ಒಲುಮೆಯ ಫಲವೂ ದೊರೆತಂತೆಯೇ ಆಗುತ್ತದೆ.

ಸರ್ವನದೀವಲ್ಲಭವಾದ ಸಮುದ್ರವನ್ನು ಸೇವಿಸುವವರು ಹೇಗೆ ಸರ್ವನದಿಗಳನ್ನೂ ತೀರ್ಥಗಳನ್ನೂ ಸೇವಿಸಿದಂತೆಯೇ ಆಯಿತೋ ಹಾಗೆಯೇ ಸರ್ವಧರ್ಮಗಳ ಪ್ರಭುವಾದ ಅಚ್ಯುತನನ್ನು ಸೇವಿಸುವವರು ಸರ್ವಧರ್ಮಗಳನ್ನೂ ಸೇವಿಸಿದಂತೆಯೇ ಆಗುತ್ತದೆ. ನದಿಯಲ್ಲಿ ಸಾಗರವಿಲ್ಲವಾದರೂ ಸಾಗರದಲ್ಲಿ ಎಲ್ಲಾ ನದಿಗಳೂ ಇರುವಂತೆ ಧರ್ಮ ಮತ್ತು ಧರ್ಮಪ್ರಭುವಿನ ಸಂಬಂಧವೆನ್ನಬಹುದು.

ಕೈಗೆ ಹತ್ತಿರುವ ಹೊಲಸನ್ನು ಕಳೆದುಕೊಳ್ಳುವುದಕ್ಕಾಗಿ ಮಣ್ಣನ್ನು ಉಪಯೋಗಿಸತಕ್ಕವರು ಆ ಮಣ್ಣನ್ನೂ ನೀರಿನಿಂದ ತೊಳೆದುಕೊಂಡುಬಿಡುವಂತೆ ಅಧರ್ಮಪ್ರವೃತ್ತಿಯನ್ನು ಕಳೆಯುವುದಕ್ಕಾಗಿ ಧರ್ಮವನ್ನು ಸಾಧಿಸುವವರು ಆ ಧರ್ಮಪ್ರವೃತ್ತಿಯನ್ನೂ ಈಶ್ವರಶರಣಾಗತಿಯೆಂಬ ಪರಮಧರ್ಮದಿಂದ ಸಮಾಪ್ತಿಮಾಡಬೇಕು.

ಮುಳ್ಳಿನಿಂದಲೇ ಕಾಲಲ್ಲಿ ಚುಚ್ಚಿರುವ ಮುಳ್ಳನ್ನು ತೆಗೆದು ಎರಡನ್ನೂ ಒಗೆದು ಸ್ವಸ್ಥರಾಗುವಂತೆ ಧರ್ಮಸಾಧನೆಯಿಂದಲೇ ಅಧರ್ಮವನ್ನು ನಿವಾರಿಸಿ ಧರ್ಮಾಧರ್ಮಗಳ ಹಂಗನ್ನೂ ತೊರೆದು ಸಹಜವಾಗಿ ಆತ್ಮಸ್ಥರಾಗಬೇಕು.

ಕಬ್ಬಿಣದ ಬೇಡಿಯಲ್ಲಿರುವ ಸಾಮಾನ್ಯ ಸೆರೆಯಾಳಿಗಿಂತಲೂ ಬಂಗಾರದ ಬೇಡಿ ತೊಡಿಸಿರುವ ಸೆರೆಸಿಕ್ಕ ರಾಜನು ಉತ್ತಮನಾದರೂ ಸ್ವತಂತ್ರನಾಗಿರುವ

ಸಾರ್ವಭೌಮನೇ ಹೇಗೆ ಸರ್ವೋತ್ತಮನೂ ಸುಖಿಯೂ ಆಗಿರುವನೋ ಹಾಗೆಯೇ ಅಧರ್ಮಪ್ರವರ್ತಕನಿಗಿಂತಲೂ ಧರ್ಮಪ್ರವರ್ತಕನು ಉತ್ತಮನಾದರೂ ಧರ್ಮಾಧರ್ಮಗಳೆಂಬ ದ್ವಂದ್ವಗಳನ್ನು ಮೀರಿರುವ ಭಗವದ್ಭಕ್ತಿಯೆಂಬ ಪರಮಧರ್ಮವನ್ನು ಅವಲಂಬಿಸಿದವನೇ ಸರ್ವೋತ್ತಮನೂ ಸುಖಿಯೂ ಆಗುತ್ತಾನೆ.

ಧರ್ಮಾವತಾರಿಯಾದ ಧರ್ಮರಾಜನಿಗೇ ಸುಲಭವಾಗಿ ಲಭಿಸದ ಪರಮಾನುಗ್ರಹವು ಧರ್ಮಾಧರ್ಮಗಳ ಗೊಂದಲಕ್ಕೇ ಬೀಳದೇ ಶ್ರೀಕೃಷ್ಣ ಪರಮಾತ್ಮನಲ್ಲಿ ಪ್ರೇಮದಿಂದ ಅನನ್ಯಶರಣಾಗತಿ ಹೊಂದಿದ ಗೋಪಸ್ತ್ರೀಯರಿಗೆ ಲಭಿಸಿತೆಂಬುದು ಪ್ರಸಿದ್ಧವಿದೆ.

ಶ್ರೀಕೃಷ್ಣ-ಬಲರಾಮರು ನಂದಗೋಕುಲದಲ್ಲಿ ಒಂದು ದಿನ ಗೆಳೆಯರೊಡನೆ ದನಗಳನ್ನು ಮೇಯಿಸುತ್ತಾ ಹೋಗಿ ಮಧ್ಯಾಹ್ನದ ಬಿಸಿಲಲ್ಲಿ ಹಸಿದು ಬಾಯಾರಿದ್ದರು. ಗೆಳೆಯರಾದ ಗೋಪಾಲರು ಹಸಿವನ್ನು ತಾಳಲಾರದೆ ಕೃಷ್ಣನನ್ನು ತಿನ್ನಲಿಕ್ಕೆ ಬೇಡಲು, ಸಮೀಪದಲ್ಲಿಯೇ ಸ್ವರ್ಗಪ್ರಾಪ್ತಿಗಾಗಿ 'ಆಂಗಿರಸ' ನೆಂಬ ಯಜ್ಞವನ್ನು ಆರಂಭಿಸಿದ್ದ ಬ್ರಾಹ್ಮಣರಲ್ಲಿ ಹೋಗಿ ಶ್ರೀಕೃಷ್ಣಬಲರಾಮರು ತಮ್ಮನ್ನು ಕಳಿಸಿರುವರೆಂದು ಹೇಳಿ ಅನ್ನವನ್ನು ಬೇಡಿ ತರಲು ಗೋಪಾಲಕರನ್ನು ಕೃಷ್ಣನು ಕಳಿಸಿದನು. ಅದರಂತೆ ಗೋಪಾಲರು ಯಜ್ಞಭೂಮಿಗೆ ಹೋಗಿ ಬ್ರಾಹ್ಮಣರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಬಲರಾಮ ಕೃಷ್ಣರು ಬಹಳ ಹಸಿದಿರುವುದರಿಂದ ಅವರ ಬಳಿಯಲ್ಲಿ ಅನ್ನವನ್ನು ಬೇಡಿ ತರಲು ತಮ್ಮನ್ನು ಕಳಿಸಿರುವರೆಂದು ಹೇಳಿದರು. ಆದರೆ ಕೃಷ್ಣಪರಮಾತ್ಮನ ಯೋಗ್ಯತೆಯನ್ನರಿಯದ ಕರ್ಮಠರಾದ ಆ ಬ್ರಾಹ್ಮಣರು ಗೋಪಾಲರ ಮಾತಿಗೆ ಲಕ್ಷ್ಯವನ್ನೇ ಕೊಡದಿರಲು ನಿರಾಶರಾದ ಗೋಪಾಲರು ಹಿಂದಿರುಗಿ ಹೋಗಿ ಕೃಷ್ಣನಿಗೆ ತಿಳಿಸಿದರು. ಕೃಷ್ಣನು "ಎಲೈ ಗೋಪಾಲಕರೇ, ಧೈರ್ಯವಾಗಿರಿ! ಯತ್ನಮಾಡುವುದು ನಮ್ಮ ಕರ್ತವ್ಯವು. ನೀವು ಪುನಃ ಯಜ್ಞಮಂಟಪಕ್ಕೆ ಹೋಗಿ ಆ ಬ್ರಾಹ್ಮಣಸ್ತ್ರೀಯರನ್ನು ಕೇಳಿರಿ. ಅವರು ಎಂದೂ ನಿಮ್ಮನ್ನು ನಿರಾಶೆಪಡಿಸುವುದಿಲ್ಲ. ಏಕೆಂದರೆ, ನನ್ನಲ್ಲಿ ಅವರ ಲೋಕೋತ್ತರ ಭಕ್ತಿಯಿದ್ದು, ಅವರು ಅಂತರಾತ್ಮನನ್ನು ನನ್ನಲ್ಲಿ ಲೀನಮಾಡಿ ದೇಹ ಮಾತ್ರ ಅಲ್ಲಿ ಇರುವರು" ಎಂದು ಹೇಳಿದನು.

ಭಗವಂತನ ಮಾತಿನಂತೆ ಗೋಪಾಲರು ಪುನಃ ಯಜ್ಞಮಂಟಪಕ್ಕೆ ಹೋಗಿ ಆತನು ಹೇಳಿದಂತೆ ಬ್ರಾಹ್ಮಣಸ್ತ್ರೀಯರಲ್ಲಿ ಅನ್ನವನ್ನು ಯಾಚಿಸಿದರು. ರಾಮಕೃಷ್ಣರು ಬಂದು ಅನ್ನವನ್ನು ಕೇಳುವರೆಂಬ ಶಬ್ದವು ಕಿವಿಗೆ ಬಿದ್ದ ಕೂಡಲೇ ಆ ಸ್ತ್ರೀಯರು ಆನಂದಭರಿತರಾಗಿ ಪತಿ-ಪುತ್ರಾದಿಗಳ ಪ್ರತಿಬಂಧವನ್ನೂ ಲಕ್ಷಿಸದೇ ಉತ್ತಮೋತ್ತಮವಾದ ಭಕ್ಷ್ಯಭೋಜ್ಯಾದಿಗಳನ್ನು ತೆಗೆದುಕೊಂಡು ಉತ್ಕಟವಾದ ಪ್ರೇಮಾವೇಶದಿಂದ ಕೃಷ್ಣನ ಸನ್ನಿಧಿಗೆ ಓಡುತ್ತಾ ಹೋದರು. ಹೀಗೆ ತಮ್ಮ ಪತಿ-ಪುತ್ರರ ಮತ್ತು ಆಪ್ತೇಷ್ಟರ ಮಾತನ್ನೂ ಮೀರಿ ಬಂದ ಬ್ರಾಹ್ಮಣಸ್ತ್ರೀಯರನ್ನು ನೋಡಿ ಕೃಷ್ಣನು ನಗುತ್ತ "ಅಮ್ಮಾ! ನೀವು ಧನ್ಯ ರಿರುವಿರಿ. ನೀವು ನನ್ನ ದರ್ಶನೇಚ್ಛೆಯಿಂದ ಇಷ್ಟು ಶ್ರಮಪಟ್ಟು ಬಂದುದೂ ನಿಮಗೆ ಭೂಷಣವೇ ಆಗಿದೆ. ನಿಮ್ಮ ಅದ್ವಿತೀಯ ಭಕ್ತಿಯನ್ನು ನೋಡಿ ನನಗೆ ಕೌತುಕವಾಗುತ್ತದೆ. ಹೀಗೆಯೇ ವಿವೇಕಿಯಾದ ಪುರುಷನು ನನ್ನ ಚಿನ್ಮಯ ಮೂರ್ತಿಯಲ್ಲಿ ದೃಢವಾದ ಅಖಂಡ ಭಕ್ತಿಯನ್ನಿಡುವನು. ಜಗತ್ತಿನಲ್ಲಿ ಪ್ರೇಮ ಸ್ವರೂಪನಾದ ನನ್ನ ಅಂಶದ ವ್ಯಾಪ್ತಿಯು ಇರುವುದರಿಂದಲೇ ಬುದ್ಧಿ, ಪ್ರಾಣ, ದೇಹ, ಪತಿ, ಪತ್ನಿ, ಪುತ್ರ ಮೊದಲಾದವರೆಲ್ಲಾ ಪ್ರಿಯವಾಗಿ ತೋರುವರು. ವಾಸ್ತವಿಕವಾದ ಪ್ರೇಮದ ಉತ್ಪತ್ತಿಸ್ಥಾನವು ನಾನೇ ಆಗಿರುವೆನು. ನನ್ನ ದರ್ಶನದಿಂದ ನೀವು ಕೃತಾರ್ಥರಾದಿರಿ. ನಿಮ್ಮ ಪತಿಗಳು ಪ್ರಾರಂಭಿಸಿರುವ ಯಜ್ಞವನ್ನು ಸಮಾಪ್ತಿಮಾಡುವುದಕ್ಕಾಗಿ ನಿಮ್ಮ ಯಜ್ಞಮಂಟಪಕ್ಕೆ ಹಿಂದಿ ರುಗಿ ಹೋಗಿರಿ. ಜಡದೇಹದಿಂದ ಪ್ರಾಣಿಗಳಿಗಾಗುವ ನನ್ನ ಸಹವಾಸದಿಂದ ಶಾಶ್ವತ ಸುಖವೂ ದೃಢಪ್ರೇಮವೂ ಉತ್ಪನ್ನವಾಗುವುದಿಲ್ಲ. ಆದ್ದರಿಂದ ನೀವು ನನ್ನ ಬಳಿಗೆ ದೇಹದಿಂದ ಬರಲು ಇಚ್ಛಿಸದೇ ನಿಮ್ಮ ಚಿತ್ತವನ್ನು ಮಾತ್ರ ನಿರಂತರ ನನ್ನಲ್ಲಿ ಲೀನವಾಡಿರಿ. ಇದರಿಂದ ನಿಮಗೆ ನನ್ನ ಚಿನ್ಮಯರೂಪವು ಬೇಗ ಪ್ರಾಪ್ತವಾಗುವುದು" ಎಂದು ಹೇಳಿ ಅವರನ್ನು ಸಂತೈಸಿ ಮನೆಗೆ ಕಳಿಸಿ ದನು. ಕೆಲವು ದಿನಗಳ ಮೇಲೆ ಆ ಬ್ರಾಹ್ಮಣರಿಗೆ ತಮ್ಮ ಅಪರಾಧದ ಸ್ಮರಣೆ ಯಾಗಿ ತಮ್ಮೊಳಗೇ "ಅಯ್ಯೋ! ವಿಶ್ವನಾಥನೇ ಮನುಷ್ಯರೂಪದಿಂದ ಕೃಷ್ಣ ನಾಗಿ ನಮ್ಮನ್ನು ಯಾಚಿಸಿದರೂ ನಾವು ಆವನಿಗೆ ಅನ್ನ ಕೊಡಲಿಲ್ಲವಲ್ಲ! ನಾವು ಮಹಾಮೂರ್ಖರು! ನಮ್ಮ ಸ್ತ್ರೀಯರು ಮಾತ್ರ ಶ್ರೀಕೃಷ್ಣನಲ್ಲಿ ಅನನ್ಯ ಭಕ್ತಿಯನ್ನಿಟ್ಟು ತಮ್ಮ ಜನ್ಮದ ಸಾರ್ಥಕ್ಯಮಾಡಿಕೊಂಡರು. ಅಂದ ಬಳಿಕ,

ನಮ್ಮ ಈ ಉತ್ತಮ ವರ್ಣಕ್ಕೂ ಶ್ರುತಿಪಾರಂಗತತೆಗೂ ವ್ರತಾಚರಣೆಗೂ ಸುಜ್ಞತೆಗೂ ಯಜ್ಞಕರ್ಮಗಳಿಗೂ ಧರ್ಮಾಚರಣೆಗೂ ಯಾಗಸ್ಥೈಪುಣ್ಯಕ್ಕೂ ಧಿಕ್ಕಾರವೇ ಸರಿ. ನಾವು ಸರ್ವ ವರ್ಣಗಳಿಗೂ ಗುರುಗಳೆನಿಸಿ ನಮ್ಮ ಕಲ್ಯಾಣವು ಏತರಿಂದಾಗುವುದೆಂಬುದನ್ನು ನಾವು ತಿಳಿಯದಿರುವೆವು. ಇವರು ಸ್ತ್ರೀಯರಿದ್ದರೂ ಇವರ ಭಗವದ್ಭಕ್ತಿಯು ಅವರ್ಣನೀಯವಾಗಿರುವುದು. ಇವರಿಗೆ ಉಪನಯನಾದಿ ಸಂಸ್ಕಾರಗಳಿಲ್ಲ, ಗುರುಕುಲವಾಸ-ವೇದಾಧ್ಯಯನಗಳಿಲ್ಲ, ತಪಶ್ಚರ್ಯವಿಲ್ಲ, ಶುಚಿತ್ವವಿಲ್ಲ, ನಿತ್ಯಕರ್ಮಗಳ ಪುಣ್ಯಸಂಚಯವಿಲ್ಲ; ಆದರೂ ಭಗವದ್ಭಕ್ತಿಯ ಯೋಗದಿಂದ ಇವರು ಸಂಪಾದಿಸಿದ ಫಲವು ಎಲ್ಲಾ ಅನುಕೂಲತೆಗಳಿದ್ದರೂ ಮುಖ್ಯವಾದ ಭಗವದ್ಭಕ್ತಿಯೊಂದು ನಮಗೆ ಇಲ್ಲದ್ದರಿಂದ ಸಾಧಿಸಲಿಲ್ಲ. ನಾರಾಯಣಾ! ನಿಷ್ಕಾಮನಾದ ನೀನು ಅನ್ನಕಾಮನಾಗಿ ಬಂದರೂ ನಿನ್ನನ್ನು ಸಂತೋಷಗೊಳಿಸದಾದೆವು. ನಿನ್ನ ಮಾಯೆಯಿಂದಲೇ ನಿನ್ನ ಸ್ವರೂಪಜ್ಞಾನವು ನಮಗಾಗದಿರುವುದರಿಂದ ನಮ್ಮನ್ನು ಕ್ಷಮಿಸಿ ಉದ್ಧರಿಸು!" ಎಂದು ಪಶ್ಚಾತ್ತಾಪದಿಂದ ಪ್ರಾರ್ಥಿಸಿದರು.

ಆದ್ದರಿಂದ ಕರ್ಮಯೋಗಡಲ್ಲಿ ಯಾವಾಗಲೂ ಈಶ್ವರಪ್ರೀತ್ಯರ್ಥವಾಗಿಯೇ ಕರ್ಮಗಳನ್ನು ಮಾಡುತ್ತಾ ಫಲಗಳನ್ನೂ ಈಶ್ವರಾರ್ಪಣಮಾಡುತ್ತಾ ಈಶ್ವರಭಾವವನ್ನೇ ದೃಢಗೊಳಿಸುತ್ತಾ ಈಶ್ವರನಿಷ್ಠೆಯನ್ನೇ ಬೆಳೆಸುತ್ತ ಬರಬೇಕು. ಇದರಿಂದ ಬಂಧಕ್ಕೆ ಕಾರಣವಾದ ಅಜ್ಞಾನವೂ ಅಹಂಕಾರವೂ ಆಸಕ್ತಿಯೂ ಕರ್ಮಕಿಂಕರತೆಯೂ ಫಲಕಾಮವೂ ನಾಶವಾಗಿ ಚಿತ್ತಶುದ್ಧಿಯುಂಟಾಗುತ್ತದೆ.

ಕರ್ಮಫಲಕ್ಕಾಗಿಯೇ ಕರ್ಮಮಾಡುವವನ ಸುಖವು ಯಾವಾಗಲೂ ಕರ್ಮಫಲಕ್ಕೇ ಅಧೀನವಾಗಿರುತ್ತದೆ. ಆದ್ದರಿಂದ ತನ್ನ ಕಲ್ಪನಾಪ್ರಭಾವದಿಂದಲೇ ಅವನ ಸುಖವು ಕರ್ಮದ ತುದಿಯ ಫಲದಲ್ಲಿ ಮಾತ್ರ ಸೇರಿಕೊಂಡಿರುವುದರಿಂದ ಕರ್ಮವನ್ನು ಮಾಡುವಾಗ ಬಹುಕಾಲ ಅವನಿಗೆ ಸುಖವೇ ಇಲ್ಲ. ಉದ್ದಿಷ್ಟವಾದ ಫಲದಲ್ಲಿ ಕೂಡ ಇಷ್ಟದೊಡನೆ ಅನಿಷ್ಟವೂ ಬೆರೆಯಬಹುದು. ಅಥವಾ ಅನಿಷ್ಟವೇ ಒದಗಬಹುದು. ಆಗ ಫಲವನ್ನೇ ಅವಲಂಬಿಸಿಕೊಂಡಿರುವ ಸುಖಕ್ಕೆ ಬಾಧೆಯೂ ಭಂಗವೂ ಬರುತ್ತದೆ. ಇಂಥಾ ಫಲವನ್ನೇ ಇಷ್ಟೇ ಫಲವನ್ನೇ ಸಾಧಿಸುತ್ತೇನೆಂಬುದು ಜಗತ್ತಿನಲ್ಲಿ ಯಾರಿಗೂ ಸಾಧ್ಯವಿಲ್ಲ. ಏಕೆಂದರೆ

ನಮ್ಮ ಪ್ರಯತ್ನವು ನಮ್ಮ ಇಷ್ಟಫಲವನ್ನು ಕೊಡುವುದಕ್ಕೆ ವಿರೋಧಶಕ್ತಿಗಳಾವುವೆಂಬುದನ್ನು ತಿಳಿಯಲೂ ಕಳೆಯಲೂ ಯಾವಾಗಲೂ ಸಾಧ್ಯವಾಗುವುದಿಲ್ಲ. ಹಾಗೂ ಜಗತ್ತಿನ ಎಲ್ಲಾ ಶಕ್ತಿಗಳನ್ನೂ ತನ್ನ ವಶಕ್ಕೆ ತೆಗೆದುಕೊಂಡು ತನ್ನ ಇಚ್ಛಾಪ್ರಕಾರ ಅವುಗಳನ್ನು ಕುಣಿಸುವುದು ಯಾರಿಂದಲೂ ಸಾಧ್ಯವಿಲ್ಲ.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**

ಎಂದು ಹೇಳಿದೆ. ಆದ್ದರಿಂದ ನಮ್ಮ ಸುಖವು ಕರ್ಮಫಲವನ್ನೇ ಅವಲಂಬಿಸಿದ್ದರೆ ಅದು ಎಂದೂ ನಮ್ಮ ಕೈಗೆ ನಿಲುಕದೆ ಮರುಮರೀಚಿಕೆಯಂತೆ ಮುಂದೆ ಮುಂದೆಯೇ ಓಡುತ್ತಾ ನಿರಾಶೆಯ ನಿಟ್ಟುಸಿರನ್ನೇ ಬಿಡಿಸುತ್ತದೆ. ಹಾಗಲ್ಲದೆ, ಫಲದ ಲಕ್ಷ್ಯವೇ ಇಲ್ಲದೇ ಕರ್ತವ್ಯಕರ್ಮವನ್ನು ಮಾಡುವುದೇ ತನಗೆ ಯಾವಾಗಲೂ ಆನಂದವೆಂದು ಭಾವಿಸುವವನಿಗೆ ಕೈಯೊಳಗಿರುವ ಕರ್ಮದಂತೆ ಆನಂದವೂ ನಿತ್ಯಸಿದ್ಧವೇ ಇರುತ್ತದೆ.

ಇನ್ನು ಕೇವಲ ಕರ್ತವ್ಯದೃಷ್ಟಿಯುಳ್ಳವನಿಗಾದರೂ ಒಂದೊಂದು ವೇಳೆ ಕಠೋರಕರ್ಮವನ್ನು ಮಾಡುವಾಗ ಕಹಿಯಾಗಬಹುದು. ಆದರೆ ಸರ್ವವನ್ನೂ ಈಶ್ವರಪ್ರೀತಿಗೆಂದು ಮಾಡುವವನ ಮನಸ್ಸು ಆನಂದಸ್ವರೂಪನಾದ ಈಶ್ವರನನ್ನೇ ಅಖಂಡಭಾವದಿಂದ ಸಂತತವೂ ಹಿಡಿದುಕೊಳ್ಳುವುದರಿಂದ ಚ್ಯುತಿಯಿಲ್ಲದ ಆನಂದವನ್ನು ಹೊಂದುತ್ತಾನೆ. ನಿಸ್ವಾರ್ಥವಾಗಿ ಪ್ರೇಮದಿಂದ ತನ್ನನ್ನು ಸೇವಿಸುವ ಮಂತ್ರಿಗೆ ರಾಜನು ತನ್ನ ಘನತೆಗೆ ಸರಿಯಾದ ಗೌರವ ಪ್ರೇಮದಿಂದ ಸಮೃದ್ಧಿಯುಂಟುಮಾಡಿ ತನಗೆ ಸಮಾನವಾಗಿ ಕಾಣುವಂತೆ ಅಖಂಡವಾದ ಈಶ್ವರಾರ್ಪಣ ಭಾವದಿಂದ ತನ್ನನ್ನು ಪ್ರೇಮದಿಂದ ಸೇವಿಸುವ ಕರ್ಮಯೋಗಿಗೆ ಭಗವಂತನು ಮನಃಪ್ರಸನ್ನತೆಯನ್ನು ಕರುಣಿಸಿ ಕಾಲಕ್ರಮೇಣ ಆನಂದಸ್ವರೂಪನಾದ ತನ್ನನ್ನೇ ತಾನು ಒಪ್ಪಿಸಿಕೊಳ್ಳುತ್ತಾನೆ.

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥**

" ಆದರೆ ನಿಷ್ಕಾಮಭಾವದಿಂದ ಕರ್ತವ್ಯಕರ್ಮಗಳನ್ನು ಮಾಡುವ ಯಾವ ಮನುಷ್ಯರ ಪಾಪವು ನಷ್ಟವಾಗಿದೆಯೋ ಅವರು ಇಚ್ಛಾದ್ವೇಷಗಳೇ ಮುಂತಾದ

ಭ್ರಾಂತಿಯಿಂದ ಬಿಡಲ್ಪಟ್ಟು ದೃಢನಿಶ್ಚಯವುಳ್ಳವರಾಗಿ ನನ್ನನ್ನು ಭಜಿಸುತ್ತಾರೆ." (ಗೀತಾ)

ಈ ಗೀತಾವಾಕ್ಯದಿಂದ ತಿಳಿಯುವುದೇನೆಂದರೆ; "ಕರ್ಮಯೋಗಿಯು ನಿಷ್ಕಾಮವಾಗಿ ಕರ್ತವ್ಯಕರ್ಮಗಳನ್ನು ಭಗವದರ್ಪಣ ಭಾವದಿಂದ ಮಾಡುವ ಪುಣ್ಯಪ್ರಭಾವದಿಂದ ಅವನ ಅನೇಕ ಜನ್ಮಗಳ ಪಾಪಗಳೆಲ್ಲಾ ನಾಶವಾಗಿ ಇಚ್ಛಾ ದ್ವೇಷ, ಪುಣ್ಯ ಪಾಪ, ಸುಖ ದುಃಖ ಮೊದಲಾದ ದ್ವಂದ್ವಗಳ ಭ್ರಮೆಗೆ ಸಿಕ್ಕದೆ ಶುದ್ಧಚಿತ್ತನಾಗಿ ಭಗವಂತನನ್ನು ದೃಢಭಕ್ತಿಯಿಂದ ಭಜಿಸುವ ಯೋಗ್ಯತೆಯನ್ನು ಪಡೆಯುತ್ತಾನೆ" ಎಂದು ಭಗವಂತನೇ ಹೇಳಿದಂತಾಯಿತು. ಇದರಿಂದ ಕರ್ಮಯೋಗವು ಭಕ್ತಿಯೋಗಕ್ಕೆ ಸಾಧನವೆಂದು ತಿಳಿಸಿದಂತಾಯಿತು. ವೇದವೂ ಕರ್ಮ ಉಪಾಸನಾ ಜ್ಞಾನಗಳೆಂಬ ಮೂರು ಕಾಂಡಗಳಿಂದ ಕೂಡಿದೆ. ಇವುಗಳಲ್ಲಿ ಕರ್ಮವು ಉಪಾಸನೆಗೂ ಅಥವಾ ಭಕ್ತಿಗೂ ಭಕ್ತಿಯು ಜ್ಞಾನಕ್ಕೂ ಸಾಧನಗಳಾಗಿವೆ.

ಮುಂದಿನ ಭಾಗದಲ್ಲಿ ಜ್ಞಾನಕ್ಕೆ ಸಾಧನವಾದ ಭಕ್ತಿಯೋಗವನ್ನು ವಿಚಾರಿಸುವುದಕ್ಕೆ ಮೊದಲು ಸರ್ವಯೋಗಗಳಿಗೂ ಉಪಕಾರವಾದಂಥ ರಾಜಯೋಗ ಅಥವಾ ಧ್ಯಾನಯೋಗವನ್ನು ವಿಚಾರಿಸೋಣ.



# ಚತುರ್ಥ ಪ್ರಕಾಶ

# ರಾಜಯೋಗ

**ಸೃಷ್ಟಿ ಸ್ಥಿತಿ ವಿನಾಶಾನಾಂ ಹೇತುತಾ ಮನಸಿ ಸ್ಥಿತಾ ।**
**ತತ್ ಸಹಾಯಾತ್ ಸಾಧ್ಯತೇ ಯೋ ರಾಜಯೋಗ ಇತಿಸ್ಮೃತಃ ।**

ಸೃಷ್ಟಿ ಸ್ಥಿತಿ ವಿನಾಶಗಳ ಕಾರಣವು ಅಂತಃಕರಣವೇ ಆಗಿದೆ. ಆ ಮನಸ್ಸಿನ ಸಹಾಯದಿಂದ ಯಾವ ಸಾಧನವು ಮಾಡಲ್ಪಡುವುದೋ ಅದಕ್ಕೆ **ರಾಜಯೋಗ**ವೆನ್ನುವರು. ಸಾಮಾನ್ಯವಾಗಿ ನಮ್ಮ ಅನುಭವಗಳನ್ನೆಲ್ಲಾ ವಿಚಾರಮಾಡಿದರೆ ಅವು ನಮ್ಮ ಎಚ್ಚರ, ಕನಸು, ನಿದ್ರೆಗಳೆಂಬ ಮೂರು ಅವಸ್ಥೆಗಳಿಗೇ ಸಂಬಂಧಪಟ್ಟಿವೆ. ಸೃಷ್ಟಿ–ಸ್ಥಿತಿ–ಲಯಗಳ ರೂಪವಾದ ಜಗತ್ತಿನ ಎಲ್ಲಾ ಅನುಭವಗಳೂ ನಮ್ಮ ಮೂರು ಅವಸ್ಥೆಗಳಾದ ಎಚ್ಚರ, ಕನಸು, ನಿದ್ರೆಗಳಿಂದಲೇ ಬರುತ್ತಿವೆ. ಆದರೆ ಈ ಮೂರು ಅವಸ್ಥೆಗಳನ್ನೂ ಹೊಂದುತ್ತಿರು ವುದು ನಮ್ಮ ಮನಸ್ಸೇ ಆಗಿದೆ. ಆದ್ದರಿಂದ ನಾವು ನಮ್ಮ ಮನಸ್ಸೊಂದನ್ನು ಸ್ವಾಧೀನಕ್ಕೆ ತೆಗೆದುಕೊಂಡರೆ ಸರ್ವಜಗತ್ತನ್ನೂ ವಶಪಡಿಸಿಕೊಂಡಂತಾಯಿತು ಹೀಗೆಂಬುದೇ ಯೋಗಿಯ ಉದ್ದೇಶ.

ನೀರಿನಲ್ಲಿ ಮುಳುಗಿದವರು ಮೇಲೆದ್ದು ಉಸಿರಾಡುವುದಕ್ಕೆ ತೀವ್ರವಾಗಿ ಚಡಪಡಿಸುವುದನ್ನು ನೋಡಿದರೆ ನೀರಿನಿಂದ ಹೊರಗೇ ಅವರು ಬದುಕುವ ಸ್ವರೂಪವನ್ನು ತೋರಿಸುವಂತೆ ಪ್ರಪಂಚ ಜೀವನದಲ್ಲಿ ಮುಳುಗಿದವರು ತಾವು ಎಂದೂ ಸಾಯದೇ ಬದುಕಿರಬೇಕೆಂದೂ ತಮ್ಮ ಜ್ಞಾನವು ಅಪಾರವಾಗ ಬೇಕೆಂದೂ ಸುಖವು ಅಕ್ಷಯವಾಗಬೇಕೆಂದೂ ಶಕ್ತಿಯು ಅಮಿತವಾಗಬೇಕೆಂದೂ ಮೊದಲಾಗಿ ಉತ್ಕಟವಾಗಿ ಬಯಸುವುದನ್ನು ನೋಡಿದರೆ, ವಿಚಾರಮಾಡಿದಲ್ಲಿ ತಾವು ಅದೇ ಸ್ವರೂಪವವರೆಂದು ತಿಳಿಯಲವಕಾಶವಿದೆಯೆಂಬುದು ತೋರುತ್ತದೆ ಅಂದರೆ ನಾವು ಸ್ವರೂಪದಿಂದ ಸತ್ಯ ನಿತ್ಯ ಸರ್ವಜ್ಞ ಅಖಂಡಾನಂದರಾಗಿರುವ

ೆಂಬುದು ಸ್ಪಷ್ಟವಾಗುತ್ತದೆ. ಹೇಗೋ ಕಾಲು ಜಾರಿ ನೀರಿನಲ್ಲಿ ಬಿದ್ದವನು ಾಯುತ್ತೇನೆಂಬ ಭಯ-ದುಃಖ-ವಿಭ್ರಾಂತ ಸ್ಥಿತಿಯಿಂದ ಮೇಲೇರಿ ಬದುಕು ದಕ್ಕೆ ಕಾತರಿಸುವನು. ಹಾಗೇ ಪ್ರಪಂಚ-ಜೀವನದ ಅಜ್ಞಾನ-ಭಯ-ಃಖಾದಿಗಳಲ್ಲಿ ಹೇಗೋ ಜಾರಿಬಿದ್ದಿರುವ ನಾವು ಪೂರ್ವದ ನಮ್ಮ ಸಹಜ ತಿಯಾದ (ಸರ್ವಜ್ಞತ್ವಾದಿ ಗುಣಗಳಿಂದ ಕೂಡಿದ) ಈಶ್ವರತ್ವವನ್ನು ಬಯಸು ದ್ದೇವೆ. ಆದರೆ ಈಶ್ವರತ್ವ ಸಂಪಾದನೆಗೆ ಒಳಗೆ ಮನಸ್ಸೂ ಹೊರಗೆ ಜಗತ್ತೂ ಶವಾಗದಿರುವುದರಿಂದ ಅಡ್ಡಿಯಾಗಿವೆ. ಆದ್ದರಿಂದ ಪ್ರತಿಬಂಧಕವಾಗಿ ೂೀರುವ ಒಳಗಿನ ಪ್ರಕೃತಿಯನ್ನೂ ಹೊರಗಿನ ಪ್ರಕೃತಿಯನ್ನೂ ಜಯಿಸಿ ್ವಾಧೀನಪಡಿಸಿಕೊಂಡು ಈಶ್ವರತ್ವವನ್ನು ಸಂಪಾದಿಸುವುದಕ್ಕೆ ಯಾವುದು ಾಧನವೋ ಅದೇ ರಾಜಯೋಗ.

ಕರ್ಮಯೋಗಿಗೆ ಕ್ರಿಯಾಶಕ್ತಿಯೂ ಹಠಯೋಗಿಗೆ ದೇಹ ಮತ್ತು ಪ್ರಾಣ ಕ್ತಿಗಳೂ ಭಕ್ತಿಯೋಗಿಗೆ ಪ್ರೇಮಶಕ್ತಿಯೂ ಜ್ಞಾನಯೋಗಿಗೆ ಬುದ್ಧಿಶಕ್ತಿಯೂ ಾಧನವಾಗಿರುವಂತೆ ರಾಜಯೋಗಿಗೆ ಮನಶ್ಶಕ್ತಿಯೇ (ಚಿತ್ತಶಕ್ತಿಯೇ) ಸಾಧನ. ರ್ಮಯೋಗಿಗೆ ನಿಸ್ವಾರ್ಥ ಸೇವೆಯೂ ಚಿತ್ತಶುದ್ಧಿಯೂ ಹಠಯೋಗಿಗೆ ೋಗ್ಯವೂ ದೀರ್ಘಾಯುಷ್ಯವೂ ವಜ್ರಕಾಯವೂ ಕುಂಡಲಿನೀ ಉತ್ಥಾ ನೆಯೂ ಭಕ್ತಿಯೋಗಿಗೆ ಅನನ್ಯ ಶರಣಾಗತಿಯೂ ಚಿತ್ತಸ್ಥೈರ್ಯವೂ ಜ್ಞಾನ ೋಗಿಗೆ ಬ್ರಹ್ಮನಿಷ್ಠೆಯೂ ಸ್ಥಿತಪ್ರಜ್ಞೆಯೂ ಪ್ರಯೋಜನಗಳಾಗಿರುವಂತೆ ಾಜಯೋಗಿಗೆ ಅಣಿಮಾದಿ ಸರ್ವಸಿದ್ಧಿಗಳೂ ನಿರ್ವಿಕಲ್ಪ ಸಮಾಧಿಯೂ ನೋಲಯವೂ ಪ್ರಯೋಜನಗಳಾಗಿವೆ. ಕರ್ಮಯೋಗಿಯು ನಿರಭಿಮಾನ ಂದಲೂ ನಿಷ್ಕಾಮದಿಂದಲೂ ಕರ್ತವ್ಯಕರ್ಮಗಳನ್ನು ಮಾಡತಕ್ಕವನು. ಭಕ್ತಿ ೋಗಿಯು ತಾನು-ತನ್ನದೆಂಬುದಿಲ್ಲದೆ ಈಶ್ವರನ ಹೊರತು ತನಗೆ ಯಾವುದೂ ೇಡವೆಂದು ಸರ್ವಸ್ವವನ್ನೂ ಅವನಲ್ಲಿ ನಿವೇದನಮಾಡತಕ್ಕವನು. ಜ್ಞಾನ ೋಗಿಗೆ ಬ್ರಹ್ಮವೊಂದೇ ಸತ್ಯ, ಜಗತ್ತೆಲ್ಲಾ ಮಿಥ್ಯ, ತಾನೂ ಬ್ರಹ್ಮನೇ ಆಗಿ ್ದಾನೆ. ಆದರೆ ರಾಜಯೋಗಿಯ ಶಕ್ತಿಗೂ ವ್ಯಾಪ್ತಿಗೂ ಪ್ರಾಪ್ತಿಗೂ ನಿಲುಕ ರುವುದೇ ಇಲ್ಲ-ಅಂದರೆ ಅವನಿಗೆ ಅಸಾಧ್ಯವೆಂಬುದೇ ಇಲ್ಲ. ಅವನು ವಿಶ್ವಾ ತ್ರ ಮಹರ್ಷಿಯಂತೆ ಪ್ರತಿಸೃಷ್ಟಿ ಮಾಡುವ ಮಹದಾಶೆ-ಮಹಾಸಾಮರ್ಥ್ಯ

ಗಳುಳ್ಳವನು. ಅವನು ಕರೆದಾಗ ದೇವತೆಗಳು ಬರಬೇಕು; ಅವನ ಆಜ್ಞೆ
ಯಂತೆ ಸೃಷ್ಟಿ-ಸ್ಥಿತಿ-ಕಾರ್ಯಗಳನ್ನು ನಡೆಸಬೇಕು. ಅವನ ಒಳಗೂ ಹೊರಗೂ
ಅವನ ಇಚ್ಛೆಗೂ ಅವನ ಆಜ್ಞೆಗೂ ವಶವಾಗದಿರುವುದೇ ಇಲ್ಲ. ಅವನು
ತನ್ನ ಪೌರುಷಬಲದಿಂದಲೂ ಯೋಗಸಾಮರ್ಥ್ಯದಿಂದಲೂ ಸರ್ವಜ್ಞನೂ ಸರ್ವ
ಶಕ್ತನೂ ಸರ್ವವ್ಯಾಪಿಯೂ ಆದ ಈಶ್ವರನಾಗತಕ್ಕವನು; ಹಾಗೂ ನಿರ್ವಿಕಲ್ಪ
ಸಮಾಧಿ ಬಲದಿಂದ ಈಶ್ವರತ್ವವನ್ನೂ ಮೀರಿ ನಿರ್ಗುಣಬ್ರಹ್ಮದಲ್ಲಿ ಲೀನನಾಗ
ತಕ್ಕವನು. ಆದ್ದರಿಂದಲೇ,

**ರಾಜತ್ವಾತ್ ಸರ್ವಯೋಗಾನಾಂ ರಾಜಯೋಗ ಇತಿಸ್ಮೃತಃ**

"ಸರ್ವಯೋಗಗಳಲ್ಲಿಯೂ ಈ ಯೋಗವು ಪ್ರಜಾಕೋಟಿಯಲ್ಲಿ ರಾಜನಂತೆ
ಶ್ರೇಷ್ಠವಾಗಿರುವುದರಿಂದಲೇ ರಾಜಯೋಗವೆನ್ನಿಸಿಕೊಂಡಿದೆ."

ರಾಜಯೋಗಶಾಸ್ತ್ರಕ್ಕೆ ಪತಂಜಲಿ ಮಹರ್ಷಿಗಳ ಯೋಗಸೂತ್ರಗಳೇ
ಪ್ರಸಿದ್ಧ ಪ್ರಮಾಣಗಳು. ಅವರು ಎರಡನೆಯ ಸೂತ್ರದಲ್ಲಿ "**ಯೋಗಶ್ಚಿತ್ತವೃತ್ತಿ
ನಿರೋಧಃ**" "**ಚಿತ್ತವೃತ್ತಿಗಳನ್ನು ತಡೆಗಟ್ಟುವುದೇ ಯೋಗ**" ಎಂದು
ಹೇಳಿದ್ದಾರೆ.

ಇಲ್ಲಿ ಚಿತ್ತವೆಂದರೇನು ? ವೃತ್ತಿಗಳೆಂದರೇನು ? ಎನ್ನುವುದನ್ನು ತಿಳಿ
ಯಬೇಕು. ನಮಗೆ ಕಣ್ಣು ಮೊದಲಾದ ಇಂದ್ರಿಯಗಳಿವೆ, ಮತ್ತು ಎಲ್ಲಾ
ಇಂದ್ರಿಯಕೇಂದ್ರಗಳೂ ಮಸ್ತಕದಲ್ಲಿರುವ ಮೆದುಳಿನಲ್ಲಿವೆ. ಇವುಗಳ ಸಹಾಯ
ದಿಂದ ರೂಪ ಶಬ್ದ ಮೊದಲಾದ ವಿಷಯಗಳ ಜ್ಞಾನವು ಹೇಗೆ ಆಗುವುದೆಂಬು
ದನ್ನು ನೋಡೋಣ. ಎದುರಿಗಿರುವ ಒಂದು ವಸ್ತುವಿನ ಮೇಲೆ ಬಿದ್ದ
ಪ್ರಕಾಶದ ಕಿರಣಗಳು ಪರಾವರ್ತನವಾಗಿ ನಮ್ಮ ಕಣ್ಣುಗಳ ಮೂಲಕ ಒಳಗೆ
ಹರಿದುಹೋಗಿ ಹಿಂದಿರುವ ಸೂಕ್ಷ್ಮ ನರಜಾಲದ ಫಲಕದ ಮೇಲೆ ವಸ್ತುವಿನ
ಚಿತ್ರವನ್ನು ಪ್ರತಿಫಲನ ಮಾಡುತ್ತವೆ. ಈ ಪ್ರತಿಫಲನದ ಸಂವೇದನೆಯು
ನರಗಳ ಮೂಲಕ ಮೆದುಳಿನಲ್ಲಿರುವ ಇಂದ್ರಿಯ ಕೇಂದ್ರಕ್ಕೆ ಮುಟ್ಟುತ್ತದೆ.
ಮನಸ್ಸು ಈ ಸಂವೇದನೆಗಳನ್ನು ಗ್ರಹಿಸಿ ತನ್ನೊಳಗಿರುವ ನಿರ್ಣಯಾತ್ಮಕವಾದ
ಬುದ್ಧಿಗೆ ಕಳಿಸುತ್ತದೆ. ಈ ಸಂವೇದನೆಯಿಂದ ಬುದ್ಧಿಯಲ್ಲಿ ಹುಟ್ಟಿದ ಪ್ರತಿ
ಕ್ರಿಯೆಯು ಕಣ್ಣೆದುರಿಗಿರುವ ವಸ್ತುರೂಪದ ಭಾವನೆಯನ್ನು ಉಂಟುಮಾಡು

ತ್ತದೆ. ಬುದ್ಧಿಯ ಭಾವನಾರೂಪ ಪ್ರತಿಕ್ರಿಯೆಯ ಜೊತೆಗೆ ಅಹಂಕಾರವೃತ್ತಿಯೂ ಹೊಳೆಯುತ್ತದೆ. ಅಂತಃಕರಣದಲ್ಲಾದ ಈ ಕ್ರಿಯಾ-ಪ್ರತಿಕ್ರಿಯಾ ವೃತ್ತಿಗಳ ಮಿಶ್ರವು ಒಳಗಿರುವ ಪುರುಷನಿಗೆ ಅಥವಾ ಆತ್ಮನಿಗೆ ಗೋಚರವಾಗುತ್ತದೆ. ಪುರುಷನು ಈ ಕ್ರಿಯಾ-ಪ್ರತಿಕ್ರಿಯಾ ಮಿಶ್ರಣದಲ್ಲಿ ಒಂದು ವಸ್ತುವನ್ನು ನೋಡುತ್ತಾನೆ. ಇಂದ್ರಿಯ ಕೇಂದ್ರಗಳಿಂದ ಕೂಡಿದ ಮನಸ್ಸೂ ಬುದ್ಧಿಯೂ ಅಹಂಕಾರವೂ ಸೇರಿ ಅಂತಃಕರಣ(ಒಳಗಿನ ಸಾಧನ)ವೆನಿಸುತ್ತವೆ. ಇವು ಚಿತ್ತದ ಬೇರೆ ಬೇರೆ ವೃತ್ತಿಗಳೇ ಆಗಿವೆ. ಚಿತ್ತಸರೋವರದಲ್ಲಿ ಉದಿಸುವ ಭಾವನಾ ತರಂಗಗಳೇ ವೃತ್ತಿಗಳೆನಿಸುತ್ತವೆ. ನಾವು ಕಣ್ಣು ತೆರೆದುಕೊಂಡೇ ಕೆಲವು ಸಮಯ ಆಳವಾದ ಆಲೋಚನೆಯಲ್ಲಿರುತ್ತೇವೆ. ಆಗ ಎದುರಿಗೆ ಯಾವುದೊಂದು ವಸ್ತುವಿದ್ದರೂ ಯಾರಾದರೂ ಹಾದುಹೋದರೂ ಅದರ ಅರಿವೇ ನಮಗಾಗುವುದಿಲ್ಲ. ಒಂದು ವಸ್ತುವು ಎದುರಿಗಿದ್ದು ಅದರ ಪ್ರತಿಫಲನವು ಕಣ್ಣೊಳಗೂ ಮೂಡಿ ಆ ಸಂವೇದನೆಯು ಮೆದುಳಿನಲ್ಲಿರುವ ಇಂದ್ರಿಯ ಕೇಂದ್ರಕ್ಕೆ ಮುಟ್ಟಿದರೂ ಅದರ ಅರಿವು ನಮಗಾಗದಿರುವುದಕ್ಕೆ ನಮ್ಮ ಮನಸ್ಸು ಮೆದುಳಿನ ನರಗಳಲ್ಲಿರುವ ಇಂದ್ರಿಯ ಕೇಂದ್ರಕ್ಕೆ ಸಂಬಂಧ ಹೊಂದದಿರುವುದೇ ಕಾರಣ. ಕೆಲವು ಸಮಯ ಮನುಷ್ಯನು ಕಣ್ಣು ತೆರೆದೇ ನಿದ್ರೆಮಾಡುತ್ತಿರುತ್ತಾನೆ. ಕಣ್ಣೆದುರಿಗೆ ಬೆಳಕಿನಲ್ಲಿ ಒಂದು ವಸ್ತುವಿದ್ದರೂ ಅದರ ಚಿತ್ರವು ಕಣ್ಣೊಳಗೆ ಮೂಡಿದರೂ ಮನಸ್ಸು ಮಾತ್ರ ಇವುಗಳ ಸಂಬಂಧವನ್ನಿಟ್ಟುಕೊಳ್ಳದೇ ನಿದ್ರೆಯಲ್ಲಿರುವುದರಿಂದ ಪುರುಷನಿಗೆ ಅದರ ಅರಿವಾಗುವುದಿಲ್ಲ. ಆದ್ದರಿಂದ ಪುರುಷನಿಗೆ ಹೊರಗಿನ ಶಬ್ದಾದಿ ವಿಷಯಗಳ ಜ್ಞಾನವಾಗಬೇಕಾದರೆ ಹೊರಗೆ ಕಿವಿ ಕಣ್ಣು ಮೊದಲಾದ ಸ್ಥೂಲ ಇಂದ್ರಿಯಗಳೂ ಒಳಗೆ ಮೆದುಳಿನ ನರಜಾಲದಲ್ಲಿರುವ ಇಂದ್ರಿಯ ಕೇಂದ್ರಗಳೂ ಅವುಗಳ ಸಂಬಂಧ ಹೊಂದಿರುವ ಮನಸ್ಸೂ ಮೂರೂ ಬೇಕು.

ಆಧುನಿಕ ಮನಶ್ಶಾಸ್ತ್ರಕ್ಕೂ ಸಮ್ಮತವಾದ ಈ ವಿಮರ್ಶೆಯಲ್ಲಿ ಚಿತ್ತವು ಕೇವಲ ಸರೋವರದ ಜಲದಂತೆ ಸ್ವತಃ ತಟಸ್ಥವೂ ನಿಕ್ಷೇಪ್ಯವೂ (Static) ಇದ್ದು ಬಾಹ್ಯ ಸಂವೇದನೆಗಳಿಗೆ ಮಾತ್ರ ಪ್ರತಿಕ್ರಿಯೆಗಳನ್ನು ತೋರುವುದು. ಆದರೆ ಸಾಂಪ್ರದಾಯಿಕ ವೇದಾಂತ ಪ್ರಕ್ರಿಯೆಯ ಪ್ರಕಾರ ಚಿತ್ತವು (ಮನಸ್ಸು) ನೇತ್ರಾದಿ ಇಂದ್ರಿಯಗಳ ಮೂಲಕವಾಗಿ ಸ್ವತಃ ಹೊರಹರಿದು ವಸ್ತುಗಳನ್ನು

ಆವರಿಸಿ ಆ ವಸ್ತುರೂಪವೃತ್ತಿಯನ್ನು ಹೊಂದುವ ಕ್ರಿಯಾಶೀಲವಾದ ಚೇತ ನಾತ್ಮಕವು. ಮನಸ್ಸು ಸ್ವತಃ ಕ್ರಿಯಾಶೀಲವೂ ಚೇತನಾತ್ಮಕವೂ (Active and dynamic) ಅಲ್ಲದಿದ್ದರೆ ಪರೇಂಗಿತಜ್ಞಾನ, ಪರಹೃದಯ ಪರಿವರ್ತನ, ಪರಕಾಯ ಪ್ರವೇಶ ಮೊದಲಾದವುಗಳು ಸಾಧ್ಯವಾಗುತ್ತಿರಲಿಲ್ಲ.

ಚಿತ್ತಸರೋವರದ ತರಂಗವಾದ ವೃತ್ತಿರೂಪ ಭಾವನೆಯು ಒಂದು ಶಕ್ತಿ. ಹೊರಗೆ ಜಗತ್ತಿನಲ್ಲಿರುವ ಗುರುತ್ವಾಕರ್ಷಣ ಶಕ್ತಿ. ವಿಕರ್ಷಣಶಕ್ತಿಗಳಂತೆಯೇ ಭಾವನೆಯೂ ಒಂದು ಶಕ್ತಿ. ಅಪಾರವಾದ ಪ್ರಕೃತಿಯಲ್ಲಿರುವ ಅನಂತಶಕ್ತಿ ಗಳಲ್ಲಿ ಕೆಲವನ್ನು ಚಿತ್ತವು ಆಕರ್ಷಿಸಿ ಅರಗಿಸಿಕೊಂಡು ಭಾವನಾರೂಪದಲ್ಲಿ ಹೊರಗೆಡಹುತ್ತದೆ. ಆಹಾರದ ಮೂಲಕ ನಮ್ಮಲ್ಲಿ ಶಕ್ತಿಸಂಗ್ರಹವಾಗುತ್ತದೆ. ಈ ಶಕ್ತಿಯ ಮೂಲಕವೇ ದೇಹೇಂದ್ರಿಯಗಳ ಚಲನವಲನಾದಿ ವ್ಯಾಪಾರಗಳು ನಡೆಯುತ್ತವೆ. ಸೂಕ್ಷ್ಮತರವಾದ ಶಕ್ತಿಗಳು ಭಾವನಾರೂಪದಿಂದ ಹೊರ ಬೀಳುತ್ತವೆ.

ಅಂತಃಕರಣವು ಜಡವು; ಆದರೆ ಅದರ ಹಿಂದಿರುವ ಪುರುಷನೊಬ್ಬನೇ ಚೇತನನು. ಚೈತನ್ಯರೂಪನಾದ ಪುರುಷನ ಸಾನ್ನಿಧ್ಯಮಾತ್ರದಿಂದ ಅಂತಃ ಕರಣವೂ ಚೇತನಾತ್ಮಕವಾಗಿ ಸ್ವತಃ ಅರಿವುಳ್ಳದ್ದರಂತೆ ತೋರುತ್ತದೆ. ಈ ಅಂತಃಕರಣದಿಂದಲೇ ಪುರುಷನು ಹೊರಗಿನ ಜಗತ್ತನ್ನು ತಿಳಿಯುವುದು. ಸರೋವರದ ನೀರಿನಲ್ಲಿ ಕಲ್ಲನ್ನೆಸೆದರೆ ಆ ಏಟಿಗೆ ಪ್ರತ್ಯಾಘಾತವಾಗಿ ನೀರು ಮೇಲಕ್ಕೆ ಹಾರಿ ಅಲೆಗಳನ್ನು ಹೊಂದುತ್ತದೆ. ಹಾಗೆ ಇಂದ್ರಿಯಗಳಿಂದ ಉಂಟಾ ಗುವ ಸಂವೇದನೆಗೆ ಪ್ರತಿಕ್ರಿಯೆಯಾಗಿ ನಮ್ಮ ಚಿತ್ತದಲ್ಲಿ ತರಂಗರೂಪವಾಗಿ ಏಳುವ ಭಾವನಾವೃತ್ತಿಗಳನ್ನು ನಾವು ನೋಡುತ್ತಿರುವೆವೇ ಹೊರತು ಹೊರಗಿ ರುವ ವಸ್ತುಗಳನ್ನೇ ನೋಡುತ್ತಿಲ್ಲ. ಸಂವೇದನೆಗೆ ಕಾರಣವಾಗಿ ಹೊರಗೇನೋ ಒಂದಿದೆ. ಅದೇನೆಂಬುದು ನಮಗೆ ತಿಳಿಯದು ನಮಗೆ ತಿಳಿದಿರುವುದು ಅದರ ಪ್ರಚೋದನೆಯಿಂದುಂಟಾದ ನಮ್ಮ ಅಂತಃಕರಣದ ವೃತ್ತಿಮಾತ್ರವಾಗಿದೆ. ನಮ್ಮ ವಿಶ್ವವೆಂಬುದೆಲ್ಲಾ ನಮ್ಮ ಮನೋವೃತ್ತಿರೂಪವೇ ಆಗಿದೆ

ಚಿತ್ತದಲ್ಲಿ ವೃತ್ತಿಗಳು ಹೋಳಿದು ಅಳಿದರೂ ಸೂಕ್ಷ್ಮವಾದ ಕುರುಹು ಗಳನ್ನು ಬಿಟ್ಟು ಅವು ಅಡಗುವುದರಿಂದ ಪುನಃ ಪುನಃ ಅದೇ ವೃತ್ತಿಗಳೇ ಮ

ಫಲವನ್ನು ಪಡೆಯುತ್ತವೆ. ಈ ಕುರುಹುಗಳಿಗೇ ಸಂಸ್ಕಾರಗಳೆಂದು ಹೆಸರು. ಒಳ್ಳೆಯ ಮತ್ತು ಕೆಟ್ಟ ಸಂಸ್ಕಾರಗಳಲ್ಲಿ ಒಬ್ಬನಲ್ಲಿ ಒಳ್ಳೆಯ ಸಂಸ್ಕಾರಗಳೇ ಹೆಚ್ಚಾಗಿದ್ದರೆ ಒಳ್ಳೆಯವನೆಂದೂ, ಕೆಟ್ಟ ಸಂಸ್ಕಾರಗಳೇ ಹೆಚ್ಚಾಗಿದ್ದರೆ ಕೆಟ್ಟವನೆಂದೂ ಅವನು ತಿಳಿಯಲ್ಪಡುತ್ತಾನೆ. ತೀವ್ರ (ಸ್ಫುಟವಾದ) ಸಂಸ್ಕಾರಗಳೇ ವಾಸನೆಗಳು.

ಸರೋವರದ ನೀರು ಮಲಿನವಾಗಿದ್ದರೂ ಚಲನವಾಗಿ ಅಲೆಯಲೆಯಾಡುತ್ತಿದ್ದರೂ ಸರೋವರದ ತಳವು ಹೇಗಿದೆಯೆಂಬುದು ಕಾಣುವುದಿಲ್ಲ. ಆದರೆ ನೀರು ತಿಳಿಯಾಗಿದ್ದು ಅಲ್ಲಾಡದಿದ್ದರೆ ಆ ಸರೋವರದ ತಳವು ಹೇಗಿದೆಯೋ ಹಾಗೆ ಕಾಣುತ್ತದೆ. ಚಿತ್ತವೇ ಸರೋವರ, ವೃತ್ತಿಗಳೇ ತರಂಗಗಳು. ಚಿತ್ತ ಸರೋವರದ ತಳವೇ ನಮ್ಮ ಆತ್ಮನು. ಚಿತ್ತಜಲದಲ್ಲಿ ಕಶ್ಮಲವೂ ಅಲೆಗಳೂ ಸುಳಿಗಳೂ ಇರುವುದರಿಂದ ಪರಿಶುಭ್ರ ಸ್ಫಟಿಕೋಪಮವಾದ ತಳವು-ಆತ್ಮವು-ಕಾಣುವುದಿಲ್ಲ. ಆದ್ದರಿಂದ ಚಿತ್ತಜಲವನ್ನು ನಿರ್ಮಲವಾಗಿಯೂ ನಿಶ್ಚಲವಾಗಿಯೂ ಮಾಡಿ ಆತ್ಮಾವಲೋಕನ ಮಾಡುವುದಕ್ಕಾಗಿಯೇ ಯೋಗಸಾಧನೆಗಳಿವೆ. ಕರ್ಮಯೋಗವು ಚಿತ್ತವನ್ನು ನಿರ್ಮಲವಾಗಿ ಮಾಡಿದರೆ ರಾಜಯೋಗವು ಅದನ್ನು ನಿಶ್ಚಲವಾಗಿ ಮಾಡುತ್ತದೆ.

ಪ್ರಕೃತಿಯ ಸತ್ತ್ವ-ರಜ-ತಮ ಎಂಬ ಮೂರು ಗುಣಗಳಿಗನುಸಾರವಾಗಿ ಚಿತ್ತಕ್ಕೆ ಶಾಂತ-ಘೋರ-ಮೂಢ ಎಂಬ ಮೂರು ಅವಸ್ಥೆಗಳಿವೆ. ಪಶುಗಳಲ್ಲಿಯೂ ಪಾಮರರಲ್ಲಿಯೂ ಕೇವಲ ತಮಸ್ಸಿನ ಮೂಢಭಾವವಿದೆ. ಇದರ ಕರ್ಮವು ಹಿಂಸೆಯೇ ಸರಿ. ರಜೋಗುಣದಿಂದ ಅಧಿಕಾರ-ಭೋಗಗಳ ಆಶೆಯೂ ಕರ್ಮಪ್ರವೃತ್ತಿಯೂ ಉಂಟಾಗುತ್ತವೆ. ಸತ್ತ್ವಗುಣದಿಂದ ಅಂತಃಕರಣವು ಕೊಳೆಯನ್ನೆಲ್ಲಾ ಕಳೆದು ತಿಳಿಯಾಗಿ ಅಲೆಗಳನ್ನೆಲ್ಲಾ ಅಳಿದು, ನೆಲೆಯಾಗಿ ಅದು ಶಾಂತವೂ ಗಂಭೀರವೂ ಆಗುತ್ತದೆ. ಇಂಥಾ ಸತ್ತ್ವಗುಣವಿಶಿಷ್ಟವಾದ ಅಂತಃಕರಣದಲ್ಲಿ ಅಧಿಷ್ಠಾನವಾದ ಆತ್ಮನ ನಿಜಸ್ವರೂಪವು ಸ್ಫುರಣವಾಗುತ್ತದೆ. ತಮೋಗುಣ ರಜೋಗುಣಗಳನ್ನು ಕಳೆದು ಸತ್ತ್ವಗುಣವನ್ನು ಬೆಳೆಸಿಕೊಳ್ಳುವುದೇ ಯೋಗಸಾಧನದ ಗುಟ್ಟಾದ ಗುರಿಯಾಗಿದೆ. ಅಚಲವಾದ ಸ್ವಭಾವದಿಂದ ತಮೋಗುಣವೂ ಸತ್ತ್ವಗುಣವೂ ಒಂದೇ ಆಗಿ ಕಾಣುತ್ತವೆ. ಆದರೆ ಎರಡೂ ಅಪಾರ ದೂರವುಳ್ಳ ವಿರುದ್ಧ ಧ್ರುವಗಳು. ತಮೋಗುಣದ ನಿಶ್ಚೇಷ್ಟತೆ

ಯಲ್ಲಿ ಜಡತ್ವವೂ, ಪಶುತ್ವವೂ, ಸೋಮಾರಿತನವೂ, ಅಜ್ಞಾನವೂ, ಅಂ
ಕಾರವೂ ಇವೆ. ಸತ್ತ್ವಗುಣದ ಅಚಲತೆಯಲ್ಲಿ ಚೇತನತ್ವವೂ, ಪ್ರತಿಭೆಯೂ
ಓಜಸ್ಸೂ, ಜ್ಞಾನವೂ, ಪ್ರಕಾಶವೂ ಇವೆ. ಸತ್ತ್ವಗುಣದ ಶಾಂತಭಾವದ
ನಿಗೂಢವಾದ ಉತ್ಕಟ ಕ್ರಿಯಾಶಕ್ತಿಯಿದೆ. ಶಕ್ತಿಯ ಪರಮಾವಧಿಯ ಅ
ವ್ಯಕ್ತಿಯೇ ಶಾಂತಿಯಾಗಿದೆ. ಕ್ರಿಯಾಶೀಲನಾಗುವುದು ಸುಲಭ; ಶಾಂ
ನಾಗುವುದು ಕಷ್ಟ. ಮನೋವೃತ್ತಿಗಳ ಮೇಲೆ ಅಧಿಕಾರ ನಡೆಸಬಲ್ಲವ
ಶಾಂತಪುರುಷ ಕ್ರಿಯಾಶೀಲನಾಗುವುದು ಕನಿಷ್ಠ ಶಕ್ತಿಯು; ನಿಷ್ಕ್ರಿ
ನಾಗುವುದೇ ಶ್ರೇಷ್ಠ ಶಕ್ತಿಯು. ಒಂದು ಯಂತ್ರದಲ್ಲಿ ಅತಿ ವೇಗದಿಂದ ಚಲಿಸು
ಚಕ್ರವನ್ನು ನೋಡಿದರೆ ಅದು ಅಚಲವಾಗಿರುವಂತೆಯೇ ಕಾಣುತ್ತದೆ. ಆದ
ಅದನ್ನು ಸ್ವಲ್ಪ ಸೋಂಕಿದರೆ ಉಂಟಾಗುವ ಭಯಂಕರವಾದ ಪ್ರತಿಕ್ರಿಯೆಯಿಂ
ಅದರಲ್ಲಿ ಅಡಗಿರುವ ಅಗೋಚರವಾದ ಅದ್ಭುತ ಕ್ರಿಯಾಶಕ್ತಿಯು ವ್ಯಕ್ತವಾಗ
ತ್ತದೆ. ಸತ್ತ್ವನಿಷ್ಠನಾದ ಶಾಂತಪುರುಷನ ಕ್ರಿಯಾಶಕ್ತಿಯೂ ಹಾಗೆಯೆ
ಅದೃಷ್ಟವಾದರೂ ಅದ್ಭುತವಾದುದು. ನಿತ್ಯಸತ್ತ್ವಸ್ಥನಾಗುವುದೇ ಯೋಗಿಯ
ಗುರಿ.

"ಏಸ್ಮಿನ್ನೇಕೇನ ಜ್ಞಾತೇನ ಸರ್ವಂ ವಿಜ್ಞಾತಂ ಭವತಿ"

"ಯಾವುದೊಂದನ್ನು ತಿಳಿಯುವುದರಿಂದ ಸರ್ವವನ್ನೂ ತಿಳಿದಂತಾಗುತ್ತದೆಯೊ
ಆ ಒಂದನ್ನು ತಿಳಿಯುವುದೇ ಎಲ್ಲಾ ಶಾಸ್ತ್ರಗಳ ಮತ್ತು ಯೋಗಗಳ ಗು
ಯಾಗಿದೆ. ರಾಜಯೋಗವು ಅಂತಃಪ್ರಕೃತಿಯಾದ ಚಿತ್ತದ ನಿರೀಕ್ಷಣ-ಪರೀಕ್ಷಣ
ಗಳಿಂದ ಜ್ಞಾನವನ್ನು ಸಂಪಾದಿಸಿ — ಜ್ಞಾನವೇ ಶಕ್ತಿಯಾದುದರಿಂದ —
ಒಳಹೊರಗಿನ ಪ್ರಕೃತಿಗಳೆರಡನ್ನೂ ವಶಪಡಿಸಿಕೊಳ್ಳಲು ಯತ್ನಿಸುತ್ತದೆ
ಚಿತ್ತದ ವೃತ್ತಿಗಳನ್ನೆಲ್ಲಾ ಅಥವಾ ಶಕ್ತಿಗಳನ್ನೆಲ್ಲಾ ಕೇಂದ್ರೀಕರಿಸಿ ಮಾಡುವ
ಸಂಯಮವೇ ಜ್ಞಾನಸಾಧನವಾಗಿದೆ. ಹೊರಗಿನ ಯಾವ ವಸ್ತುವಿನ ಜ್ಞಾನ
ವಾಗಲೀ (ಒಳಗಿನ ಚಿತ್ತರಹಸ್ಯದ ಜ್ಞಾನವಾಗಲೀ) ಸಂಯಮದಿಂದಲೇ ಸಾಧ್ಯ
ಸುವುದು. ಅಂತಃಕರಣ ಶೋಧನದಿಂದ ಅಂತಃಕರಣದ ತಳದಲ್ಲಿರುವ
ಪವಿತ್ರವೂ ಪರಿಪೂರ್ಣವೂ ಅಮೃತವೂ ಆನಂದರೂಪವೂ ಆದ ಮಹತ್ತ
ದೊಂದು ಶಾಶ್ವತ ತತ್ತ್ವದ ಬೋಧವಾದರೆ ಅದಕ್ಕಿಂತಲೂ ಹೆಚ್ಚಿನ ಲಾಭವು
ಯಾವುದೂ ಇಲ್ಲ.

ಆದರೆ ಅಂತಃಕರಣವು ಹೊರಗೇ ಹರಿಯುವ ಸ್ವಭಾವವುಳ್ಳುದಾದುದರಿಂದ ಹೊರಗಿನ ವಿಷಯಜ್ಞಾನವು ಸುಲಭವು; ಒಳಗಿನ ವಿಷಯಜ್ಞಾನವು ಕಠಿಣವು. ಸ್ಥೂಲವು ಕಾರ್ಯವೂ, ಸೂಕ್ಷ್ಮವು ಅದರ ಕಾರಣವೂ ಆಗಿರುವುದರಿಂದ ಹೊರಗಿನ ಸ್ಥೂಲವಾದ ಪ್ರಕೃತಿ ಶಕ್ತಿಗಳಿಗೆ ನಮ್ಮೊಳಗಿನ ಸೂಕ್ಷ್ಮ ಶಕ್ತಿಗಳೇ ಕಾರಣವಾಗಿವೆ. ಆದ್ದರಿಂದ ಒಳಗಿನ ಅಂತಃಕರಣ ಶಕ್ತಿಗಳನ್ನು ವಶಪಡಿಸಿಕೊಳ್ಳಬಲ್ಲವನು ಹೊರಗಿನ ಪ್ರಕೃತಿಶಕ್ತಿಗಳನ್ನೂ ಸ್ವಾಧೀನಮಾಡಿಕೊಳ್ಳಬಲ್ಲನು. ರಾಜಯೋಗಿಯು (ಸಮಗ್ರ ವಿಶ್ವವನ್ನೂ) ಸಮಸ್ತ ಪ್ರಕೃತಿಯನ್ನೂ ಸ್ವಾಧೀನಪಡಿಸಿಕೊಳ್ಳುವ ಮಹೋನ್ನತಧ್ಯೇಯವುಳ್ಳವನು ಅರ್ಥಾತ್ ಪ್ರಕೃತಿಮಂಡಲಕ್ಕೆ ಸ್ವಾಮಿಯಾಗಲು ರಾಜಯೋಗಿಯು ಎಳಸುವನು.

ರಾಜಯೋಗದಲ್ಲಿ ದೇಹ ಮತ್ತು ಪ್ರಾಣಸಂಬಂಧವಾದ ಸಾಧನಗಳಿದ್ದರೂ ಮುಖ್ಯಸಾಧನವು ಮಾನಸಿಕವಾದುದಾಗಿದೆ.

**ಕಲಾಷೋಡಶಕೋಪೇತ ರಾಜಯೋಗಸ್ಯ ಷೋಡಶ।**
**ಸಪ್ತಚಾಂಗಾನಿ ವಿದ್ಯಂತೇ ಸಪ್ತಜ್ಞಾನಾನುಸಾರತಃ॥**
**ವಿಚಾರಮುಖ್ಯಂ ತಜ್ಜ್ಞೇಯಂ ಸಾಧನಂ ಬಹುತಸ್ಯ ಚ।**

ಷೋಡಶ ಕಲೆಗಳಿಂದ ಕೂಡಿದ ರಾಜಯೋಗಕ್ಕೆ ಹದಿನಾರು ಅಂಗಗಳಿವೆ. ಸಪ್ತಜ್ಞಾನಭೂಮಿಕೆಯಂತೆ ಏಳು ಅಂಗಗಳಿವೆ. ಈ ಎಲ್ಲವೂ **ವಿಚಾರಪ್ರಧಾನಗಳಾಗಿವೆ.** ಅದರ ಸಾಧನವು ಅನೇಕ ಪ್ರಕಾರವಾಗಿದೆ."

ದೇಹದ ಸೂಕ್ಷ್ಮಶಕ್ತಿಯೇ ಮನಸ್ಸಾದುದರಿಂದಲೂ ಮನಸ್ಸಿನ ಸ್ಥೂಲರೂಪವೇ ದೇಹವಾದುದರಿಂದಲೂ ದೇಹವು ಮನಸ್ಸಿನ ಮೇಲೆಯೂ ಮನಸ್ಸು ದೇಹದ ಮೇಲೆಯೂ ಪರಿಣಾಮಕಾರಿಗಳಾಗಿವೆ. ದೇಹವು ಅಸ್ವಸ್ಥವಾದರೆ ಮನಸ್ಸೂ ಅಶಾಂತವಾಗುತ್ತದೆ. ಮನಸ್ಸು ಅಶಾಂತವಾದರೆ ದೇಹವೂ ಅನಾರೋಗ್ಯವಾಗುತ್ತದೆ.

ಪಾತಂಜಲ ರಾಜಯೋಗದಲ್ಲಿ ಮೊದಲು ನೈತಿಕ ಸಾಧನಗಳೂ ಅನಂತರ ದೈಹಿಕ ಸಾಧನಗಳೂ, ಕೊನೆಯಲ್ಲಿ ಅಂತರಂಗಿಕ ಸಾಧನಗಳೂ ಹೇಳಲ್ಪಟ್ಟಿವೆ. ಎಂಟು ಅಂಗಗಳಿರುವ ಈ ರಾಜಯೋಗದಲ್ಲಿ ಮೊದಲನೆಯದು ಯಮ.

# ಯಮ

**ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾ ಯಮಾಃ**
(ಪಾ. ಯೋಗಸೂತ್ರ)

(ಇವುಗಳಲ್ಲಿ ಒಳ್ಳೆಯದನ್ನು ಹಿಡಿಯುವುದಕ್ಕೆ ಮೊದಲೇ ಬಿಡತಕ್ಕ ಕೆಟ್ಟ ನಡತೆ ಗಳನ್ನು ಹೇಳಿದೆ.) ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಇವುಗಳೇ ಯಮಗಳು.

ಪರಮಾರ್ಥಸಾಧನೆಗೆ ನೀತಿಯೇ ನೆಲಗಟ್ಟು. ನೀತಿಪಾಲನೆಯನ್ನೆ ಮಾಡದವನು ಪರಮಾರ್ಥಿಯೆನ್ನುವುದು ಬೂಟಾಟಿಕೆಯಾಗುತ್ತದೆ. ಆದ್ದ ರಿಂದ ಅಹಿಂಸಾದಿ ನೀತಿಸಾಧನಗಳನ್ನು ಮೊದಲು ಹೇಳಿದ್ದಾರೆ.

**ಅಹಿಂಸೆ :—**

ಅಹಿಂಸೆಯೆಂದರೆ ಯಾವ ಪ್ರಾಣಿಯನ್ನೂ ಕೊಲ್ಲದಿರುವುದು. ಇಷ್ಟೇ ಅಲ್ಲ; ಚುಚ್ಚುಮಾತುಗಳನ್ನಾಡಿ ಮಾತಿನಿಂದಲೂ ಯಾರ ಮನಸ್ಸಿಗೂ ನೋವು ಮಾಡಬಾರದು; ಮನಸ್ಸಿನಿಂದಲೂ ಯಾರಿಗೂ ಕೇಡು ಬಯಸಬಾರದು. ಏಕೆಂದರೆ ವಿದ್ಯುಜ್ಜನಕವಾದ ಯಂತ್ರಕೇಂದ್ರ (ಡೈನಮೋ) ದಿಂದ ಹೊರಟ ವಿದ್ಯುಚ್ಛಕ್ತಿಯು ಒಂದು ವೃತ್ತವನ್ನು ಪೂರೈಸಿ ಸುತ್ತಿ, ಹಿಂದಿರುಗಿ ಆ ಕೇಂದ್ರಕ್ಕೇ ಬರುವಂತೆ ನಮ್ಮ ಮನಸ್ಸಿನಿಂದ ಹೊರಟ ರಾಗವೃತ್ತಿಯಾಗಲೀ ದ್ವೇಷವೃತ್ತಿ ಯಾಗಲೀ ತನ್ನ ವಿಷಯವನ್ನು ಬಳಸಿ ಸುತ್ತಿ ಹಿಂದಿರುಗಿ ಹೆಚ್ಚಿನ ಶಕ್ತಿಯಿಂದ ನಮ್ಮಲ್ಲಿಗೇ ಬಂದು ಸೇರುತ್ತದೆ. ಯಾರ ವಿಷಯದಲ್ಲಿಯಾದರೂ ಆಗಲಿ ನಮ್ಮಲ್ಲಿ ದ್ವೇಷವೃತ್ತಿ ಉದಿಸಿದರೆ ಅದರ ಪ್ರತಿಕ್ರಿಯೆಯು ನಮ್ಮ ಮೇಲೆ ಆಗುವುದರಿಂದಲೂ ಸಕಲ ಪ್ರಾಣಿಗಳಲ್ಲಿಯೂ ಪರಮಾತ್ಮನೇ ಅಥವಾ ತಾನೇ ಇರುವುದರಿಂದಲೂ ಯಾರನ್ನೂ ದ್ವೇಷಿಸಬಾರದು; ಇದೇ ಅಹಿಂಸೆ. ಆದರೆ ಇದು ಒಂದು ನಿಷೇಧಾತ್ಮಕವಾದ ನೀತಿಯು. ವಿಧಾಯಕರೂಪದಲ್ಲಿ ಇದು ಸರ್ವರಲ್ಲಿಯೂ ಪ್ರಿಯವೂ ದಯವೂ ಆಗಿದೆ.

**" ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ "** ಎಂಬ ಯೋಗಸೂತ್ರದಂತೆ ಅಹಿಂಸೆಯೆಂಬ ಒಂದು ಸಾಧನದಲ್ಲಿ ಸಿದ್ಧಿ ಪಡೆದವನ ಸನ್ನಿಧಿ

ಯಲ್ಲಿ ಕ್ರೂರವಾದ ಪಶುಪಕ್ಷಿಗಳು ಕೂಡ ತಮ್ಮ ಸ್ವಾಭಾವಿಕವಾದ ವೈರವನ್ನೂ ಮರೆತು ಆ ಯೋಗಿಯ ವಿಶ್ವಪ್ರೇಮದ ಮಹಾ ಪ್ರಭಾವದಲ್ಲಿ ಸಿಕ್ಕಿ ತಾವೂ ಪ್ರೇಮಮಯವಾಗುತ್ತವೆ. ಆದ್ದರಿಂದಲೇ ಪ್ರಾಚೀನಕಾಲದ ಋಷ್ಯಾಶ್ರಮಗಳಲ್ಲಿ ಇಲಿಗಳು ಬೆಕ್ಕಿನೊಡನೆ ಚಿನ್ನಾಟವಾಡುತ್ತಿದ್ದುವೆಂದೂ, ಬಿಸಿಲಲ್ಲಿ ಬಳಲಿ ಮರಿಹಾಕುತ್ತಿದ್ದ ಕಪ್ಪೆಯ ಮೇಲೆ ಸರ್ಪವು ಹೆಡೆ ಬಿಚ್ಚಿ ಕೊಡೆ ಹಿಡಿದಿತ್ತೆಂದೂ ಹಸಿದೋಡಿಬಂದ ಎರಳೆಯ ಮರಿಗೆ ಎಳೆಗಂದಿ ಹುಲಿಯು ಮೊಲೆಯುಣ್ಣಿಸುತ್ತಿತ್ತೆಂದೂ ಪುರಾಣಗಳಿಂದ ಕೇಳಿದ್ದೇವೆ. ವಿಶ್ವಪ್ರೇಮದ ಪ್ರಭಾವವೇ ಅಂತಹದು. ಪ್ರೇಮಮಾಡುವವರನ್ನು ಪ್ರೇಮಿಸುವುದು ಲೋಕದ ಸ್ವಭಾವ. ಆದರೆ ತನ್ನನ್ನು ಅತ್ಯಂತ ದ್ವೇಷಮಾಡುವವನನ್ನೂ ಪ್ರೇಮಿಸುವುದು ನಿಜವಾದ ಪ್ರೇಮಿಯ ಲಕ್ಷಣ. ಇದರಿಂದ ಯೋಗಿಯ ಮನಸ್ಸು ಪ್ರಸನ್ನವೂ ಶಾಂತವ ಸ್ವಾಧೀನವೂ ಆಗುತ್ತದೆ.

**ಸತ್ಯ :—**

ಸತ್ಯವೆಂದರೆ ಸುಳ್ಳು ಹೇಳದಿರುವುದು. ದಾಕ್ಷಿಣ್ಯಕ್ಕಾಗಿಯೂ ಸ್ವಾರ್ಥಕ್ಕಾಗಿಯೂ ತತ್ಕಾಲ ರಂಜನೆಗಾಗಿಯೂ ಸುಳ್ಳು ಹೇಳುವುದಕ್ಕಿಂತಲೂ ಸುಮ್ಮನಿರುವುದು ಒಳ್ಳೆಯದು. ಕೆಲವು ಸಮಯ ಅನ್ಯಾಯಕ್ಕೆ ಪ್ರೋತ್ಸಾಹಕರವಾಗಿ ಅಥವಾ ಅರ್ಧಸಮ್ಮತಿಯಾಗಿ ಸುಮ್ಮನಿರುವುದಕ್ಕಿಂತಲೂ ನಿರ್ದಾಕ್ಷಿಣ್ಯವಾಗಿ ಸತ್ಯ ಹೇಳುವುದೇ ಲೇಸು. ಆ ಸತ್ಯವಾದರೂ ಪ್ರಿಯವಾಗಿದ್ದರೆ ಇನ್ನೂ ಉತ್ತಮ. ಸತ್ಯವೂ ಪ್ರಿಯವೂ ಆದುದು, ಪುರುಷಾರ್ಥಸಾಧಕವೂ ಆದರೆ ಬಹಳ ಹಿತವು. ಸತ್ಯರೂಪವಾದ ಧರ್ಮವಿಚಾರವನ್ನೂ ಬ್ರಹ್ಮವಿಚಾರವನ್ನೂ ನುಡಿಯುತ್ತಿರುವುದೂ ನುಡಿದಂತೆ ನಡೆಯುತ್ತಿರುವುದೂ ಸತ್ಯವೆಂಬ ಸಾಧನವೇ ಆಗಿದೆ. ಇದರಿಂದ ಮನಸ್ಸಿನ ನೈತಿಕ ಬಲವೂ, ಸಮಾಧಾನವೂ ನಿಷ್ಕಪಟ ಧೀರವೃತ್ತಿಗಳೂ ಬೆಳೆಯುತ್ತವೆ. ಸತ್ಯಸಂಧನೇ ಮಹಾತ್ಮ.

“ **ಸತ್ಯಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯಿತ್ವಂ** ” ಎಂಬ ಯೋಗ ಸೂತ್ರದಂತೆ ಸತ್ಯವಾಕ್ಯವಾಡುವುದೇ ಅಖಂಡವಾಗಿ ನಡೆದು ಸಿದ್ಧಿಯಾದರೆ ಆ ಯೋಗಿಯು ಕರ್ಮಮಾಡದೇ ಫಲವನ್ನು ಹೊಂದುತ್ತಾನೆ. ಮತ್ತು ಅವನ ಆಶೀರ್ವಾದಬಲದಿಂದ ಯಾರಿಗಾದರೂ ಪ್ರಯತ್ನವಿಲ್ಲದೇ ಫಲಸಿದ್ಧಿಯಾಗುತ್ತದೆ.

**ಅಸ್ತೇಯ :—**

ಅಸ್ತೇಯವೆಂದರೆ ಕದಿಯದಿರುವುದು. ಲೋಕದಲ್ಲಿ ಒಬ್ಬರ ಗಂಟನ್ನು ಒಬ್ಬರು ನುಂಗುವವರೇ ಹೆಚ್ಚು. ಯೋಗಿಯು ತನ್ನ ಶ್ರಮದಿಂದ ತಾನು ಸಂಪಾದಿಸಿದುದನ್ನಾಗಲೀ, ಭಿಕ್ಷಾವೃತ್ತಿಯಿಂದ ಬಂದುದನ್ನಾಗಲೀ, ಭಕ್ತರು ಪ್ರೇಮದಿಂದ ತಾವಾಗಿಯೇ ತಂದುಕೊಟ್ಟುದನ್ನಾಗಲೀ ಸೇವಿಸಬಹುದೇ ಹೊರತು ಇನ್ನೊಬ್ಬರ ವಸ್ತುವನ್ನು ಮನಸ್ಸಿನಿಂದಲೂ ಬಯಸಬಾರದು. ಈಶೋಪನಿಷತ್ತಿನಲ್ಲಿಯೂ "**ಮಾ ಗೃಧಃ ಕಸ್ಯಸ್ವಿದ್ಧನಂ**" "ಯಾರ ಧನವನ್ನೂ ಬಯಸಬೇಡ" ಎಂದು ಹೇಳಿದೆ. ಯಮಾಂಗದ ಉಳಿದೆಲ್ಲಾ ನೀತಿನಿಯಮಗಳಂತೆ ಅಸ್ತೇಯ ಸಾಧನವನ್ನೂ ಆದರ್ಶವಾಗಿ ತೆಗೆದುಕೊಂಡರೆ ಇದನ್ನು ನಡೆಸುವುದೂ ಬಹಳ ಕಠಿಣ. ಶರೀರಪೋಷಣೆಗೆ ಎಷ್ಟು ಅಗತ್ಯವೋ ಅಷ್ಟೇ ಊಟಮಾಡುವುದಕ್ಕಿಂತ ಒಂದು ತುತ್ತು ಹೆಚ್ಚು ಉಂಡರೆ ಇನ್ನೊಬ್ಬನ ಪ್ರಾಣರಕ್ಷಣೆಗೆ ಅಗತ್ಯವಾದ ಆ ತುತ್ತನ್ನು ನಾವು ಕಸಿದುಕೊಂಡಂತಾಗಿ ಅದು (ಸ್ತೇಯ) ಕಳ್ಳತನವಾಗುತ್ತದೆ ಅನ್ನದಂತೆಯೇ ವಸ್ತ್ರ ಮೊದಲಾದ ಉಳಿದೆಲ್ಲಾ ವಸ್ತುಗಳ ವಿಷಯವೂ ಇದೆ. ಅಸ್ತೇಯದ ಸೂಕ್ಷ್ಮವಾದ ಮರ್ಮವನ್ನು ತಿಳಿದು ನಡೆಸುವುದರಿಂದ ಅಂತಃಕರಣವು ಸೂಕ್ಷ್ಮವೂ ನಿಯಮಿತವೂ ಸ್ವಾವಲಂಬಿಯೂ ಸಮಾಹಿತವೂ ಆಗುತ್ತದೆ.

"**ಅಸ್ತೇಯಪ್ರತಿಷ್ಠಾಯಾಂ ಸರ್ವ ರತ್ನೋಪಸ್ಥಾನಂ**" ಎಂಬ ಯೋಗಸೂತ್ರದಂತೆ ಎಂದೆಂದೂ ಎಷ್ಟುಮಾತ್ರವೂ ಕದಿಯದಿರುವುದು ಸಿದ್ಧಿಯಾದರೆ ಸರ್ವಸಂಪತ್ತೂ ತಾನಾಗಿಯೇ ಒಲಿದು ಬರುವುದು. ಧನಾದಿಗಳನ್ನು ಆಶೆಮಾಡಿದಷ್ಟೂ ನಾವು ಅವುಗಳ ದಾಸರಾಗುತ್ತೇವೆ; ಅವುಗಳನ್ನು ನಾವು ಉದಾಸೀನಮಾಡಿದಷ್ಟೂ ಅವು ನಮ್ಮನ್ನು ಹುಡುಕಿಕೊಂಡೂ ಓಲೈಸಿಕೊಂಡೂ ಬರುತ್ತವೆ.

**ಬ್ರಹ್ಮಚರ್ಯ :—**

ಬ್ರಹ್ಮಚರ್ಯವೆಂದರೆ ವೀರ್ಯಸಂರಕ್ಷಣ. ನಾವು ತೆಗೆದುಕೊಳ್ಳುವ ಆಹಾರವು ದೇಹದಲ್ಲಿ ರಕ್ತಮಾಂಸಾದಿ ಸಪ್ತಧಾತುಗಳಾಗುತ್ತವೆ. ಅವುಗಳಲ್ಲಿ

ವೀರ್ಯವೇ ಸಾರಭೂತವಾದುದು ಒಂದು ಕಣ ವೀರ್ಯವು ಎಂಭತ್ತು ಕಣ ರಕ್ತಕ್ಕೆ ಸಮಾನವೆಂದು ಆರೋಗ್ಯಶಾಸ್ತ್ರವು ಹೇಳುತ್ತದೆ. ವೀರ್ಯಕ್ಕೂ ಪ್ರಾಣಕ್ಕೂ ಮನಸ್ಸಿಗೂ ಪರಸ್ಪರ ಸಂಬಂಧವಿದೆ. ವೀರ್ಯಸ್ಖಲನೆಯಿಂದ ಮನಸ್ಸಿನ ಚಲನೆಯೂ ಮನೋವಿಕಾರದಿಂದ ವೀರ್ಯಚಲನವೂ ಪ್ರಸಿದ್ಧವಾದುದು. ವೀರ್ಯಕ್ಷಯ – ವೀರ್ಯವ್ಯಯ – ದಿಂದ ದೇಹವೂ ದುರ್ಬಲವಾಗುತ್ತದೆ; ಮುಪ್ಪೂ ಬೇಗ ಬರುತ್ತದೆ. ಉಪನಿಷತ್ತಿನಲ್ಲಿ **"ಮರಣಂ ಬಿಂದು ಪಾತೇನ | ಜೀವನಂ ಬಿಂದು ಧಾರಣಾತ್ ||"** ಎಂದು ಹೇಳಿದೆ. ಗೀತೆಯಲ್ಲಿ **"ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ |"** "ಪರಮಪದವನ್ನು ಇಚ್ಛಿಸುವವರು ಬ್ರಹ್ಮಚರ್ಯವನ್ನಾಚರಿಸುವರು" ಎಂದು ಹೇಳಿದೆ. ಬ್ರಹ್ಮಚರ್ಯ ಪಾಲನಮಾಡತಕ್ಕವರು – ಕಾಮಭಾವದಿಂದ – ಸ್ತ್ರೀಯರ ನಿರೀಕ್ಷಣ, ಸಂಭಾಷಣ, ಸ್ಪರ್ಶನ, ಸಂಭೋಗ ಮೊದಲಾದವುಗಳನ್ನು ಮಾಡಬಾರದು; ಶೃಂಗಾರರಸಪ್ರಧಾನವಾದ ಕಾವ್ಯಗಳನ್ನೂ ಕಾದಂಬರಿಗಳನ್ನೂ ಓದಬಾರದು; ಕಾಮುಕಜನರ ಸಹವಾಸ ಮಾಡಬಾರದು; ಸುಗಂಧದ್ರವ್ಯಗಳನ್ನೂ ಕೋಮಲ ವಸ್ತುಗಳನ್ನೂ ಉಪಯೋಗಿಸಬಾರದು; ನಾಟಕ ಮೊದಲಾದುವುಗಳನ್ನು ನೋಡಬಾರದು; ಅನ್ನವಿಕ್ರಯ ಮಾಡುವ ಹೊಟೇಲುಗಳಿಗೆ ಹೋಗಬಾರದು; ವೀರ್ಯಶಿಥಿಲ ಮಾಡುವ ಹಾಗೂ ಉತ್ತೇಜನವುಂಟು ಮಾಡುವ ಕಾಫಿ, ಟೀ ಮೊದಲಾದ ಪಾನೀಯಗಳನ್ನು ಕುಡಿಯಬಾರದು. ಸರ್ವದಾ ಕೌಪೀನವನ್ನು ಧಾರಣಮಾಡಬೇಕು. ಊರ್ಧ್ವರೇತಸ್ಕನಾಗಲು ಶೀರ್ಷಾಸನವನ್ನೂ ವಜ್ರೋಳಿ ಯೋಗವನ್ನೂ ಅಭ್ಯಾಸಮಾಡಬೇಕು.

ಆದರೆ ಗೃಹಸ್ಥನು ಸ್ವಸ್ತ್ರೀಯಲ್ಲಿ ಋತುಕಾಲದಲ್ಲಿ ಮಾತ್ರ ರತಿಮಾಡುವುದೂ ಬ್ರಹ್ಮಚರ್ಯವೇ ಆಗಿದೆ. ಸ್ತ್ರೀ ದೇಹದ ದೋಷವನ್ನು ಮನಸ್ಸಿಗೆ ತಂದುಕೊಂಡು ಹೇಸಿಕೆಪಡುವ ವೈರಾಗ್ಯವೃತ್ತಿಯಿಂದಾಗಲೀ, ಸರ್ವಸ್ತ್ರೀಯರನ್ನೂ ಲೋಕಮಾತೆಯ ರೂಪದಿಂದ ಪೂಜ್ಯವಾಗಿ ಕಾಣುವ ಭಕ್ತಿಭಾವದಿಂದಾಗಲೀ ಬ್ರಹ್ಮಚರ್ಯವನ್ನು ಪಾಲಿಸಬೇಕು. ಇದರಿಂದ ಮನಸ್ಸಿನ ಚಾಂಚಲ್ಯವಳಿದು ಶಾಂತಿಗೆ ಸಾಧನವಾಗುವುದು. ವೀರ್ಯವು ಬ್ರಹ್ಮಚರ್ಯದಿಂದ ದೇಹದಲ್ಲಿಯೇ ಲೀನವಾಗಿ ಸರ್ವಶ್ರೇಷ್ಠವೂ ಸರ್ವಶಕ್ತಿಗಳ ಸಾರವೂ ಆದ – ಮಸ್ತಕದಲ್ಲಿರುವ – ಓಜಸ್ಸಾಗುವುದೆಂದು ಯೋಗಿಗಳು ಹೇಳುತ್ತಾರೆ.

ಮಾರುತಿ, ಭೀಷ್ಮಾಚಾರ್ಯ ಮೊದಲಾದವರ ಅದ್ಭುತ ಶಕ್ತಿಗಳೆಲ್ಲಾ ಅವರ ಬ್ರಹ್ಮಚರ್ಯದ ಫಲವೇ ಆಗಿದೆ.

ಇದುವರೆಗೆ ಹೇಳಿರುವ ದೈಹಿಕ ಬ್ರಹ್ಮಚರ್ಯಕ್ಕಿಂತಲೂ ಉತ್ತಮವಾದ ಮಾನಸಿಕ ಬ್ರಹ್ಮಚರ್ಯವಿದೆ. ಕಣ್ಣಿಂದ ಕಾಣುವುದನ್ನೆಲ್ಲಾ ಬ್ರಹ್ಮವನ್ನಾಗಿಯೂ ಕಿವಿಯಿಂದ ಕೇಳುವುದನ್ನೆಲ್ಲಾ ಬ್ರಹ್ಮವನ್ನಾಗಿಯೂ ಭಾವಿಸಬೇಕು. ಹೀಗೆ ಸರ್ವೇಂದ್ರಿಯಗಳ ವೃತ್ತಿಗಳಲ್ಲಿಯೂ ಅಂತಃಕರಣ ವೃತ್ತಿಗಳಲ್ಲಿಯೂ ಬ್ರಹ್ಮಭಾವನೆಯನ್ನೇ ಅಭ್ಯಾಸಮಾಡುವುದು ಮಾನಸಿಕ ಬ್ರಹ್ಮಚರ್ಯ.

“ಬ್ರಹ್ಮಚರ್ಯ ಪ್ರತಿಷ್ಠಾಯಾಂ ವೀರ್ಯಲಾಭಃ” ಎಂಬ ಯೋಗಸೂತ್ರದಂತೆ ಬ್ರಹ್ಮಚರ್ಯಸಿದ್ಧಿಯಾದರೆ ಯೋಗಿಯು ಮೇಧಾವಿಯೂ ತೇಜಸ್ವಿಯೂ ಓಜಸ್ವಿಯೂ ಆಗುತ್ತಾನೆ. ಅವನ ವಾಣಿಯೂ ಉಪದೇಶವೂ ಕೃತಿಗಳೂ ವೀರ್ಯವತ್ತರವಾಗುತ್ತವೆ.

**ಅಪರಿಗ್ರಹ :—**

ಅಪರಿಗ್ರಹವೆಂದರೆ ಶರೀರರಕ್ಷಣಾರ್ಥವಾಗಿ ಹೊರತು ಹೆಚ್ಚಿನ ಭೋಗ ಪದಾರ್ಥಗಳನ್ನು ಸ್ವೀಕರಿಸದಿರುವುದು. ಗೀತೆಯಲ್ಲಿ,

**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ।**

“ಶರೀರ ಪೋಷಣಕ್ಕಾಗಿಯೂ ಪ್ರಾಣಧಾರಣಕ್ಕಾಗಿಯೂ ಮಾತ್ರ ಮಾಡಿದ ಕರ್ಮಗಳಿಂದ ಪಾಪಗಳನ್ನು ಹೊಂದುವುದಿಲ್ಲ” ಎಂದು ಹೇಳಿದೆ. ಭೋಗಾಪೇಕ್ಷೆಯಿಂದ ವಸ್ತುಗಳ ಸ್ವೀಕಾರವನ್ನೂ ಸಂಗ್ರಹವನ್ನೂ ಮಾಡುವುದರಿಂದ ಆ ದಾತೃಗಳ ಪಾಪಗಳು ಗಂಟುಬಿದ್ದು ತಪೋಹರಣವಾಗುವುದು. ಪ್ರತಿಗ್ರಹ ಮಾಡುವ ಅಭ್ಯಾಸವಾದರೆ ಮನಸ್ಸು ಯಾವಾಗಲೂ ದಾನಗಳನ್ನೇ ಬಯಸುತ್ತಾ ಹೊರಹೊರಗೇ ಹರಿಯುವುದು; ದಾನಿಯ ಮನಸ್ಸಿಗೆ ಅಧೀನವಾಗಿ ಸ್ವಾತಂತ್ರ್ಯವನ್ನೂ ಕಳೆದುಕೊಳ್ಳುವುದು. ಹೆಚ್ಚು ಸಂಗ್ರಹ ಮಾಡಿದರೆ ಅದರ ರಕ್ಷಣಾದಿಗಳ ಬಗೆಗೆ ಮನಸ್ಸನ್ನೂ ಶಕ್ತಿಯನ್ನೂ ಕಾಲವನ್ನೂ ವ್ಯರ್ಥವಾಗಿ ವ್ಯಯಮಾಡಬೇಕಾಗುವುದು. ಆದ್ದರಿಂದ ಮನಶ್ಶಾಂತಿಗೆ ಅಪರಿಗ್ರಹ ಸಾಧನವು ಅಗತ್ಯ.

" ಅಪರಿಗ್ರಹಸ್ಥೈರ್ಯೇ ಜನ್ಮಕಥಂ ತಾ ಸಂಬೋಧಃ " ಎಂಬ ೋಗಸೂತ್ರದಂತೆ ಅಪರಿಗ್ರಹವು ಸಿದ್ಧಿಯಾದರೆ ಪೂರ್ವಜನ್ಮಗಳ ಸ್ಮರಣೆ ಾಗುವುದು.

ಹಠಯೋಗಪ್ರದೀಪಿಕೆ ಮೊದಲಾದ ಗ್ರಂಥಗಳಲ್ಲಿ ಮೇಲಿನ ಯಮದ ಮ ಅಂಗಗಳ ಜೊತೆಗೆ ಇನ್ನೂ ಐದು ನೀತಿಸಾಧನಗಳನ್ನು ಸೇರಿಸಿರುವರು ವು ಕ್ಷಮಾ, ಧೃತಿ, ದಯಾ, ಆರ್ಜವ, ಮಿತಾಹಾರ ಎಂಬ ಸಾಧನಗಳು. ವುಗಳನ್ನೂ ಸಂಕ್ಷೇಪವಾಗಿ ವಿಚಾರಿಸೋಣ.

**ಮಾ :—**

ತನಗೆ ಅಪಕಾರಮಾಡಿದವರ ಮೇಲೆ ಅಥವಾ ಪ್ರತಿಕೂಲವಾದವರ ೀಲೆ ಪ್ರತೀಕಾರ ಮಾಡುವ ಶಕ್ತಿಯಿದ್ದರೂ ಮನಸ್ಸಿನಲ್ಲಿ ಸಹ ಕ್ರೋಧವೃತ್ತಿ ಾರದಿರುವುದೇ ಕ್ಷಮೆ. ಕ್ಷಮೆಯು ಬಹಳ ದೊಡ್ಡ ಗುಣ. ಇದರಿಂದ ುನಸ್ಸು ಪ್ರಸನ್ನವಾಗುವುದು.

**ೃತಿ :**

ಧೃತಿ ಎಂದರೆ ಧೈರ್ಯ. ಎಷ್ಟು ವಿಧವಾದ ಕಷ್ಟಗಳೊದಗಿದರೂ ೖರ್ಯಗೆಡದಿರುವುದೂ ಇಂದ್ರಿಯಗಳನ್ನೆಲ್ಲಾ ಸೆಳೆಯತಕ್ಕ ಮನೋಹರ ಷಯಗಳಿದ್ದರೂ ಅವುಗಳ ಪ್ರಲೋಭನಕ್ಕೆ ಸಿಕ್ಕದೇ ವ್ರತನಿಷ್ಠನಾಗಿರುವುದೇ ೃತಿಯಾಗಿದೆ. ಗೀತೆಯಲ್ಲಿ ಸಾತ್ತ್ವಿಕ-ರಾಜಸ-ತಾಮಸಗಳೆಂದು ಧೃತಿ ುನ್ನು ಮೂರು ಬಗೆಯಾಗಿ ಹೇಳಿದೆ. ಚಿತ್ತವೃತ್ತಿಗಳನ್ನೂ ಪ್ರಾಣೇಂದ್ರಿಯ ಕ್ತಿಗಳನ್ನೂ ಪರಮಾರ್ಥಸಾಧನೆಯಲ್ಲಿಯೇ ಎಡೆಬಿಡದೇ ತೊಡಗಿಸಿರುವುದೇ ಾತ್ತ್ವಿಕ ಧೃತಿಯು.

**ದಯಾ :—**

ಪರರ ಕಷ್ಟಕಾರ್ಪಣ್ಯಗಳನ್ನು ತನ್ನವೆಂದು ತಿಳಿದು ಕನಿಕರವನ್ನೂ ಹಾನುಭೂತಿಯನ್ನೂ ಹೊಂದಿ ಅವರ ಕಷ್ಟಗಳನ್ನು ಪರಿಹರಿಸುವುದೇ ಯೆಯು. ಇದರಿಂದ ಪ್ರೇಮವು ಬೆಳೆದು ಎಲ್ಲರಲ್ಲಿಯೂ ತಾನೇ ಇರುವೆನೆಂಬ ತ್ತ್ವವನ್ನು ಮನಗಾಣುವುದಕ್ಕೆ ಸಹಾಯವಾಗುತ್ತದೆ. ದಯಾಮೂಲವಾದುದೇ

ಧರ್ಮವಾಗಿದೆ. ದಯೆಯು ದೇವಗುಣ. ಸಮಸ್ತ ಪ್ರಾಣಿಗಳ ವಿಷ
ದಲ್ಲಿಯೂ ನಮ್ಮ ಹೃದಯದಲ್ಲಿ ದಯವಿದ್ದರೆ ನಮ್ಮ ಮೇಲೆ ದೇವರಿ
ದಯೆಯು ಬರುತ್ತದೆ.

**ಆರ್ಜವ :—**

ಆರ್ಜವವೆಂದರೆ ಸರಳತೆ – ಒಳಹೊರಗೊಂದಾಗಿರುವುದು. ಮನಸ್ಸಿನ
ಆಲೋಚಿಸಿದ್ದನ್ನೇ – ಅಗತ್ಯವಾದರೆ – ಮಾತಿನಿಂದ ತಿಳಿಸುವುದೂ, ಹಾ
ತಿಳಿಸಿದ್ದನ್ನೇ ಮಾಡುವುದೂ ಆರ್ಜವವೆನಿಸುತ್ತದೆ. ತ್ರಿಕರಣ ಶುದ್ಧಿಯೆ
ಆರ್ಜವ. ಮನಸ್ಸಿನಲ್ಲಿಯೂ ಮಾತಿನಲ್ಲಿಯೂ ಕಾರ್ಯದಲ್ಲಿಯೂ ಒಂ
ಬಗೆಯಾಗಿರತಕ್ಕವರೇ ಮಹಾತ್ಮರು.

**ಮಿತಾಹಾರ :—**

ದೇಹಮನಸ್ಸುಗಳ ಶಕ್ತಿಯೂ ಗುಣವೂ ಆಹಾರದಿಂದಲೇ ರಚನೆಯಾ
ವುವು. "**ಆಹಾರ ಶುದ್ಧೌ ಸತ್ತ್ವ ಶುದ್ಧಿಃ**" ಆಹಾರ ಶುದ್ಧವಾಗಿದ್ದ
ಮನಸ್ಸೂ ಶುದ್ಧವಾಗಿರುತ್ತದೆ. ಆಹಾರದಲ್ಲಿ ಗುಣದಷ್ಟೇ ಪ್ರಮಾಣವೂ ಮು
ವೆನ್ನಬಹುದು. ವಿಷವನ್ನಾದರೂ ಮಿತವಾಗಿ ಸೇವಿಸಿ ಔಷಧವನ್ನಾಗಿ ಮಾಡಿಕೊ
ಬಹುದು. ಔಷಧವನ್ನಾದರೂ ಅಮಿತವಾಗಿ ಸೇವಿಸಿದರೆ ವಿಷವಾಗಬಹುದ
ಗೀತೆಯಲ್ಲಿ,

**ನಾತ್ಯಶ್ನತಸ್ತು ಯೋಗೋಽಸ್ತಿ ನಚೈಕಾಂತಮನಶ್ನತಃ ।**

"ಹೆಚ್ಚು ಉಣ್ಣುವವನಿಗೂ ಒಮ್ಮೆಯೂ ಉಣ್ಣದವನಿಗೂ ಯೋಗ
ಸಾಧಿಸುವುದಿಲ್ಲ." ಅಲ್ಪಾಹಾರವನ್ನಾಗಲೀ ಉಪವಾಸವನ್ನಾಗಲೀ ಮಾ
ತಕ್ಕವರಿಗೆ ದೇಹಕ್ಕೆ ಅಗತ್ಯವಾದ ರಸಪುಷ್ಟಿಯೂ ಮನಸ್ಸಿಗೆ ಸಂತುಷ್ಟಿಯ
ಸಾಕಷ್ಟು ಸಿಕ್ಕುವುದಿಲ್ಲವಾದ್ದರಿಂದ ಯೋಗವು ಸಿದ್ಧಿಸುವುದಿಲ್ಲ. ಆಹಾರವನ
ಹೆಚ್ಚಾಗಿ ಸೇವಿಸುವುದರಿಂದ ಅನಾರೋಗ್ಯವೂ ಜಡತ್ವವೂ ಸೋಮಾರಿತನ
ಸಿದ್ಧಿಯೂ ಕೆಡುತ್ತದೆ. ಆದ್ದರಿಂದ ಯೋಗಿಯು ಅರ್ಧ ಹೊಟ್ಟೆಗೆ ಮಾ
ಉಂಡು ಮಿಕ್ಕ ಅರ್ಧದಲ್ಲಿ ಅರ್ಧವನ್ನು ನೀರಿನಿಂದ ತುಂಬಿ ಮಿಕ್ಕ ಭಾಗ
ಆಹಾರಪಚನ ಕಾಲದಲ್ಲಿ ಉಂಟಾಗುವ ಅನಿಲಗಳಿಗೂ (gases) [illegible]

ಕು. ಹೀಗಾದರೆ ದೇಹದಲ್ಲಿ ಆರೋಗ್ಯವೂ ಲಾಘವವೂ ಮನಸ್ಸಿಗೆ ಉಲ್ಲಾ ವೂ ಉಂಟಾಗುತ್ತವೆ. ತಂಗಳಾದುದನ್ನೂ ನೀರಸವಾದುದನ್ನೂ ದುಃಖ-ೀಕ-ರೋಗಗಳನ್ನುಂಟುಮಾಡುವ ಆಹಾರವನ್ನೂ ಸೇವಿಸಬಾರದು. ಬಹಳ ರವೂ, ಬಹಳ ಹುಳಿಯೂ, ಬಹಳ ಉಪ್ಪೂ, ಬಹು ಬಿಸಿಯೂ, ಶುಷ್ಕವೂ ಚ್ಛಿಷ್ಟವೂ ಅಪವಿತ್ರವೂ ಆಗಿರುವ ಆಹಾರವನ್ನೂ ಸೇವಿಸಬಾರದು. ಆಯು ನ್ನೂ ಮನಸ್ಸಿನ ಉತ್ಸಾಹಶಕ್ತಿಯನ್ನೂ ಶರೀರದ ಬಲವನ್ನೂ ಆರೋಗ್ಯ ನ್ನೂ ಸುಖವನ್ನೂ ಪ್ರೀತಿಯನ್ನೂ ಹೆಚ್ಚಿಸುವ ರಸಯುಕ್ತವೂ ಘೃತಾದಿ ಿಂದ ಸ್ನಿಗ್ಧವೂ ಹೃದ್ಯವೂ ಆಗಿರುವ ಸಾತ್ತ್ವಿಕಾಹಾರವನ್ನು ಭುಂಜಿಸಬೇಕು. ೋಜನ ಮಾಡುವಾಗ ಗೀತೆಯಲ್ಲಿ ಭಗವಂತನು ಹೇಳಿರುವಂತೆ,

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ |**
**ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ||**

ನಾನು (ಭಗವಂತನು) ಪ್ರಾಣಿಗಳ ಶರೀರವನ್ನು ಆಶ್ರಯಮಾಡಿಕೊಂಡು ಠರಾಗ್ನಿಯಾಗಿ ಪ್ರಾಣಾಪಾನ ವಾಯುಗಳಿಂದ ಕೂಡಿ ನಾಲ್ಕು ವಿಧವಾದ ಹಾರವನ್ನೂ ಪಚನಮಾಡುತ್ತೇನೆ ” ಎಂಬ ತತ್ತ್ವವನ್ನು ಸ್ಮರಿಸುತ್ತಿರಬೇಕು.

**“ ಏತೇ ಜಾತಿ-ದೇಶ-ಕಾಲ-ಸಮಯಾನವಚ್ಛಿನ್ನಾಃ ಸಾರ್ವ-ೌಮಾ ಮಹಾವ್ರತಂ ”** ಎಂಬ ಯೋಗಸೂತ್ರದಂತೆ ಇದುವರೆಗೆ ಹೇಳಿರುವ ೀತಿಸಾಧನೆಗಳೆಲ್ಲಾ ಎಲ್ಲಾ ದೇಶಗಳಲ್ಲಿಯೂ ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ಾತಿಯವರೂ ನಡೆಸತಕ್ಕ ಸಾರ್ವಭೌಮ ಮಹಾವ್ರತಗಳು.

ಶ್ರೀ ಪತಂಜಲಿ ಮಹರ್ಷಿಗಳು ಯಮವೆಂಬ ಸಾಧನೆಯನ್ನು ಹೇಳಿದ ೀಲೆ ಚಿತ್ತಶುದ್ಧಿಯನ್ನುಂಟುಮಾಡುವ ನಿಷ್ಕಾಮಕರ್ಮರೂಪವಾದ ನಿಯಮ ನ್ನು ಹೇಳಿರುತ್ತಾರೆ.

## ನಿಯಮ

**“ ಶೌಚ-ಸಂತೋಷ-ತಪಃ-ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ಯಮಾಃ ”** ಎಂಬ ಯೋಗಸೂತ್ರದಂತೆ ಶೌಚ, ಸಂತೋಷ, ತಪಸ್ಸು, ಾಧ್ಯಾಯ, ಈಶ್ವರಪ್ರಣಿಧಾನ ಇವೇ ನಿಯಮಗಳು.

**ಶೌಚ :—**

ಶೌಚವೆಂದರೆ ಶುಚಿತ್ವ, ನೈರ್ಮಲ್ಯ. ಯೋಗಿಗೆ ದೈಹಿಕ ಮತ್ತು ಮಾ
ಸಿಕ ಶುಚಿತ್ವಗಳೆರಡೂ ಅಗತ್ಯವಾದವು. ಯಮಾಂಗ ಸಾಧನೆಯಿಂದ
ಬಹಳಮಟ್ಟಿಗೆ ಮಾನಸಿಕ ಶುಚಿತ್ವವೇ ಉಂಟಾಗುತ್ತದೆ. ದೈಹಿಕವಾದ ಶೌ
ದಲ್ಲಿಯೂ ಒಳಗಿನ ಶೌಚ ಹೊರಗಿನ ಶೌಚಗಳೆಂದು ಎರಡು ಬಗೆ. ದೇ
ದೊಳಗಿನ ಹೆಚ್ಚಿನ ಕಫ, ಪಿತ್ತ, ವಾತಾದಿ ಮಲಗಳನ್ನು ಕಳೆಯುವುದಕ್ಕಾಗಿಯೆ
ಹಠಯೋಗ ಪ್ರಕ್ರಿಯೆಯಲ್ಲಿ ಬಸ್ತಿ, ಧೌತಿ, ನೇತಿ, ನೌಲಿ, ತ್ರಾಟಕ, ಕಪಾ
ಭಾತಿ ಎಂಬ ಷಟ್ಕರ್ಮಗಳಿವೆ. ಈ ಕ್ಷಾಲನಕರ್ಮಗಳಿಂದ ದೇಹದಲ್ಲಿ ಲಘು
ತ್ವವೂ ಉಲ್ಲಾಸವೂ ಆರೋಗ್ಯವೂ ಉಂಟಾಗುತ್ತವೆ.

ನಿಜಗುಣಶಾಸ್ತ್ರವೂ ವಿದುರನೀತಿಯೂ ಹೇಳುವಂತೆ ಮುದುಕರಲ್ಲ
ಆರೋಗ್ಯವಂತರಿಗೆ ನಿತ್ಯವೂ “ ಮೂರು ಮಲವೂ ಆರು ಜಲವೂ ” ವಿಸರ್ಜ
ಯಾಗಬೇಕು. ಆಧುನಿಕ ಪ್ರಸಿದ್ಧ ವೈದ್ಯರಾದ ಡಾಕ್ಟರ್ ಗ್ಯಾಂಬರ್ಸ್ ಎಂ
ವವರೂ (ತಮ್ಮ ‘Constipation’ ಗ್ರಂಥದಲ್ಲಿ) ಹಾಗೆಯೇ ಹೇಳುತ್ತಾ
ಮಿತಾಹಾರಿಯಾದ ಯೋಗಿಗೆ ನಿತ್ಯವೂ ಎರಡು ಸಲ ಶೌಚವಾಗಬೇಕು. ಇ
ವಾದರೆ ದೇಹದಲ್ಲಿ ಆರೋಗ್ಯವೂ ಲಾಘವವೂ ಪಟುತ್ವವೂ ಸಂತೋಷ
ಇರುವುದಿಲ್ಲ. ಯೋಗಿಗಾಗಲೀ ಭೋಗಿಯಾದ ಸಂಸಾರಿಗಾಗಲೀ ಮ
ಬದ್ಧತೆಯು ದೊಡ್ಡ ರೋಗ. ಮಲಬದ್ಧತೆಯಾದರೆ ಅಪಾನವಾಯುವು ದೂಷಿ
ವಾಗಿ ಆಗಾಗ ದುರ್ಗಂಧದ ವಾಯುವು ವಿಸರ್ಜನೆಯಾಗುತ್ತಿರುತ್ತದೆ ಇಂ
ಸಮಯದಲ್ಲಿ ಇನ್ನೊಬ್ಬರ ಜೊತೆಗಿರುವುದೇ ಅಯೋಗ್ಯವೂ ತನ್ನ ಅಪಾ
ಗಂಧವು ತನಗೇ ಅಸಹ್ಯವೂ ಆಗುತ್ತದೆ. ಇಂಥಾ ಹೊಲಸು ಮನುಷ್ಯನೊಬ್ಬ
ಸಜ್ಜನರ ಸಭೆಯಲ್ಲಿ ಕುಳಿತು ಅಪಾನವಾಯುವನ್ನು ವಿಸರ್ಜನ ಮಾಡಿ
ನೆಂದರೆ ಸಭೆಗೆ ಸಭೆಯೇ ಅಸಹ್ಯ ಸಂಕಟದಲ್ಲಿ ಸಿಕ್ಕು ಪೇಚಾಡಬೇಕಾಗುತ್ತ
ಸಭಾ ಗಾಂಭೀರ್ಯದಲ್ಲಿ ಯಾವ ಸಭ್ಯರೂ ಈ ಸಂಕಟವನ್ನು ಹೇಳಿಕೊ
ವಂತಿಲ್ಲ; ಆದರೆ ಸಂತಾಪವು ಮಾತ್ರ ತಪ್ಪುವಂತಿಲ್ಲ. ಅಂದಮೇಲೆ
ಮನುಷ್ಯನ ಹೊಟ್ಟೆಯ ಪಾಪವು ಎಷ್ಟಿದೆಯೆಂದು ಹೇಳಬೇಕು ? ಇಂ
ನೊಬ್ಬನು ಯೋಗಿಯಾಗಬಲ್ಲನೇ ? ಪ್ರಾಣಾಪಾನಗಳನ್ನು ಜಯಿಸಿದವ

ರೋಗಿಯು. ಅತ್ಯಾಹಾರ ದುರಾಹಾರಗಳನ್ನು ಮಾಡುವುದೂ, ಯೋಗಾಂಗವಾದ ನಿಯಮದ ಉಪಾಂಗವಾಗಿ ಬಹುಮುಖ್ಯವಾದ ಶೌಚ (ಮಲವಿಸರ್ಜನ) ವನ್ನು ಪಾಲಿಸದಿರುವುದೂ ಈ ಪಾಪಕ್ಕೆ ಕಾರಣವಾಗಿದೆ. ಒಳಗಿನ ಶೌಚವಿಲ್ಲದೆ ಹೊರಗೆ ಸ್ನಾನಮಾಡಿದರೂ ಶುದ್ಧವಲ್ಲವೆಂಬುದು ಯೋಗಿಗೆ ಮಾತ್ರ ತಿಳಿಯುತ್ತದೆ – ಸಾಮಾನ್ಯ ಮಡಿವಂತರಿಗೆ ತಿಳಿಯದಿರಬಹುದು.

ಮಲಬದ್ಧತೆಯು ಪಾಪದ ಫಲವೆನ್ನಬಹುದು. ಮಲಬದ್ಧತೆಯೇ ಸರ್ವ ರೋಗಗಳಿಗೂ ಕಾರಣವೆಂದು ವೈದ್ಯಶಾಸ್ತ್ರವು ಹೇಳುತ್ತದೆ. ಉದರದೋಷವೇ ಸಕಲಾಮಯಗಳ ಮೂಲವೂ ತೌರೂ ಆಗಿದೆ. ಆಯುರ್ವೇದ ವೈದ್ಯನಾಗಲೀ ಅಲೋಪತಿಯ ವೈದ್ಯನಾಗಲೀ ಯಾವ ರೋಗಿಯನ್ನಾದರೂ ಮೊದಲು ಕೇಳುವುದು ಅವನ ಮಲಶುದ್ಧಿ ಹೇಗಿದೆಯೆಂದು. ಎಲ್ಲರೂ ಸಾಮಾನ್ಯವಾಗಿ, ಹೊಟ್ಟೆಗೆ ಎಷ್ಟು ಸಲವಾದರೂ, ಹಸಿವಿಲ್ಲದಿದ್ದರೂ, ತುಂಬುತ್ತಿರುವುದಕ್ಕೆ ಗಮನ ಕೊಡುವರೇ ಹೊರತು ಅದನ್ನು ತೆರವು ಮಾಡುವುದರ ಕಡೆ ಲಕ್ಷ್ಯ ಕೊಡುವುದಿಲ್ಲ. ಆದರೆ ಹೊಟ್ಟೆಗೆ ಕಡಿಮೆಯಾಗಿ ಸಾಯುವವರ ಸಂಖ್ಯೆಗಿಂತಲೂ ಹೊಟ್ಟೆಗೆ ಹೆಚ್ಚಾಗುವುದರಿಂದ ಮಲಾವರೋಧವಾಗಿ ಸಾಯುವವರ ಸಂಖ್ಯೆಯೇ ಬಹಳ ಹೆಚ್ಚು. ಮಲಶುದ್ಧಿಯಾಗದ ದಿವಸ ಮನಶ್ಶುದ್ಧಿಯೂ ಇರುವುದಿಲ್ಲ; ಏಕೆಂದರೆ ದೈಹಿಕ ಅಸ್ವಸ್ಥತೆಯು ದೆಸೆಯಿಂದ ಮನಸ್ಸಿಗೂ ಉಲ್ಲಾಸವೂ ಸಂತೋಷವೂ ಇರುವುದಿಲ್ಲ. ಹಸಿವೂ ಆಗುವುದಿಲ್ಲ. ಮಲವು ರಕ್ತಕ್ಕೆ ಸೇರಿ ರಕ್ತವೂ ಕೆಡುತ್ತದೆ. ಜ್ವರವಿಲ್ಲದಿದ್ದರೂ ತಲೆಶೂಲಿಯೂ ಬರಬಹುದು. ಇದರಿಂದ ಮೆದುಳೂ ದೂಷಿತವಾಗುವುದೆಂದು ತಿಳಿಯುವುದು. ಮೆದುಳು ಚಟುವಟಿಕೆಯಿಲ್ಲದೆ ಜಡವಾಗಿರುವುದರಿಂದ ವಿಚಾರವೂ ಮಂದವೂ ಮಲಿನವೂ ಆಗುವುದು ಸಹಜವಾಗಿದೆ. ನಾಲಿಗೆಯ ರುಚಿಯೂ ಕೆಡುತ್ತದೆ.

ಹೀಗೆ ಇಡೀ ದೇಹ ಮತ್ತು ಮನಸ್ಸುಗಳ ಮೇಲೆ ದುಷ್ಟ ಪರಿಣಾಮ ಮಾಡುವ ಮಲವನ್ನು ನಿತ್ಯವೂ ಮಲಕೋಶದಿಂದ ಸರಿಯಾದ ರೀತಿಯಲ್ಲಿ ಶುದ್ಧಿಮಾಡುವುದೇ ಶೌಚ. ಯೋಗಿಗೆ ಬಹಳ ಮುಖ್ಯವಾದ ಕುಂಡಲಿನೀ ಶಕ್ತಿಯಿರುವ ಮೂಲಾಧಾರ ಚಕ್ರವು ಗುದಸ್ಥಾನಕ್ಕೆ ಸಮಸ್ಥಾನದಲ್ಲಿರುವುದರಿಂದ ಆ ಗುದಸ್ಥಾನವು ಶುದ್ಧವೂ ಸಟುವೂ ಆಗಿರುವುದು ಅಗತ್ಯ. ಮೂಲಾ

ಧಾರ, ಸ್ವಾಧಿಷ್ಠಾನ, ಮಣಿಪೂರ ಈ ಮೂರು ಚಕ್ರಗಳೂ ಹೆಚ್ಚು ಕಡಿಮೆ ಉದರಭಾಗಕ್ಕೇ ಸಂಬಂಧಪಟ್ಟವುಗಳು. ಆದ್ದರಿಂದ ಹಿತವೂ ಮಿತವೂ ಆದ ಆಹಾರದಿಂದಲೂ ಅನಿವಾರ್ಯವಾದ ಅತ್ಯಲ್ಪ ಮಲದಿಂದಲೂ ಉದರವು ಶುದ್ಧವಾಗಿದ್ದ ಹೊರತು ಆ ಮೂರು ಚಕ್ರಗಳನ್ನು ಕುಂಡಲಿನೀ ಶಕ್ತಿಯಿಂದ ಪ್ರಜ್ವಲನ ಮಾಡುವುದು ಕಠಿಣವಾಗುತ್ತದೆ. ಆದ್ದರಿಂದ ಮಲಶುದ್ಧಿರೂಪವಾದ ಶೌಚವನ್ನು ಸಾಧಿಸುವುದಕ್ಕಾಗಿಯೇ ಯೋಗಶಾಸ್ತ್ರದಲ್ಲಿ ಬಸ್ತಿ, ನೌಲಿ, ಉಡ್ಡಿಯಾನ, ಶೀರ್ಷಾಸನ, ಸರ್ವಾಂಗಾಸನ, ಮಯೂರಾಸನ ಮೊದಲಾದ ಸಾಧನಗಳು ಏರ್ಪಟ್ಟಿವೆ. ಈ ಶೌಚವಿಲ್ಲದೇ ಹೆಚ್ಚುಹೊತ್ತು ಆಸನದಲ್ಲಿ ಕುಳಿತುಕೊಳ್ಳುವುದಕ್ಕಾಗಲೀ, ಪ್ರಾಣಾಯಾಮ ಮಾಡುವುದಕ್ಕಾಗಲೀ, ಸುಖವಾಗಿ ಧ್ಯಾನಮಾಡುವುದಕ್ಕಾಗಲೀ ಸಾಧ್ಯವಾಗುವುದಿಲ್ಲ. ಮಲಬದ್ಧತಾ ದೋಷವುಳ್ಳ ಲೌಕಿಕರಿಗೂ ಮಲಶುದ್ಧಿಯು ಸರಿಯಾದ ದಿವಸ ಒಂದು ನಿಜವಾದ ಹಬ್ಬವೇ ಆದಂತೆ ಮನಸ್ಸಿಗೆ ಸಂತೋಷವಾಗುತ್ತದೆ. ಅದಿಲ್ಲದ ದಿವಸ ದುರ್ದಿವಸವೆನ್ನಿಸುತ್ತದೆ. ಹಲವು ಜನರ ಜೀವನದಲ್ಲಿ ಈ ಶೌಚಸಾಧನೆಯೇ ಒಂದು ಮಹಾಸಮಸ್ಯೆಯಾಗಿರುತ್ತದೆ. ನಿತ್ಯವೂ ಶೌಚವೊಂದು ಸಾಧಿಸಿದರೆ ಅವರಿಗೆ ಸಮಾಧಿಸಿದ್ಧಿಯೋ ಬ್ರಹ್ಮಪ್ರಾಪ್ತಿಯೋ ಆದಷ್ಟು ಸಂತೋಷವಾಗುತ್ತದೆ. ಬದ್ಧಶರೀರಿಗಳಾದ ಮಹಾತ್ಮರೊಬ್ಬರು ತಮ್ಮ ಪೂರ್ವಾಶ್ರಮದಲ್ಲಿ ಶೌಚಸಾಧನೆಗಾಗಿ 'ವ್ಯಾಗನ್‌ಗಟ್ಟಲೆ ಸೋನಾಮುಖಿ' ಯನ್ನು ಸೇವಿಸಿರುವುದಾಗಿ ಹೇಳುತ್ತಿದ್ದರು. ಶರೀರದಲ್ಲಿ ಮೂಲವ್ಯಾಧಿಯ ಬಾಧೆಯುಳ್ಳ ಮಹಾತ್ಮರೊಬ್ಬರು ಸಿದ್ಧಾವಸ್ಥೆಯನ್ನು ಪಡೆದ ಮೇಲೂ ಒಂದು ದಿನ ಶೌಚವು ಎರಡು ಹೊತ್ತೂ ಸರಿಯಾಗದಿದ್ದರೆ ಬಾಧೆಪಡುತ್ತಿದ್ದರು,

ಮಲಬದ್ಧತಾ ನಿವಾರಣೆಗಾಗಿ ಸ್ವಂತ ಅನುಭವದಿಂದ ಇಲ್ಲಿ ಒಂದು ಸಾಧನೆಯನ್ನು ತಿಳಿಸಬಹುದು. ಬೆಳಗಿನ ಜಾವ ನಿತ್ಯವೂ ಐದು ನಿಮಿಷವಾದರೂ ಶೀರ್ಷಾಸನವನ್ನು ತಪ್ಪದೇ ಹಾಕಬೇಕು. ಶೀರ್ಷಾಸನದಲ್ಲಿ ಆಗಾಗ—ಕಾಲುಗಳನ್ನು ನೀಳವಾಗಿ ಎತ್ತಿ ನಿಲ್ಲಿಸಿ ಬಿಗಿಹಿಡಿಯದೆ—ಎರಡು ಕಾಲುಗಳನ್ನೂ ಮೊಣಕಾಲುಗಳಲ್ಲಿ ಹಿಂದಕ್ಕೆ ಮಡಿಸಿ ಹಿಡಿದು, ಉದರವನ್ನು ಶಿಥಿಲ ಮಾಡಿ ಸ್ವಲ್ಪ ಹೊತ್ತು ನಿರೀಕ್ಷಿಸಿದರೆ ಒತ್ತಾಗಿ ಬಿದ್ದಿದ್ದ ಕರುಳಿನ ಸುರುಳಿಗಳು ವಿರಳವಾಗಿ ಶ್ವಾಸಕೋಶದ ತಳದಲ್ಲಿರುವ ಪಪೆಯ (Diaphragm) ಮೇಲೆ

ಬೀಳುತ್ತವೆ. ಇದರಿಂದ ಕರುಳ ತುದಿಯಲ್ಲಿ ತೆರವು (Vacuum) ಆದಂತಾಗಿ ಗುದದ್ವಾರದಿಂದ ಹೊರಗಿನ ಗಾಳಿಯನ್ನು ಎಳೆದುಕೊಳ್ಳಬಹುದು. ಅಲ್ಲದೆ, ನಂಜುರಳೇಹುಳುವಿನ ಚಲನೆಯು ಹೇಗೋ ಹಾಗೆ ಕರುಳ ಸುರುಳಿಗಳಲ್ಲಿ ಚಲನೆಯುಂಟಾಗುತ್ತದೆ. ಗಾಳಿಯನ್ನು ಒಳಗೆ ಎಳೆದುಕೊಂಡ ಕೂಡಲೇ ಒಂದು ರೀತಿಯ ಉಡ್ಡಿಯಾನ ಕ್ರಿಯೆಯಿಂದ ಪ್ರಯತ್ನಪೂರ್ವಕವಾಗಿ ಗಾಳಿಯನ್ನು ಹೊರಗೆ ತಳ್ಳಬೇಕು. ಆಗ ಅಪಾನವಾಯುವು ಸಶಬ್ದವಾಗಿ ಹೊರಗೆ ಬರುತ್ತದೆ. ಪುನಃ ಪುನಃ ಹತ್ತಿಪ್ಪತ್ತು ಮೂವತ್ತು ಸಲ ಹೀಗೆ ಮಾಡಬೇಕು. ಇವರಿಂದ ಕರುಳುಗಳಲ್ಲಿರುವ ವಾಯುವೆಲ್ಲಾ ಹೊರಗೆ ಬರುತ್ತವೆ. ಕರುಳಿಗೆ ಚೆನ್ನಾಗಿ ವ್ಯಾಯಾಮವಾಗುತ್ತದೆ. ಸಾವಿರ 'ಉಠ್‌ಬೈಠ್' ಗಳನ್ನು ಹಾಕಿದರೂ ದಂಡೆಗಳನ್ನು ಒತ್ತಿದರೂ ಯಾವುದೇ ವ್ಯಾಯಾಮ ಮಾಡಿದರೂ ಕರಳುಗಳಿಗೆ ಮೇಲಿನ ರೀತಿಯ ವ್ಯಾಯಾಮವಾಗುವುದೂ ಇಲ್ಲ, ಮಲಶುದ್ಧಿಯಾಗುವುದೂ ಇಲ್ಲ. ಗುದದ್ವಾರದ ಈ ರಭಸವಾದ 'ಶ್ವಾಸೋಚ್ಛ್ವಾಸ'ವನ್ನು 'ವಾಯುಬಸ್ತಿ' ಎನ್ನಬಹುದು. ಕರಳುಗಳಲ್ಲಿ ತೀವ್ರವಾದ ಚಟುವಟಿಕೆಯುಂಟಾಗಿ ರಕ್ತಶುದ್ಧಿಯೂ ಮಲಶುದ್ಧಿಯೂ ಪೂರ್ಣವಾಗಿ ಆಗುತ್ತದೆ. ಜಲಬಸ್ತಿಯಿಂದಾಗಲೀ ಎನಿಮಾ ಪ್ರಯೋಗದಿಂದಾಗಲೀ ಈ ರೀತಿಯ ನೈಸರ್ಗಿಕವಾದ ಫಲವಾಗುವುದಿಲ್ಲ. 'ಎನಿಮಾ' ಪ್ರಯೋಗ ಕೃತ್ರಿಮವಾದುದು. ಇದರಿಂದ ಕರುಳಿಗೆ ವ್ಯಾಯಾಮವಿಲ್ಲ. ಮತ್ತು ಇದು ಕೆಟ್ಟ ಚಟವಾಗುತ್ತದೆ. ಇದನ್ನು ಯಾವಾಗಲೂ ಉಪಯೋಗಿಸುವುದೂ ಒಳ್ಳೆಯದಲ್ಲ. ಜಲಬಸ್ತಿಯೊಡನೆ ನೌಲಿಯನ್ನೂ ಮಾಡುವುದರಿಂದ ಕರುಳಿಗೆ ವ್ಯಾಯಾಮವಾದರೂ ಹೆಚ್ಚು ಆಗುವುದಿಲ್ಲ. ಮತ್ತು ಇದನ್ನು ನಿತ್ಯವಾಗಲೀ ಪರಸ್ಥಳದಲ್ಲಾಗಲೀ ಉಪಯೋಗಿಸುವುದಕ್ಕಾಗುವುದಿಲ್ಲ. 'ವಾಯುಬಸ್ತಿ'ಯನ್ನು ಎಲ್ಲಿಯಾದರೂ ನಿತ್ಯವೂ ಮಾಡಬಹುದು. ಇದನ್ನು ಮಾಡಿದವನ ಅಪಾನವು (ಅಕಸ್ಮಾತ್ ಆಹಾರದಲ್ಲಿ ವ್ಯತ್ಯಾಸವಾದರೂ) ದೂಷಿತವಾಗುವುದಿಲ್ಲ. ಈ ಶೀರ್ಷಾಸನದಲ್ಲಿಯೇ ಎರಡು ಕಾಲುಗಳನ್ನೂ ಸೈಕಲ್ಲಿನ ಪೆಡಲ್‌ಗಳನ್ನು ತುಳಿದಂತೆ ವೇಗವಾಗಿ ಸೊಂಟ ತೊಡೆಗಳಿಂದಲೂ ಸೇರಿ ಚಾಲನ ಮಾಡಬಹುದು. ಇದರಿಂದ ಕರಳುಗಳಲ್ಲಿ ಇನ್ನೂ ಹೆಚ್ಚು ಚಟುವಟಿಕೆಯನ್ನು ಹುಟ್ಟಿಸಿದಂತಾಗುತ್ತದೆ. ಎಲ್ಲವನ್ನೂ ಆತುರಪಡದೇ ಬಹಳ ಎಚ್ಚರದಿಂದ ಸಾವಕಾಶವಾಗಿ ಕ್ರಮಾಭ್ಯಾಸ

ದಿಂದ ನಡೆಸಿದರೆ ಯಾವ ತೊಂದರೆಯೂ ಆಗದೇ ಪ್ರಯೋಜನವಾಗುತ್ತದೆ. ಈ ಆಸನವು ಪೂರೈಸುವುದರೊಳಗೇ ಐದು ನಿಮಿಷಗಳಲ್ಲಿ ಶೌಚಕ್ಕೆ ಆತುರ ವಾಗುತ್ತದೆ. ಎಂತಹ ಮಲಬದ್ಧತೆಯಿದ್ದರೂ ನಿವಾರಣೆಯಾಗುತ್ತದೆ.

ಎಷ್ಟೋ ವರ್ಷಗಳಿಂದಲೂ ಎಷ್ಟು ಔಷಧಿಗಳನ್ನು ತೆಗೆದುಕೊಂಡರೂ ನಿತ್ಯವೂ ಸರಿಯಾಗಿ ಮಲಶುದ್ಧಿಯಾಗದೇ ಇರತಕ್ಕವರು ಲೆಕ್ಕವಿಲ್ಲದಷ್ಟು ಜನ ರಿದ್ದಾರೆ. ಅವರು ಜೀವಮಾನವೆಲ್ಲಾ ತಮ್ಮನ್ನು ನಿತ್ಯರೋಗಿಗಳೆಂದು ಭಾವಿಸಿ ಜುಗುಪ್ಸಿತ ಮನಸ್ಸಿನಿಂದ ಸಂಕಟಪಡತಕ್ಕವರಾಗಿರುತ್ತಾರೆ. ಮಲಶುದ್ಧಿ ಸರಿ ಯಾಗಿಲ್ಲದೇ ಮೂಲವ್ಯಾಧಿಯಿಂದ ನರಳತಕ್ಕವರೂ ಹೇರಳವಾಗಿದ್ದಾರೆ. ಎಲ್ಲರೂ ಯಾವ ಖರ್ಚೂ ಇಲ್ಲದೆ ಸುಲಭವಾಗಿ ಈ 'ಶೀರ್ಷಾಸನಸ್ಥ ವಾಯು ಬಸ್ತಿ'ಯಿಂದ ಮಹತ್ಪ್ರಯೋಜನವನ್ನು ಹೊಂದಬಹುದು. ಈ ಸಾಧನವನ್ನು ಯಾವ ಗ್ರಂಥದಲ್ಲಿಯೂ ತಿಳಿಸಿರುವುದನ್ನು ನೋಡಿಲ್ಲ. ಬಹಳ ವರ್ಷಗಳು ಮಲಬದ್ಧತೆಯಿಂದ ನರಳುತ್ತಿದ್ದು ಏತರಿಂದಲೂ ಪರಿಹಾರವನ್ನು ಕಾಣದೆ ಶ್ರಮಪಟ್ಟು ಈ ಲೇಖಕನು ತನ್ನ ಸ್ವಂತ ಶೋಧದಿಂದ ಸಾಧಿಸಿಕೊಂಡಿರುವ ನಿಶ್ಚಿತವಾದ ಫಲವನ್ನು ಕೊಡುವ ಕ್ರಮವೇ ಇದು. ಈ ಆಸನವನ್ನು ಬೆಳಗಿನ ಜಾವವೇ ಮಾಡಬೇಕು. ಅಥವಾ ಆಹಾರವು ಚೆನ್ನಾಗಿ ಪಚನವಾದಮೇಲೂ ಹಗುರವಾದ ಉದರವಿರುವಾಗಲೂ ಮಾಡಬಹುದು. ಇದರಲ್ಲಿ ಶೀರ್ಷಾಸನದ ಪ್ರಯೋಜನವೂ ಇದೆ. ಇದರಲ್ಲಿ ಧ್ಯಾನವನ್ನೂ ಮಾಡಬಹುದು. ಹೀಗೆ ಈ ಕ್ರಮದಿಂದ ದೇಹದ ಹಾಗೂ ಮನಸ್ಸಿನ ಉಭಯಶುದ್ಧಿಯೂ ಏಕಕಾಲದಲ್ಲಿ ಆಗುತ್ತದೆ. ಯಾವ ವೈದ್ಯರಾಜನೂ ಮಾಡಲಾರದ ಉಪಕಾರವನ್ನು ಇದು ಮಾಡುತ್ತದೆ. ಇದನ್ನು ಎಷ್ಟು ವರ್ಣಿಸಿದರೂ ಅದು ಹೆಚ್ಚಾಗುವಂತಿಲ್ಲ. ಇದು ಅಕ್ಷರಶಃ ಸತ್ಯವಾದುದು.

ಶೀರ್ಷಾಸನ ಸ್ಥಿತಿಯೊಂದನ್ನು ಬಿಟ್ಟರೆ ಇಡೀ ಜೀವಮಾನದಲ್ಲಿ ಕಾಲು ಗಳು ಮೇಲೆ ತಲೆ ಕೆಳಗೆ (ಆಕಸ್ಮಾತ್ ಆ ರೀತಿಯಾಗುವಂತೆ ಬಿದ್ದ ಹೊರತು) ಆಗುವ ಪ್ರಸಂಗವಿಲ್ಲ. ಹೀಗೆ ಆದಹೊರತು, ಒಂದರಮೇಲೊಂದು ಬಿದ್ದು ಕೊಂಡು ಒತ್ತೊತ್ತಾಗಿ (congested) ಇಕ್ಕಟ್ಟಾಗಿರುವ ಕರುಳಿನ ಸುರುಳಿ ಗಳು ಸಡಿಲಿ ವಿರಳವಾಗುವುದಿಲ್ಲ. ಹೀಗಾದ ಹೊರತು ಈ ಫಲವಾಗುವುದಿಲ್ಲ. ಕೂತು ಅಥವಾ ನಿಂತು ಉಡ್ಡಿಯಾನ ನೌಲಿಗಳನ್ನು ಮಾಡಿದರೂ ಈ ಪ್ರಯೋ

ವಾಗುವುದಿಲ್ಲ. ಶೀರ್ಷಾಸನವಲ್ಲಾದರೂ ಕಾಲುಗಳನ್ನು ಮಡಿಸಿ ಸಡಿಲಿಸಿ
ಯುಬಸ್ತಿ'ಯನ್ನು ಮಾಡಬೇಕು.

ಶೌಚಸಾಧನವು ಕೇವಲ ಮಲಶುದ್ಧಿ ಸಂಬಂಧವಾದುದೆಂದು ಅತಿ
ಮಾನ್ಯವಾಗಿ ಕಂಡರೂ ಅದರ ಮಹತ್ವವನ್ನು ಅನುಭವಿಸಿದ (ರೋಗಿ
ಬ್ಬನೇ) ಯೋಗಿಯೊಬ್ಬನೇ ಬಲ್ಲ. ಮಿಕ್ಕವರು ಇಷ್ಟು ವರ್ಣಿಸಿರುವ
ರ ಮಹತ್ವವನ್ನು ಕೇಳಿ ನಗಬಹುದು. ವೇದಾಂತಶಾಸ್ತ್ರದಲ್ಲಿ ಗುದಸ್ಥಾನಕ್ಕೆ
ತ್ಯುವೇ ಅಧಿದೇವತೆಯೆಂದು ಹೇಳಿರುವುದನ್ನೂ ಅಲ್ಲಿರುವ ಮೂಲಾಧಾರ
ಕ್ರಕ್ಕೆ ಆದಿದೇವನಾದ ಗಣನಾಥನೇ ಅಧಿದೇವನೆಂದು ಹೇಳಿರುವುದನ್ನೂ
ಕ್ಕೆ ತಂದರೆ ಅಂಥ ಲಘುಭಾವದ ಮನುಷ್ಯರೂ ಆಲೋಚಿಸಬೇಕಾದೀತು.
ಪವಾಸದಿಂದಲೂ ರಾತ್ರಿ ಮಲಗುವಾಗ ನೀರನ್ನು ಕುಡಿಯುವುದರಿಂದಲೂ
ಲಶುದ್ಧಿ(ಶೌಚ)ಯಾಗುತ್ತದೆ. ಎಲ್ಲಕ್ಕಿಂತಲೂ ಹೆಚ್ಚಾಗಿ ಕಾಲಕ್ಕೆ ಸರಿ
ಾಗಿ ಭೋಜನಮಾಡುವಂತೆ ಕಾಲಕ್ಕೆ ಸರಿಯಾಗಿ ಎರಡು ಹೊತ್ತೂ ತಪ್ಪದೇ
ಚವನ್ನು ಆತುರವಿಲ್ಲದೆ ಸಾವಕಾಶವಾಗಿ ಆಚರಿಸಲೇಬೇಕು. ಯೋಗಿಯ
ಲವು ಅಲ್ಪವಾಗಿಯೂ (ಹೆಚ್ಚು) ದುರ್ಗಂಧವಿಲ್ಲದೆಯೂ ಇರಬೇಕು. ಹೆಚ್ಚು
ನವೂ ದ್ರವವೂ ಅಲ್ಲದಿರಬೇಕು.

ದೇಹದ ಹೊರಗಡೆ ಸ್ನಾನಾದಿಗಳಿಂದಲೂ ಶುಭ್ರ ವಸ್ತ್ರಗಳಿಂದಲೂ
ಚಿಯಾಗಿರಬೇಕು. ಅಶುಚಿಯಾಗಿರುವ (ಶ್ವಪಚ) ವೃತ್ತಿಯು ಸೋಮಾರಿ
, ಆಲಸ್ಯಗಳ ಲಕ್ಷಣವೇ ಹೊರತು ಯೋಗದ ಲಕ್ಷಣವಲ್ಲ. ಅಖಂಡ
ಮಾಧಿಯಲ್ಲಿಯೋ ಸಹಜ ಸಮಾಧಿಯಲ್ಲಿಯೋ ದೇಹಾದಿಗಳ ಎಚ್ಚರವೇ
ದ ಧೂಳಿಧೂಸರ ಗಾತ್ರನಾದ ಮಹಾ ಅವಧೂತನ ಬಾಹ್ಯವೃತ್ತಿಯು
ಕ್ಕವರಿಗೆ ಅನುಕರಣೀಯವಲ್ಲ. ಶುಚಿತ್ವವೇ ದೇವತ್ವವಾದ್ದರಿಂದ ಯೋಗಿಯು
ಹೊರಗೆಲ್ಲಾ ಶುಚಿಭೂತನಾಗಿರಬೇಕು. ಶುಚಿತ್ವದ ಭಾವನೆಯು ಬೆಳೆ
ಷ್ಟೂ ಅಶುಚಿಲೇಶದ ಸೋಂಕೂ ಸಹಿಸುವುದಿಲ್ಲ. ಇದೇ ನಿಜವಾದ ಮಡಿ:
ೇ ಶೌಚ. ಭಗವಂತನು **"ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ
ವಿದ್ಯತೇ ।"** "ಜ್ಞಾನಕ್ಕೆ ಸಮನಾದ ಪವಿತ್ರ ವಸ್ತುವು ಲೋಕದಲ್ಲಿಯೇ
" ಎಂದು ಹೇಳಿದ್ದಾನೆ. ಆದ್ದರಿಂದ ಜ್ಞಾನಸಂಪನ್ನತೆಯೇ ನಿಜವಾದ
ಚ. ಜ್ಞಾನಿಯ ದೃಷ್ಟಿ ಬಿದ್ದುದೆಲ್ಲಾ ಪವಿತ್ರ: ಅವನು ಮುಟ್ಟಿದ್ದೆಲ್ಲಾ

ಪವಿತ್ರ. ಜಲಪ್ರೂತಕ್ಕಿಂತಲೂ ಮಂತ್ರಪೂತವೂ, ಅದಕ್ಕಿಂತಲೂ ಜ್ಞಾ
ಪೂತವೂ ಶ್ರೇಷ್ಠವಾದವು.

**ಸಂತೋಷ :—**

ಎರಡನೆಯ ನಿಯಮವೇ ಸಂತೋಷ. ಸಂತೋಷವೆಂದರೆ ಆನಂ
ಆಹ್ಲಾದ. ಸಂತೋಷವೆಂದರೆ ಸಂತೃಪ್ತಿಯೆಂಬ ಅರ್ಥವೂ ಆಗುವುದು. ಗೀ
ಯಲ್ಲಿ "**ಸಂತುಷ್ಟೋ ಯೇನಕೇನಚಿತ್**" ಎಂದೂ, "**ಯದೃಚ**
**ಲಾಭ ಸಂತುಷ್ಟಃ**" ಎಂದೂ ಹೇಳಿರುವಂತೆ "ಎಷ್ಟಾದರಷ್ಟರಿಂದಲೇ ತಾನ
ಗಿಯೇ ದೊರಕಿದ್ದರಿಂದಲೇ" ಯೋಗಿಯು ಸಂತೋಷಪಡಬೇಕು ಅಥ
ತೃಪ್ತನಾಗಬೇಕು. ಇದು ಬಹಳ ದೊಡ್ಡ ಗುಣ. ಯೋಗಿಯಾಗಲೀ ಸಂಸಾ
ಯಾಗಲೀ ಈ ಗುಣವಿರತಕ್ಕವನೇ ಸುಖಿ.

ಸಂತೋಷವೇ ಈಶ್ವರ ಸ್ವರೂಪ; ಸಂತೋಷವೇ ನಿಜವಾದ ನಮ
ಸ್ವರೂಪ. ಸಂತೋಷವೇ ಶುಚಿತ್ವ, ಮಡಿ. ಸಂಕಟವೇ ಮೈಲಿಗೆ, ದುಃಖ
ಸೂತಕ. ವ್ಯಾವಹಾರಿಕ ಜಗತ್ತಿನಲ್ಲಿ ಎಂಥಾ ಧೈರ್ಯಶಾಲಿಗಳನ್ನೂ ಧೃತಿಗೆ
ಸುವ ದುಃಖಪ್ರಸಂಗವೊದಗಿದರೂ ಯೋಗಿಯು ಸಂತೋಷಚಿತ್ತನಾಗಿಯೇ ಇ
ಬೇಕು. ರೂಪವತಿಯೂ ಶೀಲವತಿಯೂ ಆದ ಪತ್ನಿಯ ವಿಯೋಗವಾದರ
ವಿದ್ವಾಂಸನೂ ವಿಧೇಯನೂ ಆದ ಪುತ್ರನ ವಿಯೋಗವಾದರೂ, ಹೊಲ ಮ
ಗಳು ಅಪಹಾರವಾದರೂ, ಅಪಮಾನವಾದರೂ, ರೋಗದಾರಿದ್ರ್ಯಾದಿಗ
ಬಾಧೆಯಿದ್ದರೂ ಯೋಗಿಯು ಕುಂದಿಲ್ಲದ ಸಂತೋಷದಿಂದಲೇ ಇರಬೇಕ
ಹೀಗೆ ನಿತ್ಯನಿರಂತರವಾಗಿ ಸಂತೋಷವೃತ್ತಿಯನ್ನೇ ಸಾಧಿಸುವುದಕ್ಕೆ ಬಹ
ಹೆಚ್ಚಿನ ವಿವೇಕವೂ ಶಾಂತಿಯೂ ಸತ್ತ್ವಸಂಪತ್ತೂ ಬೇಕು.

ಸಂತೋಷವೂ ಸಂಕಟವೃತ್ತಿಯಂತೆಯೇ ಸಾಂಕ್ರಾಮಿಕವು. ಸಂತೋ
ದಿಂದಿರುವವನನ್ನು ನೋಡಿದರೆ ಯಾರಿಗಾದರೂ ಸಂತೋಷವೇ ಆಗುತ್ತ
ಸಂತೋಷವು ಸವಿತೃದೇವನಂತೆ ಮನಃಕಮಲವನ್ನು ಅರಳಿಸುತ್ತದೆ. ಮನಸ
ಅರಳಿದರೆ ಮುಖವೂ ಅರಳುತ್ತದೆ; ಮುಖವು ಚೆನ್ನಾಗಿ ಅರಳಿದರೆ ಮು
ದಲ್ಲಿ ನಗುವೂ ಅರಳುತ್ತದೆ. ದುಃಖಿತ ಮನಸ್ಸಿನವನು ಎಂದೂ ನಗಲಾ

ತನ ಸುಖವು ಮುದುಡಿ ಮೊಗ್ಗಾಗುತ್ತದೆ. ಆ ಮುಖವನ್ನು ನೋಡಿದವ ಲ್ಲಾ ದುಃಖಿತರೇ ಆಗುತ್ತಾರೆ. ಆದ್ದರಿಂದ ದುಃಖಿತನಾದವನು ತನ್ನ ಸಂತೋಷರೂಪ ಪ್ಲೇಗನ್ನು ಜನರಲ್ಲಿ ಪ್ರಸಾರ ಮಾಡದಿದ್ದರೆ ಪರನೋಪ ರ. ಯೋಗಿಯು ಇದನ್ನು ತಿಳಿದು ತನ್ನ ಹಿತಕ್ಕಾಗಿಯೂ ಲೋಕಹಿತ ಗಿಯೂ ಯಾವಾಗಲೂ ಸಂತೋಷಿಯಾಗಿರಬೇಕು.

ಆರೋಗ್ಯವಾಗಿರಬೇಕೆಂದು ಬಯಸತಕ್ಕವನು ಅನಾರೋಗ್ಯದ ವಿಚಾರ ನ್ನೂ ತಿಳಿಯುವುದು ಅಗತ್ಯವಾದಂತೆ ಯಾವಾಗಲೂ ನಗಬೇಕೆನ್ನುವವನು ುವಿನ ಗುಟ್ಟನ್ನು ತಿಳಿದಿರಬೇಕು. ಕೆಲವು ಜನಾಂಗಗಳಲ್ಲಿ ಸತ್ತವರಿಗಾಗಿ ವು ಅಳುವುದು ಸಾಲದೆಂದು ಕೂಲಿಯವರಿಂದ ಹಾಡಿಹಾಡಿಸಿ ಅಳಿಸುತ್ತಾರೆ. ವು ಪಾಶ್ಚಾತ್ಯ ನಾಗರಿಕ ದೇಶಗಳಲ್ಲಿಯೂ ಈ ಪದ್ಧತಿಯಿದೆಯೆನ್ನುತ್ತಾರೆ. ಕ್ಕಿಂತಲೂ ಅವಿವೇಕವು ಲೋಕದಲ್ಲಿಯೇ ಇಲ್ಲವೆನ್ನಬಹುದು. ಅಳುವುದ ಯೂ ಸುಳ್ಳು ಅಳು, ಕಳ್ಳ ಅಳು, ಠಕ್ಕು ಅಳು ಮೊದಲಾದ ಬಗೆಬಗೆಯ ಗಳಿವೆ.

ಮೃದುಹೃದಯವುಳ್ಳ ವಿವೇಕಿಯಾದ ವೇದಾಂತಿಯು ಸಹಾನುಭೂತಿ ಗಿಯೂ ಲೋಕೋಪಚಾರಕ್ಕಾಗಿಯೂ ಅನುಕಂಪದಿಂದಲೂ ಅಳುವು ಟು. ಈ ಅಳುವಿನಲ್ಲಿ ಪರಾರ್ಥದೃಷ್ಟಿಯೂ ಔದಾರ್ಯವೂ ಇರುವುದ ನ ಮಾಧುರ್ಯವೂ ಇದೆ. ಈ ಧರ್ಮಾರ್ಥವಾದ ಅಳುವಿನ ಹೊಟ್ಟೆ ನ್ನು ಬಗೆದು ನೋಡಿದರೆ ಒಳಗೆ ಸುಖವೇ ಅಡಗಿರುವುದರಿಂದ ಇದು ಸ್ಸು ಅಳು.

ಎಂಥಾ ದುಃಖಪ್ರಸಂಗದಲ್ಲಿಯೂ ಎದೆಗೆಡದೆ ಧೈರ್ಯದಿಂದಲೂ ತೋಷದಿಂದಲೂ ಇರಬೇಕೆಂದು ಉಜ್ವಲವಾಗಿ ಪರೋಪದೇಶ ಮಾಡುವ ಕ್ಕ ವೇದಾಂತಿಗಳು, ಸ್ವಂತಕ್ಕೆ ಕಷ್ಟನಷ್ಟಗಳು ಒದಗಿದಾಗ ಹೊರಗಡೆ ತವಕ್ಕಾಗಿ ಗಂಭೀರವಾಗಿರಲು ಪ್ರಯತ್ನಪಟ್ಟರೂ ಒಳಗೊಳಗೇ ಶೋಕ ೇಹಗಳು ಕರುಳನ್ನು ಹಿಂಡಿ ಕಣ್ಣೀರಿಡಿಸುತ್ತಿರುವುದು ಕಳ್ಳ ಅಳು.

ಇನ್ನು ಗಂಡನಲ್ಲಿ ಸ್ವಲ್ಪವೂ ಪ್ರೇಮವಿಲ್ಲದ ಚಂಡಿ ಹೆಂಡತಿಯು ಗಂಡ ಗ ಲೇಶವೂ ಒಳಗಿಲ್ಲದ ಪತಿಪ್ರೇಮವನ್ನು ಪ್ರದರ್ಶನಮಾಡಿ ಜನರನ್ನು

ಮೆಚ್ಚಿಸುವುದಕ್ಕಾಗಿ ಅಳುವುದುಂಟು. ಈ ನಂತಕವಾದ ಅಳುವಿನ ಹೊ
ಯನ್ನರಿದು ನೋಡಿದರೆ ಒಳಗೇ ಕಣ್ಣುಮಿಟಕಿಸುವ ತುಂಟ ನಗುವಿರು
ರಿಂದ ಇದು ಠಕ್ಕು ಅಳು. ಇದರಲ್ಲಿರುವುದೂ ನಿಜವಾಗಿ ಸಂತೋಷವೇ

ತನ್ನೊಳಗೂ ದುಃಖವಿಲ್ಲದೆಯೇ ಹೊರಗಿನವರಿಗೂ ದುಃಖವೆನ್ನಿ
ದುಃಖದ ಸೋಗಿನಿಂದ ಅಳುವನ್ನು ಅನುಕರಣ ಮಾಡುವ (ಸತ್ತಾಗ ಕ
ಕೊಟ್ಟು ಅಳಿಸುವ ಜನಾಂಗದಲ್ಲಿ) ಕೂಲಿಯವರ ಅಳು ಮರುಳಾಟದ ಅ
ಇವರಲ್ಲಿಯೂ ಕೂಲಿಗಾಗಿ ಸ್ಪರ್ಧೆಯಿಂದ ರಾಗರಾಗವಾಗಿ ಅಳುವವರಿ
ಅಳಿಸುವವರಿಗೂ ಸಂತೋಷವೇ ಇದೆ.

ತಮ್ಮ ಇಷ್ಟಸಾಧನೆಗಾಗಿ ಹಠದಿಂದ ಅಳುವ ಮಕ್ಕಳ ಅಳುವಿನಲ್ಲಿ
ಇಷ್ಟಸಂಪಾದನೆಯ ಮಧುರವಾದ ಉದ್ದೇಶವೇ ಇರುವುದರಿಂದ ಗೂಢವ
ಸಂತೋಷವೇ ಇದೆ.

ಇನ್ನು ಕಣ್ಣೀರು ಹರಿಯುವುದಕ್ಕಾಗಿ ಕಣ್ಣಿಗೆ ಯಾವುದಾದ
(ಕರ್ಪೂರ, ಗ್ಲಿಸರೀನ್ ಮೊದಲಾದ) ದ್ರವ್ಯವನ್ನು ಹಚ್ಚಿಕೊಂಡು ನಾಟ
(ಅಥವಾ ಸಿನಿಮಾದ) ಪಾತ್ರದ ಶೋಕಭಾವಗಳಲ್ಲಿ ತಲ್ಲೀನನಾಗಿ ಶೋಕವ
ಪ್ರದರ್ಶನ ಮಾಡುವಾಗ ತನ್ನ ಅಭಿನಯವು ಯಶಸ್ವಿಯಾಗಿ ನಡೆಯು
ಯೆಂಬ ಸಂತೋಷವೂ, ಪ್ರೇಕ್ಷಕರನ್ನೂ ಶೋಕಸಾಗರದಲ್ಲಿಯೇ ಮುಳು
ಎಲ್ಲರೂ ಕಣ್ಣೀರಿಡುವಂತೆ ಮಾಡಿದ್ದೇನೆಂಬ ಸಂತೋಷವೂ, ಸಂಸ್ಥೆಯ ಯ
ಮಾನನು ಮೆಚ್ಚುತ್ತಿದ್ದಾನೆಂಬ ಸಂತೋಷವೂ ಪಾತ್ರಧಾರಿಗೆ ತಪ್ಪದೇ
ವುದರಿಂದ ಇದು ಸೋಗಿನ ಅಳು.

ಪಾತ್ರಗಳ ಶೋಕರಸದ ಅಭಿನಯವನ್ನು ನೋಡುತ್ತಾ ತಲ್ಲೀನರ
ತಾವೂ ಕಣ್ಣೀರಿಡುತ್ತಿರುವ ಪ್ರೇಕ್ಷಕರಿಗಾದರೂ ವಿಲಕ್ಷಣವಾದ ಸಂತೋಷ
ಇರುತ್ತದೆ. ಏಕೆಂದರೆ ಪುನಃ ಪುನಃ ಅಂಥಾ ಪ್ರಸಂಗವನ್ನೇ ನೋಡಿ ಅ
ಶೋಕವನ್ನು ಸವಿದು ಕಣ್ಣೀರಿಡುವುದಕ್ಕೆ ಇಷ್ಟಪಡುತ್ತಾರಾದ್ದರಿಂದ ಅ
ಅವರಿಗೆ ಮೆಚ್ಚಾಗಿಯೇ ಮಧುರವಾಗಿಯೇ ಸಂತೋಷವಾಗಿಯೇ ಇದೆ. ತಾ
ಕಣ್ಣೀರಿಡುತ್ತಿರುವುದನ್ನು ಸುತ್ತಲೂ ಇದ್ದವರು ಕಂಡು ನೋಡಿ ತನ್ನ ರಸ
ಜ್ಞತೆಯ ಯೋಗ್ಯತೆಯನ್ನು ಮೆಚ್ಚುತ್ತಿದ್ದಾರೆಂದು ಸೂಕ್ಷ್ಮವಾಗಿ ತಿಳಿದಿರು
ಅಳುತ್ತಿರುವ ಪ್ರೇಕ್ಷಕನಿಗೆ ಮಹಾಸಂತೋಷ. ಇದು ನಾಟಕದ ಅಳು.

ಕುಮಾರವ್ಯಾಸನ ಭಾರತದಲ್ಲಿ ದ್ರೌಪದೀವಸ್ತ್ರಾಪಹರಣದಷ್ಟು ಕರುಣಾ ಜನಕವೂ ದುಃಖಕಾರಕವೂ ಆದ ಪ್ರಸಂಗವು ಇನ್ನೊಂದಿರಲಿಕ್ಕಿಲ್ಲ. ಭಾರತ ವಾಚನ ಕಾಲದಲ್ಲಿ ಚೆನ್ನಾಗಿ ಅರ್ಥಮಾಡಿಕೊಂಡು ಆ ಪ್ರಸಂಗದ ಭಾವರಸ ಗಳನ್ನು ಅನುಭವಮಾಡಿದರೆ ಪ್ರಾಯಶಃ ಅಳದಿರುವವನು ಯಾವನೂ ಇರ ಲಿಕ್ಕಿಲ್ಲ. ಅಳುವು ದುಃಖದ ದ್ಯೋತಕ; ದುಃಖವು ಯಾರಿಗೂ ಬೇಡವಾದು ದೆಂಬುದು ಪ್ರಸಿದ್ಧ. ಆದರೂ ರಸಾಸ್ವಾದಕರೆಲ್ಲರೂ ಏಕೋ ಪುನಃ ಪುನಃ ಆ ದಾರುಣ ದುಃಖಾಪಮಾನಗಳ ಪ್ರಸಂಗವನ್ನೇ ಓದಲೂ ಕೇಳಲೂ ಇಷ್ಟ ಪಡುವರು. ಏಕೆಂದರೆ ಆ ತೋರಿಕೆಯ ದುಃಖದಲ್ಲಿಯೂ ಒಂದು ಸ್ವಾರಸ್ಯವೂ ಮಾಧುರ್ಯವೂ ಸಂತೋಷವೂ ಇರುವುದರಿಂದಲೇ. ರಸಿಕರಿಗೆ ಇಷ್ಟವಾಗಿದೆ. ಇದು ಕಾವ್ಯದ ಅಳು.

ಅಂತೂ ಅಳುವವರಿಗೆ ಅಳುವಿನಲ್ಲಿಯೇ ಸಮಾಧಾನವಿರುವುದರಿಂದಲೂ ಸಮಾಧಾನಕ್ಕಾಗಿಯೇ ಅಳುವುದರಿಂದಲೂ ಜೊತೆಗಳುವವರೂ ಹತ್ತು ಜನ ಇದ್ದರೆ ಅಳುವವರಿಗೆ ಮತ್ತಷ್ಟು ಸಂತೋಷವಾಪ್ಪರಿಂದಲೂ ಎಲ್ಲರಲ್ಲಿಯೂ, ಎಲ್ಲಾ ಸಮಯದಲ್ಲಿಯೂ ಗೂಢವಾಗಿರುವುದು ಸಂತೋಷವೊಂದೇ ಆಗಿದೆ. ಆದರೆ ಅದು ದುಃಖದ ವಿಪರ್ಯಸ್ತ ವೇಷವನ್ನು ಹಾಕಿಕೊಂಡು ತೋರಿಬಂದು ತನ್ನ ಅಳುವನಿಂದ ಜನರನ್ನು ಮರುಳುಗೊಳಿಸಬಲ್ಲದು.

ಆದ್ದರಿಂದ ಯೋಗಿಯು ಸಂತೋಷದ ಅಪಭ್ರಂಶರೂಪವಾದ ದುಃಖ ವನ್ನು ವಹಿಸದೇ ಅದರ ಮಂಗಳಕರವಾದ ನಿಜರೂಪವನ್ನೇ ಸೇವಿಸಬೇಕು.

ಮನುಷ್ಯನಂತೆ ಮನುಷ್ಯೇತರ ಪ್ರಾಣಿಗಳೂ ಅಳಬಲ್ಲವು. ಆದರೆ ಸಂತೋಷದಿಂದ ನಗಬಲ್ಲವನೂ ನಗಿಸಬಲ್ಲವನೂ ಮನುಷ್ಯನೊಬ್ಬನೇ. ಸಂತೋಷಭಾವದ ನಗುವು ಅರಳುಮಲ್ಲಿಗೆಯಂತೆ ಮುಖದ ಮೇಲೆ ನಲಿದಾಡು ವುದು ಮನುಷ್ಯನೊಬ್ಬನಿಗೇ. ಮನುಷ್ಯನಂತೆ ನಾಲ್ಕು ಮಾತುಗಳನ್ನಾಡಬಲ್ಲ ಗಿಳಿ ಮೊದಲಾದ ಪ್ರಾಣಿಗಳಿರಬಹುದು; ಅವನಂತೆ ಚಾತುರ್ಯವನ್ನೂ ಬುದ್ಧಿಲಕ್ಷಣವನ್ನೂ ಲೇಶವಾದರೂ ತೋರಿಸಬಲ್ಲ ಕಪಿ, ಆನೆ ಮೊದಲಾದ ಪ್ರಾಣಿಗಳಿರಬಹುದು. ಆದರೆ ಮನುಷ್ಯನಂತೆ ನಗಬಲ್ಲ ಪ್ರಾಣಿಯು ಯಾವುದೂ ಇಲ್ಲ. ನಗುವು ಮಾನವಲೋಕಕ್ಕೇ ಮೀಸಲು. ಪ್ರಾಣಿಕೋಟಿಯಲ್ಲಿ ಮನುಷ್ಯ

ನೊಬ್ಬನೇ ತನ್ನ ಆನಂದಸ್ವರೂಪವನ್ನು ಅನುಭವಿಸುವ ಶಕ್ತಿಯುಳ್ಳವನೆಂಬು
ದನ್ನು ತೋರಿಸುವುದಕ್ಕಾಗಿಯೇ ಪರಮೇಶ್ವರನು ಕರುಣೆಯಿಂದ ಅವನ ಮುಖ
ದಲ್ಲಿ ಅರಳಿಸಿರುವ ಪ್ರಸಾದ ಸೊಂದಾವರಿಯೇ ಈ ನಗು. ನಗುವಿನಿಂದಲೇ
(ಅಂದರೆ ಸಂತೋಷದಿಂದಲೇ) ಮನುಷ್ಯನ ಮನುಷ್ಯತ್ವ. ನಗಲಾರದವನು
ಕೇವಲ ಪಶು. ಸಕಲ ದೇಶಕಾಲಗಳಲ್ಲಿಯೂ ಮುಖಕಮಲದಲ್ಲಿ ಮೃದುಮಧುರ
ವಾಗಿ ಮಿನುಗುತ್ತಿರುವ ಮಂದಹಾಸದಿಂದಲೇ ಮಾನವನ ಜೀವತ್ವ.

ಮಹಾಭಾರತ ಕಾವ್ಯದಲ್ಲಿ ಶ್ರೀಕೃಷ್ಣ ಪರಮಾತ್ಮನು ಪ್ರವೇಶಮಾಡು
ವಾಗಲೆಲ್ಲಾ ಮಂದಹಾಸ ಮನೋಹರನಾಗಿಯೇ ಪ್ರವೇಶಮಾಡುತ್ತಾನೆ.
ಕಂಸ–ಶಿಶುಪಾಲಾದಿ ರಾಕ್ಷಸರ ಸಂಹಾರಸಮಯದಲ್ಲಾಗಲೀ, ಭೀಷ್ಮಾದಿ
ಭಕ್ತಾಗ್ರಣಿಗಳ ಮರಣಕಾಲದಲ್ಲಾಗಲೀ ಶ್ರೀಕೃಷ್ಣ ಪರಮಾತ್ಮನ ರೋಷ
ಭೀಷಣವಾದ ಮುಖಮುದ್ರೆಯನ್ನೂ ಶೋಕವ್ಯಾಕುಲವಾದ ಮುಖಭಾವ
ವನ್ನೂ ನಾವು ಕಲ್ಪಿಸಿಕೊಳ್ಳುವುದು ಕಷ್ಟವೆನಿಸುತ್ತದೆ. ಭಯ–ಶೋಕ–
ಭೀಭತ್ಸಾದಿ ಸರ್ವಸಂದರ್ಭಗಳಲ್ಲಿಯೂ ಶ್ರೀಕೃಷ್ಣನ ನಗೆಮೊಗವೇ ನಮ್ಮ
ಕಣ್ಣೆದುರು ನಿಲ್ಲುತ್ತದೆ. ಆ ಎಳೆನಗುವಿನಲ್ಲಿ ದ್ವಂದ್ವಾತ್ಮಕ ವಿಶ್ವವೆಲ್ಲಾ ತನ್ನ
ಮಾಯಾಮಾತ್ರವೆಂದೂ ಪುರುಷೋತ್ತಮನಾದ ತಾನು ಲೀಲಾಮಯನೆಂದೂ
ಲೋಕಕ್ಕೇ ಬೋಧಿಸುವ ದಿವ್ಯಭಾವವಡಗಿದೆ.

ಜ್ಞಾನಿಯ ಹಾಗೂ ಯೋಗಿಯ ಅಕಾರಣವಾದ ಮಂದಹಾಸದಲ್ಲಿ
ಮಂಗಳಭಾವವೂ ಅಮೃತರಸವೂ ಸಹಜಾನಂದವೂ ಅಭಯದಾನವೂ
ಪ್ರಕಾಶವಾಗುತ್ತವೆ.

ಕೋಪಿಯೂ ದುಃಖಿಯೂ ಎಂದೂ ನಗಲಾರನು. ನಗಬಲ್ಲವನಿ
ಗಿಂತಲೂ ನಕ್ಕುನಗಿಸಬಲ್ಲವನು ಹೆಚ್ಚು ಶಕ್ತನು. ತಾನು ಹೆಚ್ಚು ನಗದೇ
ಎಳೆನಗೆಯಿಂದ ಗಂಭೀರನಾಗಿದ್ದು, ದುಃಖಿತರನ್ನಾದರೂ, ದುರಭಿಮಾನಿಗಳ
ನ್ನಾದರೂ, ಕೋಪಿಷ್ಠರನ್ನಾದರೂ, ಕ್ರೂರಿಗಳನ್ನಾದರೂ, ಮಹಾವಿದ್ವಾಂಸ
ರನ್ನಾದರೂ, ಎಂಥಾ ಕಾಲದಲ್ಲಿಯೂ ನಗಿಸಬಲ್ಲವನು ಮಹಾಶಕ್ತನು. ಮಹಾ
ಸಂಯಮಿಯೂ, ಮಹಾ ಸಂತೋಷಿಯೂ ಇರುವನೆನ್ನಬಹುದು. ತಾನೂ
ಸಂತೋಷವಾಗಿರುವುದಲ್ಲದೇ ತನ್ನ ಸಂತೋಷದ ವಿಲಕ್ಷಣ ಶಕ್ತಿಯಿಂದಲೂ,
ಸಿತ್ಯೋಲ್ಲಸಿತ ವಿನೋದ ವೃತ್ತಿಯಿಂದಲೂ ದುಷ್ಟ ವೃತ್ತಿಗಳ ಕಗ್ಗಂಟೆನ್ನೆಲ್ಲಾ

ಡಿದೊಗೆದು, ಲೋಕಕ್ಕೇ ಸಂತೋಷವನ್ನು ಸಮೃದ್ಧಿಯಾಗಿ ನೀಡಬಲ್ಲವನೇ ಯೋಗಿಯು. ಇಂಥಾ ನಿತ್ಯಸಂತೋಷಿಯ ಹೃದಯ ಸಂಸ್ಕಾರವು ಎಷ್ಟು ಉದಾತ್ತವೂ ಪವಿತ್ರವೂ ದಿವ್ಯವೂ ಇರುವುದೋ ಅವನ ಸಂತೋಷಪ್ರಸಾರಕ ವಿನೋದವೃತ್ತಿಯೂ ಅಷ್ಟು ಉನ್ನತವೂ ಸುಸಂಸ್ಕೃತವೂ ಭವ್ಯವೂ ಇರುವುದು.

ಕಡುಗಂಭೀರ ಸ್ವಭಾವವುಳ್ಳ ಮಹಾತ್ಮರಲ್ಲಿಯೂ ಮೃದು ವಿನೋದದ ಸಂತೋಷ ಸಮಯವು ಇದ್ದೇ ಇರುತ್ತದೆ. ಅದು ಅವರಿಗೂ ಆಶ್ರಿತರಿಗೂ ರಸ-ಸಮಯವು—ಸರಸ-ಸಮಯವು.

ಸಂತೋಷವೃತ್ತಿಯು ಸೂಕ್ಷ್ಮವೂ ಕಾರಣವೂ ಆಗಿದೆ. ಅದರ ಸ್ಥೂಲ ಪರಿಣಾಮವೇ ಮುಖದ ಪ್ರಸನ್ನತೆಯೂ ಮಂದಹಾಸವೂ ಆಗಿದೆ. ಸೂಕ್ಷ್ಮವು ಕೈಗೆ ನಿಲುಕದಿದ್ದಾಗ ಸುಲಭವಾದ ಸ್ಥೂಲವನ್ನು ಹಿಡಿದು ಸೂಕ್ಷ್ಮವನ್ನು ವಶ ಪಡಿಸಿಕೊಳ್ಳಬಹುದು. ಹೀಗೆ ಯಾವಾಗಲೂ ಮುಖದ ಪ್ರಸನ್ನತಾಮುದ್ರೆ ಯನ್ನು ಭದ್ರವಾಗಿ ಸಾಧಿಸುವುದರಿಂದ ಯೋಗಿಯ ಮನೋವೃತ್ತಿಯೂ ಸಂತೋಷಮುದ್ರಿತವಾಗಿರುತ್ತದೆ.

**ತಪಸ್ಸು :—**

ನಿಯಮಗಳಲ್ಲಿ ತಪಸ್ಸೇ ಮೂರನೆಯದು. ತಪಸ್ಸೆಂದರೆ ದೇಹೇಂದ್ರಿಯ ಮನಸ್ಸುಗಳು ಭೋಗತ್ಯಾಗದಿಂದಲೂ ಮೋಹಾದಿಗಳ ತ್ಯಾಗದಿಂದಲೂ ಸಂಯಮಾಗ್ನಿಯಲ್ಲಿ ಸುಟ್ಟು ಕಾವೇರುವುದು. ಕೃಚ್ಛ್ರ ಚಾಂದ್ರಾಯಣಾದಿ ವ್ರತಗಳಿಂದ ಶಾಸ್ತ್ರೀಯವಾಗಿ ದೇಹೇಂದ್ರಿಯಗಳ ದಂಡನೆಯನ್ನೂ, ಲೋಕ ಮೋಹಗಳ ಖಂಡನೆಯನ್ನೂ ಮಾಡುವುದು ತಪಸ್ಸು. ಕರ್ಮಯೋಗದಲ್ಲಿ ಇದರ ವಿಚಾರವು ವಿಶೇಷವಾಗಿ ಬಂದಿದೆ.

**" ಕಾಯೇಂದ್ರಿಯ ಸಿದ್ಧಿರಶುದ್ಧಿ ಕ್ಷಯಾತ್ತಪಸಃ "** ಎಂಬ ಸೂತ್ರ ದಂತೆ ತಪಸ್ಸಿನಿಂದ ಪಾಪಕ್ಷಯವಾಗಿ ಅಣಿಮಾದಿ ಸಿದ್ಧಿಗಳೂ ಬರುತ್ತವೆ.

**ಸ್ವಾಧ್ಯಾಯ :—**

ಧರ್ಮಗ್ರಂಥಗಳ ಪಾರಾಯಣವೂ ವೇದಾಂತಶಾಸ್ತ್ರಾವಲೋಕನವೂ ವೇದಾಂತ ಶ್ರವಣ-ಮನನಗಳೂ ಮಂತ್ರಜಪವೂ ಸ್ವಾಧ್ಯಾಯಗಳು.

**" ಸ್ವಾಧ್ಯಾಯಾದಿಷ್ಟದೇವತಾ ಸಂಪ್ರಯೋಗಃ "** ಎಂಬ ಸೂತ್ರ ದಂತೆ ಮಂತ್ರಜಪಸಿದ್ಧಿಯಿಂದ ಇಷ್ಟದೇವತಾದರ್ಶನವಾಗುವುದು.

**ಈಶ್ವರಪ್ರಣಿಧಾನ :—**

ಈಶ್ವರಪ್ರಣಿಧಾನವೆಂದರೆ ಈಶ್ವರನಲ್ಲಿ (ಅಥವಾ ಗುರುವಿನಲ್ಲಿ) ಅನನ್ಯ ಶರಣಾಗತಿಯು. ಸರ್ವಭಾವನೆಗಳಿಂದಲೂ ಈಶ್ವರನನ್ನೇ ಮೊರೆಹೊಕ್ಕು ನಿತ್ಯನೈಮಿತ್ತಿಕ ಲೌಕಿಕ ವೈದಿಕ ಸರ್ವಕರ್ಮಗಳನ್ನೂ ಪರಮಾತ್ಮನಿಗೇ ಅರ್ಪಣಮಾಡಬೇಕು.

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥**

" ಯಾವುದನ್ನು ಮಾಡಿದರೂ ಯಾವುದನ್ನು ತಿಂದರೂ ಯಾವುದನ್ನು ಹೋಮ ಮಾಡಿದರೂ ಯಾವುದನ್ನು ಕೊಟ್ಟರೂ ಯಾವ ತಪಸ್ಸುಮಾಡಿದರೂ ಹೇ ಅರ್ಜುನ! ಅದನ್ನು ನನಗೇ ಅರ್ಪಿಸು " ಎಂದು ಭಗವಂತನು ಹೇಳಿರು ವಂತೆ ಮಾಡುವುದೇ ಈಶ್ವರಪ್ರಣಿಧಾನ.

**" ಸಮಾಧಿಸಿದ್ಧಿರೀಶ್ವರಪ್ರಣಿಧಾನಾತ್ "** ಎಂಬ ಯೋಗಸೂತ್ರ ದಂತೆ ಈಶ್ವರಪ್ರಣಿದಾನದಿಂದ ಸಮಾಧಿಸಿದ್ಧಿಯಾಗುವುದು.

## ಆಸನ

ಪತಂಜಲಿಗಳು ಯಮ ನಿಯಮಗಳನ್ನು ಹೇಳಿದ ನಂತರ, ಸೂಕ್ಷ್ಮವಾದ ಚಿತ್ತವೃತ್ತಿಗಳ ನಿರೋಧವನ್ನು ಹೇಳುವುದಕ್ಕೂ ಮೊದಲು, ಅತಿ ಸ್ಥೂಲವಾದ ಶರೀರೇಂದ್ರಿಯಗಳ ಸ್ಥೈರ್ಯಸಾಧನವನ್ನು ತಿಳಿಸುವುದಕ್ಕಾಗಿ, **" ಸ್ಥಿರ ಸುಖಮಾಸನಂ "** ಎಂಬ ಯೋಗಸೂತ್ರದಲ್ಲಿ ಸ್ಥಿರವೂ ಸುಖವೂ ಆದ ದೇಹ ಸ್ಥಿತಿಯೇ ಆಸನವೆಂದು ಹೇಳಿದ್ದಾರೆ. ದೇಹದ ಸಮಭಾರವು ಎಲ್ಲ ಕಡೆಗೂ ಕುಳಿತಲ್ಲಿ ಬೀಳುವಂತೆಯೂ ಬಹುಕಾಲ ಕುಳಿತರೂ ಯಾವ ಕಡೆಯೂ ನೋವಾಗದಂತೆಯೂ ಶರೀರದ ಪರಿವೆಯೇ ಇಲ್ಲದಂತೆ ಸುಖವಾಗಿರುವ ದಾಗಿಯೂ ಯಾವ ದೈಹಿಕಸ್ಥಿತಿಯಿದೆಯೋ ಅದೇ ಆಸನ.

ಆಸನವ ವಿಚಾರಕ್ಕೂ ಮೊದಲು ಯೋಗಾಭ್ಯಾಸ ಮಾಡುವ ಸ್ಥಳದ ಚಾರವನ್ನು ಮಾಡಬೇಕು. ಸ್ಥಳವು ನಿರ್ಜನವಾಗಿರಬೇಕು. ಅದು ಮನಸ್ಸಿಗೆ ಶಸ್ತವಾಗಿಯೂ ಆಹ್ಲಾದಕರವಾಗಿಯೂ ಪವಿತ್ರವಾಗಿಯೂ ದಿವ್ಯವಾಗಿಯೂ ರಬೇಕು. ಅದು ನದೀತೀರದ ದೇವಾಲಯವಾದರೆ ಉತ್ತಮ. ಅದು ಶಾಂತವಾಗಿರಬೇಕು. ಅರಣ್ಯವಾದರೂ ಸಾಧನಸ್ಥಳದಲ್ಲಿ ಹುಲಿ, ಸರ್ಪ, ಗ್ನಿ ಮೊದಲಾದವುಗಳ ಭಯವಿರಬಾರದು. ಸುತ್ತಲೂ ಹೂವಿನ ಗಿಡಗಳೂ, ಳ್ಳಿಗಳೂ ಇದ್ದು ಮನೋಹರವಾಗಿಯೂ ನಿರ್ಮಲವಾಗಿಯೂ ಇರಬೇಕು. ಳಿತುಕೊಳ್ಳುವ ಸ್ಥಳವು ಹೆಚ್ಚು ಎತ್ತರವೂ ಹೆಚ್ಚು ತಗ್ಗೂ ಇಲ್ಲದೆಯೂ, ಚ್ಚು ಉಷ್ಣವೂ ಹೆಚ್ಚು ಶೀತವೂ ಇಲ್ಲದೆಯೂ ಇರಬೇಕು.

ಸಾಧನಮಂದಿರವು ಸ್ವಂತ ಮನೆಯಲ್ಲಿಯೇ ಇರುವುದಾದರೆ ಅದು ಶಾಂತವಾಗಿಯೂ ನಿಶ್ಶಬ್ದವಾಗಿಯೂ ನಿರ್ಮಲವಾಗಿಯೂ ಪ್ರಶಾಂತ ಾಗಿಯೂ ಇರಬೇಕು. ಗೋಡೆಗಳ ಮೇಲೆ ಮಹಾಪುರುಷರ ಮತ್ತು ದೇವತಾ ಾಪಕಗಳ ಭಾವಚಿತ್ರಗಳನ್ನು ಹಾಕಿರಬೇಕು. ಅಲ್ಲಿ ಭಗವದ್ಗೀತಾ, ಅವಧೂತ ೀತಾ, ಯೋಗವಾಸಿಷ್ಠ, ಪಂಚದಶಿ, ವಿವೇಕಚೂಡಾಮಣಿ, ಅನುಭವಾಮೃತ, ೊದಲಾದ ಗ್ರಂಥಗಳನ್ನು ಇಟ್ಟಿರಬೇಕು. ಯೋಗಿಯು ತನ್ನ ಇಷ್ಟದೇವತಾ ಗ್ರಹವನ್ನೋ ಅಥವಾ ಭಾವಚಿತ್ರವನ್ನೋ ಪ್ರಧಾನ ಸ್ಥಳದಲ್ಲಿ ಇಟ್ಟಿರಬೇಕು. ಪ್ರತಃಕಾಲದಲ್ಲಿಯೂ ಸಾಯಂಕಾಲದಲ್ಲಿಯೂ ಧೂಪವನ್ನು ಹಾಕಬೇಕು. ್ನಾನಮಾಡದೇ ಒಳಗೆ ಪ್ರವೇಶಮಾಡಬಾರದು. ಬೇರೆಯ ಜನರನ್ನು ಒಳಗೆ ೇರಿಸಬಾರದು. ಒಳಗೆ ಮಲಗಬಾರದು. ನಿದ್ರೆ ಮಾಡಬಾರದು. ಧ್ಯಾನ ಂದಿರದಲ್ಲಿ ಪ್ರವೇಶಮಾಡಿದ ಮೇಲೆ ಯಾರೊಡನೆಯೂ ಮಾತಾಡಬಾರದು. ಪ್ರಪಂಚಿಕ ವಿಷಯವನ್ನಂತೂ ಅಲ್ಲಿ ಮಾತನಾಡಬೇಕೂಡದು. ಅಲ್ಲಿರುವ ಾವಚಿತ್ರಗಳನ್ನೂ ಗ್ರಂಥಗಳನ್ನೂ ಸುಗಂಧಪುಷ್ಪಗಳಿಂದ ಅಂದವಾಗಿ ಅಲಂ ರಿಸಬೇಕು. ಒಟ್ಟಿನಲ್ಲಿ ಧ್ಯಾನಮಂದಿರವನ್ನು ಹೊರಗಡೆಯಿಂದ ನೋಡಿದರೂ ಲ್ಲಿ ದೈವಿಕ ವಾತಾವರಣವೂ ಪವಿತ್ರತೆಯೂ ಶಾಂತಿಯೂ ಆನಂದವೂ ತುಂಬಿ ಳುಕುತ್ತಿರುವಂತೆ ತೋರಬೇಕು.

ಈ ಮಂದಿರದಲ್ಲಿ ಆಸನಕ್ಕೆ "ಚೈಲಾಜಿನ ಕುಶೋತ್ತರಂ" ಎಂಬಂತೆ ಕವಲ್ಲಿ ದರ್ಭೆಯ ಚಾಪೆಯನ್ನೂ, ಅದರ ಮೇಲೆ ಕೃಷ್ಣಾಜಿನವನ್ನೂ, ಅದರ

ಮೇಲೆ ವಸ್ತ್ರವನ್ನೂ ಹಾಕಿರಬೇಕು. ಇದರ ಮೇಲೆ ಉತ್ತರಾಭಿಮು ಅಥವಾ ಪೂರ್ವಾಭಿಮುಖವಾಗಿ ಕುಳಿತುಕೊಳ್ಳಬೇಕು. ಯೋಗಾ ಎಂಭತ್ತುನಾಲ್ಕು ವಿಧಗಳಿದ್ದರೂ ಧ್ಯಾನಾಭ್ಯಾಸಕ್ಕೆ ಪದ್ಮಾಸನ, ಸ್ವಸ್ತಿ ಸಿದ್ಧಾಸನಗಳು ಮುಖ್ಯವಾದವುಗಳು.

ಎಡಗಾಲಿನ ಹಿಮ್ಮಡಿಯನ್ನು ಗುದಸ್ಥಾನಕ್ಕೆ ಒತ್ತಿಟ್ಟು ಬ ಹಿಮ್ಮಡಿಯನ್ನು ಜನನೇಂದ್ರಿಯದ ಮೂಲಸ್ಥಾನಕ್ಕೆ ಹತ್ತಿರಬೇಕು ಪಾದದ ಹರಡಿನ ಮೇಲೆ ಬಲಪಾದದ ಹರಡನ್ನು ಕೂಡಿಸಬೇಕು. ಬ ತುದಿಯು ಎಡ ತೊಡೆ ಎಡ ಕೆಳಕಾಲುಗಳ ಮಧ್ಯದಲ್ಲಿ ಸೇರಬೇಕು ಪಾದವೂ ಹಾಗೆಯೇ ಬಲ ತೊಡೆ ಕಾಲುಗಳ ಮಧ್ಯದಲ್ಲಿ ಸೇರಬೇಕು. ಹುರಿಯನ್ನು ಬಾಗಿಸದ ಹಾಗೆ, ಎದೆ ಕುತ್ತಿಗೆ ತಲೆಗಳನ್ನು ಸರಳರೇ ನಿಲ್ಲಿಸಿ ನೆಟ್ಟಗೆ ಕುಳಿತುಕೊಳ್ಳಬೇಕು. ಕೈಗಳನ್ನು ಮೊಣಕಾಲುಗಳ ಇಟ್ಟುಕೊಳ್ಳಬೇಕು. ಅಥವಾ ಎರಡು ಕೈಬೆರಳುಗಳನ್ನೂ ಒಂದರೊಳ ಬೀಗಹಾಕಿದಂತೆ ಸೇರಿಸಿ ಬಲಪಾದದ ಮೇಲೆ ಇಟ್ಟುಕೊಳ್ಳಬೇಕು. ಸಿದ್ಧಾಸನ. ಇದರ ಹೆಸರೇ ಸೂಚಿಸುವಂತೆ ಇದು ಬಹಳ ಮು ಆಸನ. ನಿತ್ಯವೂ ಒಂದೊಂದು ಸಲಕ್ಕೆ ಏಕಾಸನದಲ್ಲಿ ಮೂರು ಗಂಟೆಗ ಅಖಂಡವಾಗಿ ಕುಳಿತುಕೊಳ್ಳುವುದಕ್ಕೆ ಅಭ್ಯಾಸವಾಗಬೇಕು. ಈ ಸಿ ದಲ್ಲಿ ಸಿದ್ಧಿಯನ್ನು ಹೊಂದಿದರೆ ಅನೇಕ ಸಿದ್ಧಿಗಳು ದೊರಕುತ್ತ ಆಸನದಲ್ಲಿ ಗುದಸ್ಥಾನಕ್ಕೂ ಜನನೇಂದ್ರಿಯಕ್ಕೂ ನಡುವೆ ಎಡ ಯಿಂದ ಕಂದಪೀಡನವನ್ನು ಮಾಡಬಹುದಾದ್ದರಿಂದ ಮೂಲಬಂಧ ವುದಕ್ಕೂ ಕುಂಡಲಿನೀ ಶಕ್ತಿ ಸಂಚಾಲನಕ್ಕೂ ಅನುಕೂಲವಾ ಪ್ರಾಣಾಯಾಮ ಸಾಧನದಲ್ಲಿ ಮೂಲಬಂಧವು ಬಹಳ ಮುಖ್ಯವ ಮೊದಲಿನಿಂದ ಕೊನೆಯವರೆಗೂ ಪೂರಕ, ರೇಚಕ, ಕುಂಭಕ ಸಾಧನಗಳಿಗೂ ಮೂಲಬಂಧವು ಅಗತ್ಯವಾಗುತ್ತದೆ. ಸಿದ್ಧಾಸನವ ಚರ್ಯ ಪಾಲನಕ್ಕೂ ಬಹಳ ಸಹಾಯಕವಾದುದು. ನಿತ್ಯವೂ ಪ್ರಾ ಸಾಯಂಕಾಲಗಳಲ್ಲಿ ಅರ್ಧರ್ಧ ಗಂಟೆಗಳ ಹೊತ್ತಾದರೂ ಸಿದ್ಧಾ ಕುಳಿತುಕೊಂಡು ಕಣ್ಣು ಮುಚ್ಚಿ ದೇವರ ಧ್ಯಾನಮಾಡಿದರೆ ಪ್ರಾ ನಾಶವಾಗಿ ಚಿತ್ತವು ಏಕಾಗ್ರವಾಗಿ ಆನಂದವಾಗುತ್ತದೆ. ಸಿದ್ಧಾ

ಸಂಧಿವಾತವೂ ಮೈಯಲ್ಲಿರುವ ಹೆಚ್ಚಿನ ಕೊಬ್ಬೂ ಸ್ಥೌಲ್ಯವೂ ನಾಶವಾಗಿ ದೇಹವು ಆರೋಗ್ಯವಾಗುತ್ತದೆ. ಹೆಚ್ಚು ಹೊತ್ತು ಆಯಾಸವಿಲ್ಲದೇ ಸುಖವಾಗಿ ಕುಳಿತುಕೊಳ್ಳುವುದಕ್ಕೆ ಯಾರು ಯಾರಿಗೆ ಯಾವ ಯಾವ ಆಸನವು ಅನುಕೂಲವೋ ಅವರವರು ಅದದನ್ನೇ ಅಭ್ಯಸಿಸಬಹುದು.

ನಿತ್ಯವೂ ಪ್ರಾತಸ್ಸಾಯಂಕಾಲಗಳಲ್ಲಿ ಶೀರ್ಷಾಸನವನ್ನು ಅಭ್ಯಾಸಮಾಡಬೇಕು. ನಾಲ್ಕು ಮಡಿಕೆಯುಳ್ಳ ಎರಡು ಮೊಳ ಚೌಕದ ಒಂದು ವಸ್ತ್ರವನ್ನು ಹಾಸಬೇಕು. ಎರಡು ಮೊಣಕಾಲುಗಳ ಮೇಲೆ ಕೂತುಕೊಳ್ಳಬೇಕು. ಎರಡು ಕೈಗಳ ಬೆರಳುಗಳನ್ನೂ ಒಂದರೊಳಗೊಂದು ಸೇರಿಸಿ ತಳಕುಹಾಕಬೇಕು. ಇದನ್ನು ಕೆಳಗೆ ಹಾಸಿರುವ ವಸ್ತ್ರದ ಮೇಲೆ ಮೊಣಕೈಯವರೆಗೂ ಊರಬೇಕು. ಈ ಕೈಬೆರಳ ಹೆಣಿಗೆಯ ಮೇಲೆ ನೆತ್ತಿಯನ್ನಿಟ್ಟು ಮೆಲ್ಲಗೆ ಕಾಲುಗಳು ನೇರವಾಗುವವರೆಗೂ ಮೇಲಕ್ಕೆತ್ತಬೇಕು. ಎಷ್ಟು ಹೊತ್ತು ಸಾಧ್ಯವಾದರೆ ಅಷ್ಟು ಹೊತ್ತು ಅಲ್ಲಾಡದೇ ನಿಂತು ಮೆಲ್ಲಗೆ ಕಾಲುಗಳನ್ನು ಕೆಳಗೆ ತರಬೇಕು. ಗಡಿಬಿಡಿಮಾಡದೇ ಸಾವಕಾಶವಾಗಿ ಈ ಆಸನವನ್ನು ಅಭ್ಯಾಸಮಾಡಬೇಕು. ಮೊಣಕೈವರೆಗೆ ಕೈಗಳನ್ನು ಊರಿಕೊಂಡು ನೆತ್ತಿಯ ಮೇಲೆ ನಿಂತಾಗ ಸಾವಧಾನವಾಗಿ ಮೂಗಿನಿಂದಲೇ ಉಸಿರಾಡಬೇಕು. ಬಾಯಿಯಿಂದ ಸ್ವಲ್ಪವೂ ಉಸಿರಾಡಬಾರದು. ಪ್ರಾರಂಭದಲ್ಲಿ ಇನ್ನೊಬ್ಬರ ಸಹಾಯವನ್ನೋ ಗೋಡೆಯ ಸಹಾಯವನ್ನೋ ಪಡೆದು ಅಭ್ಯಾಸಮಾಡಬಹುದು. ಮೊದಲು ಮೊದಲು ಎರಡು ಮೂರು ನಿಮಿಷಗಳು ಈ ಆಸನದಲ್ಲಿ ನಿಲ್ಲುತ್ತಾ ಮೆಲ್ಲಮೆಲ್ಲಗೆ ಕಾಲವನ್ನು ಹೆಚ್ಚಿಸಿಕೊಳ್ಳಬೇಕು. ಒಂದು ವರ್ಷದಲ್ಲಿ ಒಂದು ಗಂಟೆಯ ಕಾಲವಾದರೂ ನಿಶ್ಚಲವಾಗಿ ನಿಲ್ಲುವುದಕ್ಕೆ ಅಭ್ಯಾಸಮಾಡಬೇಕು. ಈ ಆಸನದಲ್ಲಿ ಪ್ರಾಣಗತಿಯು ಹೆಚ್ಚು ಹೆಚ್ಚು ಸೂಕ್ಷ್ಮವಾಗುತ್ತಾ ಬರುತ್ತದೆ. ಇದರಲ್ಲಿ ಲಕ್ಷ್ಯಾನುಸಂಧಾನವನ್ನೂ ನಡೆಸುತ್ತಿರಬೇಕು. ಚಿತ್ತವು ಏಕಾಗ್ರವಾಗಿರಬೇಕು. ಶೀರ್ಷಾಸನದಲ್ಲಿರುತ್ತಾ ಹಲವು ಕಲ್ಪನೆಗಳು ಮನಸ್ಸಿನಲ್ಲಿ ಹಾರಾಡುತ್ತಿರುವುದಕ್ಕೆ ಬಿಡಬಾರದು. ಕಣ್ಣುಗಳು ಮುಚ್ಚಿರಬೇಕು. ಭ್ರೂಮಧ್ಯದಲ್ಲಿ ದೃಷ್ಟಿಯಿರಬೇಕು. ಮುಖವು ಪ್ರಫುಲ್ಲಿತವಾಗಿರಬೇಕು. ಎಳೆನಗುವಿರಬೇಕು. ನೆತ್ತಿಯ ಮತ್ತು ಕೈಗಳ ಕೆಳಗೆ ಬಹಳ ಮೆತ್ತನೆಯ (ದಪ್ಪ ಮಡಿಕೆಯ) ವಸ್ತ್ರವನ್ನು ಹಾಸಿಕೊಂಡಿದ್ದರೆ ಎಷ್ಟು ಹೊತ್ತು ಬೇಕಾದರೂ ಈ ಆಸನದಲ್ಲಿರ

ಬಹುದು. ಈ ಆಸನದಲ್ಲಿ ಬಹಳ ಸುಖವೂ ಉಲ್ಲಾಸವೂ ಆನಂದವೂ ಇವೆ. ಕೆಲವು ಯೋಗಿಗಳು ಶೀರ್ಷಾಸನದಲ್ಲಿಯೇ ಸಮಾಧಿಸ್ಥಿತಿಯನ್ನು ಸಾಧಿಸುತ್ತಾರೆ. ಅವರು ಒಂದೊಂದು ಸಲಕ್ಕೆ ಎರಡುಮೂರು ಗಂಟೆಗಳ ಕಾಲ ಈ ಆಸನದಲ್ಲಿರುತ್ತಾರೆ. ಸಹಜವಾದ ಪ್ರಾಣಾಯಾಮವೂ ಸುಲಭವಾದ ಸಮಾಧಿಯೂ ಇದರಲ್ಲಿಯೇ ಆಗುವುವೆಂದೂ ಬೇರೆ ಪ್ರಯತ್ನವೇ ಬೇಡವೆಂದೂ ಇವರು ಹೇಳುವರು. ಈ ಆಸನದಲ್ಲಿ ಮೆದುಳಿನ ಕೇಂದ್ರಗಳಿಗೆ ರಕ್ತವೂ ಪ್ರಾಣಶಕ್ತಿಯೂ ಸಮೃದ್ಧಿಯಾಗಿ ಒದಗುವುದರಿಂದ ಇದು ಮೆದುಳಿಗೆ ಅತಿಶಯ ಪುಷ್ಟಿದಾಯಕವಾದುದು. ನಿತ್ಯವೂ ಧ್ಯಾನಕ್ಕೆ ಕುಳಿತುಕೊಳ್ಳುವುದಕ್ಕೆ ಮೊದಲು ಈ ಆಸನವನ್ನು ಅರ್ಧ ಘಂಟೆಯಾದರೂ ಹಾಕಿದರೆ ಧ್ಯಾನಕ್ಕೆ ಬಹಳ ಸಹಾಯವಾಗುತ್ತದೆ. ಇದರಲ್ಲಿ ಚಿತ್ತವು ಸುಲಭವಾಗಿ ಏಕಾಗ್ರವಾಗುವುದು. ಇದನ್ನು ಅಭ್ಯಾಸ ಮಾಡುವಾಗ ಅನಾಹತನಾದವು ಸಹಜವಾಗಿ ಕೇಳುತ್ತದೆ. ಈ ಆಸನವು ಎಲ್ಲಾ ರೋಗಗಳಿಗೂ ಔಷಧರೂಪವಾದುದು. ಇದರಿಂದ ಬ್ರಹ್ಮಚರ್ಯ ಪಾಲನೆಗೆ ಸಹಾಯವಾಗುತ್ತದೆ. ವೀರ್ಯವು ಓಜೋರೂಪವನ್ನು ಹೊಂದುತ್ತದೆ. ಸ್ಮೃತಿಶಕ್ತಿಯು ಬೆಳೆಯುತ್ತದೆ. ಇದರಿಂದ ಉಲ್ಲಾಸವೂ ಪ್ರಕಾಶವೂ ಉತ್ಸಾಹವೂ ಬೆಳೆಯುತ್ತವೆ. ಇದನ್ನು ಮೂರು ತಿಂಗಳು ಅಭ್ಯಾಸಮಾಡಿದರೆ ಮುಖದ ಮೇಲಿರುವ ಸುಕ್ಕುಗಳೂ ನೆರಿಗಳೂ ಮಾಯವಾಗಿ ಪೂರ್ವವಯಸ್ಸಿನಲ್ಲಿ ಬೆಳ್ಳಗಾದ ಕೂದಲು ಕಪ್ಪಾಗುತ್ತದೆ. "ನಿತ್ಯವೂ ಮೂರು ಘಂಟೆಗಳ ಕಾಲ ಶೀರ್ಷಾಸನ ಹಾಕಬಲ್ಲವನು ಕಾಲವನ್ನು ಜಯಿಸುತ್ತಾನೆ" ಎಂದು ಯೋಗತತ್ತ್ವೋಪನಿಷತ್ತಿನಲ್ಲಿ ಹೇಳಿದೆ. ಕುಂಡಲಿನೀ ಶಕ್ತಿಯನ್ನು ಪ್ರಚೋದನೆ ಮಾಡುತ್ತದೆ. ವೀರ್ಯಕೋಶದಲ್ಲಿರುವ ವೀರ್ಯದ ಒತ್ತಡವನ್ನು ಕಡಿಮೆ ಮಾಡಿ ಸ್ವಪ್ನಸ್ಖಲನ ಮೊದಲಾದುವುಗಳನ್ನು ನಿವಾರಿಸುತ್ತದೆ. ನೇತ್ರಶಕ್ತಿಯು ಸುಧಾರಿಸುತ್ತದೆ. ಕಣ್ಣು, ಕಿವಿ, ಮೂಗು, ತಲೆ, ಗಂಟಲು, ಹೊಟ್ಟೆ, ಜನನೇಂದ್ರಿಯ, ಮೂತ್ರೇಂದ್ರಿಯಗಳು, ಪಿತ್ತಕೋಶ, ಗುಲ್ಮ, ಶ್ವಾಸಕೋಶ ಮೊದಲಾದುವುಗಳ ಎಲ್ಲಾ ಬಗೆಯ ರೋಗಗಳೂ ಪರಿಹಾರವಾಗುತ್ತವೆ. ಈ ಆಸನವು ಪ್ರಬಲವಾದ ರಕ್ತಶುದ್ಧಿಕಾರಕ. ಮೆದುಳಿಗೂ, ನರಮಂಡಲಕ್ಕೂ ಇದು ಒಳ್ಳೇ 'ಟಾನಿಕ್'. ಇದರಿಂದ ಜಠರಾಗ್ನಿಯು ಪ್ರದೀಪ್ತವಾಗುತ್ತದೆ. ಬುದ್ಧಿಶಕ್ತಿಯ ಕೆಲಸಮಾಡತಕ್ಕವರಿಗೆ ಇದು ಬಹಳ ಉಪಕಾರಕವಾದುದು.

ಶೀರ್ಷಾಸನದ ಪ್ರಯೋಜನಗಳನ್ನೂ ಮಹಿಮೆಯನ್ನೂ ವರ್ಣಿಸುವುದೇ ಸಾಧ್ಯವಿಲ್ಲ. ಯಾವುದಾದರೊಂದು ಕಠಿಣತರವಾದ ಕಾರ್ಯಸಾಧನೆಗಾಗಿ "ತಲೆ ಕೆಳಗಾಗಿ ತಪಸ್ಸುಮಾಡಿದರೂ ಸಾಧ್ಯವಾಗುವುದೋ ಇಲ್ಲವೋ!" ಎಂದು ರೂಢಿಯಲ್ಲಿ ಹೇಳುವುದುಂಟು. "ಶೀರ್ಷಾಸನದಲ್ಲಿ ಸಂಯಮ (ಧಾರಣಾ–ಧ್ಯಾನ–ಸಮಾಧಿ) ಮಾಡುವುದು ಮಿಕ್ಕ ಎಲ್ಲಾ ತಪಸ್ಸುಗಳಿಗಿಂತಲೂ ಶ್ರೇಷ್ಠವೂ ಪ್ರಚಂಡವೂ ಆದುದು" ಎಂಬ ತತ್ತ್ವವು ಈ ಮಾತಿನಿಂದ ವ್ಯಕ್ತವಾಗುತ್ತದೆ.

ಪಂಡಿತ್ ನೆಹ್ರೂರವರಿಗೂ ಇದು ದೊಡ್ಡ ಆನಂದಪ್ರದವಾದ ಆಸನವಾಗಿದೆ. ಅವರು ನಿತ್ಯವೂ ಎಲ್ಲಿದ್ದರೂ ಹಾಕುತ್ತಾರೆ. ದೀರ್ಘಪ್ರಯಾಣದಲ್ಲಿ ವಿಮಾನದಲ್ಲಿ ಕೂಡ ಹಾಕುತ್ತಾರೆಂದು (ವಿನೋದದ) ವರ್ತಮಾನವಿದೆ. ತಲೆ ಕೆಳಗಾಗಿ ಬಹಳ ಹೊತ್ತು ನಿಲ್ಲುವ ಇವರನ್ನು ನೋಡಿ ಎಷ್ಟೋ ವೇಳೆ ಪಾಶ್ಚಾತ್ಯರೂ ಆಶ್ಚರ್ಯಪಟ್ಟಿದ್ದಾರೆ. ಇದು ಚೆಲ್ಲಾಟದ ಮನಸ್ಸಿಗೆ ಶಾಂತಿಯನ್ನು ಕೊಡುವುದಕ್ಕೆ ಉತ್ತಮವಾದ ಆಸನ.

ಶೀರ್ಷಾಸನದಲ್ಲಿ ಸೌಮ್ಯರೂಪವಾದುದು ಸರ್ವಾಂಗಾಸನ. ಇದರಿಂದ ಬೆನ್ನುಹುರಿಯಲ್ಲಿರುವ (ಇಡಾ, ಪಿಂಗಳಾ, ಸುಷುಮ್ನಾ) ನರ-ನಾಡಿಗಳಲ್ಲಿ ರಕ್ತದ ಕೇಂದ್ರೀಕರಣವಾಗಿ ಪೋಷಣ ಸಿಕ್ಕುತ್ತದೆ. ಕಂಠದಲ್ಲಿರುವ 'ಥೈರಾಯಿಡ್' ಎಂಬ ಅಂತಸ್ಸ್ರಾವಕ ಗ್ರಂಥಿಗೆ ಉತ್ತಮ ಪೋಷಣ ಉತ್ತೇಜನಗಳು ಸಿಕ್ಕುತ್ತವೆ. ಈ ಗ್ರಂಥಿಯು ದೇಹದ ರಚನಾ ಪೋಷಣಾದಿ ಕಾರ್ಯಗಳಲ್ಲಿ ಬಹಳ ಮುಖ್ಯಪಾತ್ರವನ್ನು ವಹಿಸುತ್ತದೆ. ಸರ್ವಾಂಗಾಸನದಿಂದಲೂ ಮಲಬದ್ಧತೆ ನಿವಾರಣೆಯಾಗುತ್ತದೆ. ಇದು ಮೆದುಳಿಗೂ ಹೃದಯಕ್ಕೂ ಅನ್ನಕೋಶಕ್ಕೂ ಉತ್ತಮ ಉತ್ತೇಜನ ಕೊಡುತ್ತದೆ. ಜಠರಾಗ್ನಿ ಪ್ರದೀಪ್ತವಾಗುತ್ತದೆ. ರಕ್ತಶುದ್ಧಿಯನ್ನೂ ಮಾಡಿ ಉಲ್ಲಾಸ ಕೊಡುತ್ತದೆ.

ಬುದ್ಧಿಯೂ ಜ್ಞಾನೇಂದ್ರಿಯಗಳೂ ಇರುವ ಕೇಂದ್ರವೇ ಮಸ್ತಕವೂ ಮೆದುಳೂ ಆಗಿವೆ. ದೇಹದ ಯಾವ ಭಾಗಕ್ಕಾದರೂ ಪೋಷಣವೂ ಶಕ್ತಿಯೂ ದೊರಕುವುದು ರಕ್ತದಿಂದಲೇ ಸರಿ. ದೇಹದಲ್ಲಿ ರಕ್ತಪ್ರಸರಣ ಕೇಂದ್ರವಾದ ಹೃದಯಕ್ಕಿಂತಲೂ ಮೇಲುಭಾಗದಲ್ಲಿ ಮಸ್ತಕವಿರುವುದರಿಂದ ಅಲ್ಲಿಗೆ ರಕ್ತದ ಪ್ರವಾಹ-ಪ್ರಸರಣಗಳು ಸಾಮಾನ್ಯವಾಗಿ ಕಡಿಮೆಯೆಂದೇ ಹೇಳಬೇಕು. ಇಡೀ

ಜೀವನಮಾನವಲ್ಲಿ ಶೀರ್ಷಾಸನ ಸರ್ವಾಂಗಾಸನಗಳ ಸಾಧನದ ವಿಶೇಷ ಪರಿಸ್ಥಿತಿ ಯಲ್ಲಿ ಹೊರತು ಮಿಕ್ಕ ಯಾವ ಸಂದರ್ಭದಲ್ಲಿಯೂ ಮಸ್ತಕವು ಹೃದಯ ಕ್ಕಿಂತಲೂ ಕೆಳಭಾಗಕ್ಕೆ ಬರುವುದಿಲ್ಲ. ಈ ಆಸನಗಳಲ್ಲಿ ಮಾತ್ರ ಹೃದಯವು ಮೇಲೂ ಮಸ್ತಕವು ಕೆಳಗೂ ಬರುವುದರಿಂದ ಮಸ್ತಕಕ್ಕೂ ಮೆದುಳಿಗೂ ರಕ್ತವು ಸಮೃದ್ಧಿಯಾಗಿ ಒದಗುತ್ತದೆ. ಆದ್ದರಿಂದ ಬುದ್ಧಿಶಕ್ತಿ ಇಂದ್ರಿಯಶಕ್ತಿಗಳು ಬೆಳೆಯುತ್ತವೆ. ಒಟ್ಟಿನಲ್ಲಿ ಮಹರ್ಷಿಗಳು ತಮ್ಮ ತಪಶ್ಶಕ್ತಿಯಿಂದ ಮಾನವರ ಉದ್ಧಾರಕ್ಕಾಗಿ ಕಂಡುಹಿಡಿದುಕೊಟ್ಟಿರುವ ವರಪ್ರಸಾದಗಳೇ ಈ ಶೀರ್ಷಾಸನ–ಸರ್ವಾಂಗಾಸನಗಳು. ದೈಹಿಕವೂ ದೈವಿಕವೂ ಆಧ್ಯಾತ್ಮಿಕವೂ ಆದ ಸರ್ವ ಸುಧಾರಣ–ಪೂರಣಗಳೂ ಈ ಆಸನಗಳಿಂದಲೇ ಸಾಧ್ಯವಾಗಬಲ್ಲವೆಂದರೆ ಅತಿ ಶಯೋಕ್ತಿಯಿಲ್ಲ. ಆಸನಸಿದ್ಧಿಯಿಂದ " **ತತೋ ದ್ವಂದ್ವಾನಭಿಘಾತಃ** " ಎಂಬ ಯೋಗಸೂತ್ರದಂತೆ ಶೀತೋಷ್ಣ ಸುಖದುಃಖಾದಿ ದ್ವಂದ್ವಗಳು ಬಾಧಿ ಸುವುದಿಲ್ಲ.

## ಪ್ರಾಣಾಯಾಮ

ಆಸನ ಸಾಧನದ ನಂತರ ಪತಂಜಲಿಗಳು ಪ್ರಾಣಾಯಾಮವನ್ನು ಹೇಳಿ ದ್ದಾರೆ. " **ಪ್ರಚ್ಛರ್ದನ ವಿಧಾರಣಾಭ್ಯಾಂ ವಾ ಪ್ರಾಣಸ್ಯ** " " ಉಸಿರನ್ನು ಹೊರಗೆ ಹಾಕಿ ಹಿಡಿದಿಟ್ಟುಕೊಳ್ಳುವುದರಿಂದ " ಚಿತ್ತಚಾಂಚಲ್ಯ ಅಡಗುತ್ತದೆ. **"ತಸ್ಮಿನ್ ಸತಿ ಶ್ವಾಸಪ್ರಶ್ವಾಸಯೋರ್ಗತಿವಿಚ್ಛೇದಃ ಪ್ರಾಣಾಯಾಮಃ "** " ಶ್ವಾಸೋಚ್ಛ್ವಾಸಗಳ ಗತಿಯನ್ನು ನಿಯಮನ ಮಾಡುವುದೇ ಪ್ರಾಣಾ ಯಾಮವು.

ಯೋಗದರ್ಶನದ ಜನಕರಾದ ಪತಂಜಲಿಗಳು ಪ್ರಾಣಾಯಾಮದ ವಿಷಯವಾಗಿ ಹೆಚ್ಚಿನ ಹಲವು ವಿಚಾರಗಳನ್ನೇನೂ ಹೇಳಿಲ್ಲ. ಆದರೆ ಅವರ ಅನಂತರಕಾಲದ ಯೋಗಿಗಳು ಪ್ರಾಣಾಯಾಮದ ವಿಷಯದಲ್ಲಿ ಶೋಧನಮಾಡಿ ಅನೇಕ ವಿಚಾರಗಳನ್ನು ಕಂಡುಹಿಡಿದು ಅದನ್ನೇ ದೊಡ್ಡ ಶಾಸ್ತ್ರವನ್ನಾಗಿ ಮಾಡಿದರು. ಪತಂಜಲಿಗಳ ದೃಷ್ಟಿಯಲ್ಲಿ ಯೋಗಾಂಗಗಳಾದ ಅನೇಕ ಸಾಧನ ಗಳಲ್ಲಿ ಪ್ರಾಣಾಯಾಮವೂ ಒಂದೇ ಹೊರತು ಪ್ರಾಣಾಯಾಮದ್ದೇ ಹೆಚ್ಚಿನ ಮಹತ್ವವಿಲ್ಲ.

ಇಲ್ಲಿ ಮುಖ್ಯವಾಗಿ ಪ್ರಾಣದ ವಿಷಯವನ್ನು ಸ್ವಲ್ಪ ವಿಚಾರಮಾಡ ಬೇಕು. ಪ್ರಾಣಾಯಾಮವೆಂದರೆ ಕೇವಲ ಶ್ವಾಸೋಚ್ಛ್ವಾಸದ ನಿರೋಧವೆಂದು ತಿಳಿದುಕೊಂಡಿದ್ದೇವೆ. ಆದರೆ ಪ್ರಾಣವೆಂದರೆ ಬರೀ ಉಸಿರಾಟವಲ್ಲ. ಒಳಗೆ ನಮ್ಮಲ್ಲಿಯೂ ಹೊರಗೆ ಜಗತ್ತಿನಲ್ಲಿಯೂ ಇರುವ ಸರ್ವ ಅನಂತ ಶಕ್ತಿಗಳ ಮೂಲರೂಪವೇ ಅವ್ಯಕ್ತವಾದ ಪ್ರಾಣವಾಗಿದೆ. ವಿಶ್ವಶಕ್ತಿಯೇ ಪ್ರಾಣ. ಪಂಚಭೌತಿಕವಾದ ಜಗತ್ತಿನಲ್ಲಿ ಮೂಲಭೂತವೇ ಆಕಾಶ. ಆಕಾಶದಿಂದ ಕ್ರಮವಾಗಿ ವಾಯು ಮೊದಲಾದ ಉಳಿದ ಭೂತಗಳೂ, ಅವುಗಳ ಪರಸ್ಪರ ಸಮ್ಮಿಶ್ರಣದಿಂದ ಪಾಂಚಭೌತಿಕ ಜಗತ್ತೂ ಉದಯವಾಯಿತು ಆದ್ದರಿಂದ ಸರ್ವವಸ್ತುಗಳ ಮೂಲರೂಪವೇ ಆಕಾಶ. ಆಕಾಶವು ಸರ್ವವ್ಯಾಪಕವಾಗಿದೆ. ಸೃಷ್ಟಿಯ ಆದಿಯಲ್ಲಿ ಆಕಾಶವೊಂದೇ ಇರುವುದು. ಪ್ರಳಯಕಾಲದಲ್ಲಿ ಪೃಥ್ವಿಯು ಜಲದಲ್ಲಿಯೂ, ಜಲವು ಅಗ್ನಿಯಲ್ಲಿಯೂ, ಅಗ್ನಿಯು ವಾಯುವಿನಲ್ಲಿಯೂ, ವಾಯುವು ಆಕಾಶದಲ್ಲಿಯೂ ಲಯವಾಗಿ, ಆಕಾಶವೊಂದೇ ಉಳಿಯುತ್ತದೆ. ಯಾವ ಶಕ್ತಿಯಿಂದ ಜಡವಾದ ಆಕಾಶವು ಸರ್ವ ಜಗತ್ತಾಗಿ ರೂಪುಗೊಂಡಿತೋ ಆ ಶಕ್ತಿಯೇ ಪ್ರಾಣಶಕ್ತಿ. ಅನಂತವೂ, ಸರ್ವವ್ಯಾಪಿಯೂ ಆದ ಆಕಾಶವು ಹೇಗೆ ಸೃಷ್ಟಿಗೆ ಕಾರಣವಾದ ಮೂಲ ಜಡತತ್ತ್ವವೋ ಹಾಗೇ ಅನಂತವೂ ಸರ್ವವ್ಯಾಪಿಯೂ ಆದ ಪ್ರಾಣವೇ ಸೃಷ್ಟಿಗೆ ಕಾರಣವಾದ ಮೂಲ ಚೇತನಶಕ್ತಿ. ಅವ್ಯಕ್ತ ತತ್ತ್ವದಲ್ಲಿ ಅಡಗಿರುವ ಪುರುಷ-ಪ್ರಧಾನವೇ ಬಿಚ್ಚಿ ವ್ಯಕ್ತವಾಗಿ ಪ್ರಾಣಶಕ್ತಿ ಮತ್ತು ಆಕಾಶತತ್ತ್ವಗಳಾದವೆನ್ನಬಹುದು. ಸೃಷ್ಟಿಯ ಆದಿಯಲ್ಲಿಯೂ ಅಂತ್ಯದಲ್ಲಿಯೂ ವಸ್ತುಗಳೆಲ್ಲಾ ಆಕಾಶರೂಪವಾಗಿಯೂ ಶಕ್ತಿಗಳೆಲ್ಲಾ ಪ್ರಾಣರೂಪವಾಗಿಯೂ ಇರುತ್ತವೆ. ಪ್ರಾಣಶಕ್ತಿಯೇ ಚಲನಶಕ್ತಿಯಾಗಿಯೂ, ಗುರುತ್ವಾಕರ್ಷಣಶಕ್ತಿಯಾಗಿಯೂ, ಚುಂಬಕಶಕ್ತಿಯಾಗಿಯೂ, ವಿದ್ಯುಚ್ಛಕ್ತಿಯಾಗಿಯೂ, ಶಾಖ-ಪ್ರಕಾಶಗಳ ಶಕ್ತಿಯಾಗಿಯೂ, ಶಬ್ದಶಕ್ತಿಯಾಗಿಯೂ, ದೇಹಶಕ್ತಿಯಾಗಿಯೂ. ಇಂದ್ರಿಯಶಕ್ತಿಯಾಗಿಯೂ, ನಾಡೀಶಕ್ತಿಯಾಗಿಯೂ, ಮನಶ್ಶಕ್ತಿಯಾಗಿಯೂ, ಬುದ್ಧಿಶಕ್ತಿಯಾಗಿಯೂ ವ್ಯಕ್ತವಾಗಿದೆ. ವಿಚಾರಶಕ್ತಿಯಿಂದ ಹಿಡಿದು ಅತಿ ಕೀಳಾದ ಶಕ್ತಿಯವರೆಗೂ ಸರ್ವವೂ ಒಂದು ಪ್ರಾಣಶಕ್ತಿಯ ರೂಪಾಂತರಗಳೇ ಆಗಿವೆ. ಎಲ್ಲಾ ಭೌತಿಕ ಶಕ್ತಿಗಳೂ ಬೌದ್ಧಿಕ ಶಕ್ತಿಯೂ ಮೂಲತಃ ಪ್ರಾಣಶಕ್ತಿಯೇ ಆಗಿವೆ. ಸೃಷ್ಟಿಯ ಆದಿಯಲ್ಲಿ

ಆಕಾಶದ ಮೇಲೆ ಪ್ರಾಣಶಕ್ತಿಯ ಆಘಾತವಾಗಿ ಆಕಾಶಸಾಗರವು ತರಂಗಿತ ವಾಯಿತು. ಅದರಿಂದ ವಾಯು, ಅಗ್ನಿ ಮೊದಲಾದ ಕ್ರಮದಿಂದ ಜಗತ್ತಿನ ಉತ್ಪತ್ತಿಯಾಯಿತು. ಹಾಗೆಯೇ ಪ್ರಾಣವೂ ವಿವಿಧಶಕ್ತಿಗಳಾಗಿ ರೂಪಾಂತರ ವಾಗುತ್ತಾ ಹೋಯಿತು. ಈ ಪ್ರಾಣಶಕ್ತಿಯ ಜ್ಞಾನವೂ ನಿಯಂತ್ರಣವೂ ಪ್ರಾಣಾಯಾಮವು. ಪ್ರಾಣಶಕ್ತಿಯೊಂದು ಸ್ವಾಧೀನವಾದರೆ ಅಣುವಿನಿಂದ ಹಿಡಿದು ಮಹತ್ತಿನವರೆಗೆ ಜಗತ್ತಿನಲ್ಲಿ ಸರ್ವ ಶಕ್ತಿಗಳೂ ಅವನ ಸ್ವಾಧೀನವಾಗು ತ್ತವೆ. ಅವನ ಆಜ್ಞೆಯಾದರೆ ದೇವತೆಗಳೂ ಪಿತೃಗಳೂ ಮೃತಜೀವರೂ ಎದುರಿಗೆ ಬಂದು ನಿಲ್ಲುವರು. ಪ್ರಾಣವು ಸ್ವಾಧೀನವಾದರೆ ದೇಹವೂ ಮನಸ್ಸೂ ಸ್ವಾಧೀನವಾಗುತ್ತವೆ. ಹಾಗೂ ಎಲ್ಲರ ದೇಹಗಳೂ ಮನಸ್ಸುಗಳೂ ಸ್ವಾಧೀನ ವಾಗುತ್ತವೆ. ಏಕೆಂದರೆ ಸರ್ವಶಕ್ತಿಗಳೂ ಪ್ರಾಣವೇ ಆಗಿದೆ. ನಮಗೆ ಜಗತ್ತಿ ನಲ್ಲಿ ಅತ್ಯಂತ ಸಮೀಪವಾಗಿರುವ ದೇಹವನ್ನೂ ಅದಕ್ಕಿಂತಲೂ ಸಮೀಪ ವಾಗಿರುವ ಮನಸ್ಸನ್ನೂ ಸ್ವಾಧೀನಪಡಿಸಿಕೊಂಡರೆ ನಾವು ಜಗತ್ತಿನಲ್ಲಿ ಬೇರಾವು ದನ್ನಾದರೂ ವಶಪಡಿಸಿಕೊಳ್ಳಬಹುದು. ಈ ನಮ್ಮ ದೇಹದ ಮತ್ತು ಮನಸ್ಸಿನ ಕ್ರಿಯೆಗಳನ್ನು ನಡೆಸುವ ಪ್ರಾಣವು ವಿಶ್ವಪ್ರಾಣಸಾಗರದ ಒಂದು ಸಣ್ಣ ತರಂಗ ಮಾತ್ರವಾಗಿದೆ. ಈ ಸಣ್ಣ ತರಂಗವನ್ನು ವಶಪಡಿಸಿಕೊಂಡರೆ ಮಿಕ್ಕ ಸಾಗರದ ನಿಯಂತ್ರಣದ ವಿಚಾರ ಮಾಡಬಹುದು.

ಶ್ವಾಸಕೋಶಗಳ ಸಂಚಲನೆಯೇ ಮನುಷ್ಯ ಶರೀರದಲ್ಲಿ ಪ್ರಾಣದ ಅಭಿ ವ್ಯಕ್ತಿಯಾಗಿದೆ. ಇದೊಂದು ನಿಂತರೆ ಶರೀರದಲ್ಲಿ ಪ್ರಾಣಶಕ್ತಿಯ ಮಿಕ್ಕ ಎಲ್ಲಾ ಕ್ರಿಯೆಗಳೂ ನಿಂತುಹೋಗುತ್ತವೆ. ಆದರೆ ಕೆಲವು ಯೋಗಿಗಳು ಶ್ವಾಸಕೋಶದ ಕ್ರಿಯೆಗಳು ನಿಂತಮೇಲೂ (ಭೂಮಿಯೊಳಗೆ ಅಥವಾ ಪೆಟ್ಟಿಗೆಯಲ್ಲಿ ಮುಚ್ಚಿಸಿ ಕೊಂಡು) ಬದುಕಿರಬಲ್ಲರು. ಸ್ಥೂಲದಿಂದ ಸೂಕ್ಷ್ಮಕ್ಕೂ ಸೂಕ್ಷ್ಮದಿಂದ ಸೂಕ್ಷ್ಮತರವಾದುದಕ್ಕೂ ನಮ್ಮ ಸಾಧನವನ್ನು ಬೆಳೆಸಬೇಕು. ನಿಜವಾಗಿಯೂ ಪ್ರಾಣಾಯಾಮವೆಂದರೆ ಶ್ವಾಸಕೋಶಗಳ ಸಂಚಲನವನ್ನು ನಿಲ್ಲಿಸುವುದೇ ಆಗಿದೆ. ಆದರೆ ಈ ಸಂಚಲನವು ಶ್ವಾಸೋಚ್ಛ್ವಾಸಕ್ಕೆ ಸಂಬಂಧಪಟ್ಟಿದೆ. ಶ್ವಾಸಕೋಶ ಗಳ ಆಕುಂಚನವು ಒಳಗಿನ ಗಾಳಿಯನ್ನು ಹೊರಗೆ ಹಾಕುತ್ತಲೂ ಪ್ರಸರಣವು ಹೊರಗಿನ ಗಾಳಿಯನ್ನು ಒಳಗೆ ಸೆಳೆದುಕೊಳ್ಳುತ್ತಲೂ ಉಸಿರಾಟವನ್ನು ನಡೆಸಿ ದೆಯೇ ಹೊರತು ಶ್ವಾಸೋಚ್ಛ್ವಾಸವು ಶ್ವಾಸಕೋಶಗಳನ್ನು ಸಂಚಲನಮಾಡು

ಲ್ಲಿ. ಸರ್ವವ್ಯಾಪಿಯಾದ ಪ್ರಾಣಶಕ್ತಿಯು ಶ್ವಾಸಕೋಶಗಳನ್ನು ಸಂಚಲನ ನಡುತ್ತಲೂ ಆ ಚಲನವು ಉಸಿರಾಡಿಸುತ್ತಲೂ ಇದೆ. ಸೂಕ್ಷ್ಮನಾಡಿಗಳ ಮೂಲಕ ಮಾಂಸಖಂಡಗಳಿಗೂ, ಮಾಂಸಖಂಡಗಳಿಂದ ಶ್ವಾಸಕೋಶಗಳಿಗೂ ವಹಿಸಿ, ಕೋಶಗಳನ್ನು ವಿಶಿಷ್ಟರೀತಿಯಲ್ಲಿ ಸಂಕೋಚ-ವಿಕಾಸಪಡಿಸುತ್ತಾ ಸಿರಾಡಿಸುತ್ತಿರುವುದಾವುದೋ ಅದೇ ಪ್ರಾಣಶಕ್ತಿ. ಇದನ್ನೇ ನಾವು ಸ್ವಾಧೀನ ಡಿಸಿಕೊಳ್ಳಬೇಕು. ಶ್ವಾಸನಿರೋಧದಿಂದ ಶ್ವಾಸಕೋಶ ಸಂಚಲನ ನಿರೋಧವೂ, ದರಿಂದ ನಾಡೀಶಕ್ತಿ ನಿರೋಧವೂ ಅದರಿಂದ ಪ್ರಾಣವಶವೂ, ಆಗುತ್ತವೆ.

ಸಿದ್ಧಾಸನದಲ್ಲಿ "**ಸಮಂಕಾಯ ಶಿರೋಗ್ರೀವಂ ಧಾರಯನ್ನಚಲಂ** ೧೪।" ಎಂಬ ಗೀತೋಕ್ತಿಯಂತೆ ದೇಹವನ್ನೂ ತಲೆಯನ್ನೂ ಕುತ್ತಿಗೆ ಯನ್ನೂ ಸರಳರೇಖೆಯಲ್ಲಿ ನೆಟ್ಟಗಿಟ್ಟುಕೊಂಡು ಅಲ್ಲಾಡದೇ ಸ್ಥಿರವಾಗಿ ಕುಳಿತು ಕೊಳ್ಳಬೇಕು. ಕಣ್ಣುಮುಚ್ಚಿಕೊಂಡು ಕೈಮುಗಿದು ಪರಬ್ರಹ್ಮದ ವ್ಯಕ್ತರೂಪಿ ಯಾದ ತ್ರಿಮೂರ್ತಿಗಳನ್ನೂ ಗುರುಪರಂಪರೆಯನ್ನೂ ಸ್ಮರಿಸಿ ತನ್ನ ಇಷ್ಟದೇವ ನ್ನು ಧ್ಯಾನಿಸಿ ಪ್ರಾಣಾಯಾಮವನ್ನು ಪ್ರಾರಂಭಿಸಬೇಕು.

ಯೋಗಶಾಸ್ತ್ರದ ಪ್ರಕಾರ ಬೆನ್ನುಹುರಿಯಲ್ಲಿ (ಮೇರುದಂಡದಲ್ಲಿ) ಇಡಾ ಮತ್ತು ಪಿಂಗಳಾ ಎಂಬ ಎರಡು ನಾಡಿಗಳಿವೆ. ಇವುಗಳ ಮಧ್ಯದಲ್ಲಿ ಸುಷುಮ್ನಾ ಎಂಬ ಒಂದು ಸೂಕ್ಷ್ಮವಾದ ಪೊಳ್ಳು ನಾಡಿಯಿದೆ. ಇದಕ್ಕೆ ಬ್ರಹ್ಮರಂಧ್ರನಾಳ ವೆಂದೂ ಹೆಸರು. ಈ ಬ್ರಹ್ಮರಂಧ್ರನಾಳದ ತಳದಲ್ಲಿ ಗುದಸ್ಥಾನಕ್ಕೆ ಸಮನಾಗಿ (ಮೂಲಾಧಾರ ಚಕ್ರದಲ್ಲಿ) ಕುಂಡಲಿನೀ ಕಮಲವಿದೆ. ಈ ಕುಂಡಲಿನೀ ಕಮಲ ವಿರುವ ಮೂಲಾಧಾರ ಚಕ್ರವು ತ್ರಿಕೋಣಾಕಾರವಾಗಿದೆ. ಈ ಕಮಲದಲ್ಲಿ ಕುಂಡಲಿನೀ ಶಕ್ತಿಯು ಸರ್ಪಾಕಾರವಾಗಿ ಸುರುಳಿ ಸುತ್ತಿಕೊಂಡು ಅಧೋಮುಖ ವಾಗಿ ಪ್ರಸುಪ್ತವಾಗಿದೆ. ಪ್ರಾಣಾಯಾಮಾದಿ ಸಾಧನಗಳಿಂದ ಈ ಶಕ್ತಿಯನ್ನು ಎಚ್ಚರಿಸಬೇಕು. ಎಚ್ಚರಗೊಂಡ ಈ ಕುಂಡಲಿನೀ ಶಕ್ತಿಯು ಸುಷುಮ್ನಾ ರಂಧ್ರದಲ್ಲಿ ಕ್ರಮಕ್ರಮವಾಗಿ ಮೂಲಾಧಾರ ಚಕ್ರದಿಂದ (ಗುಹ್ಯಸ್ಥಾನಕ್ಕೆ ಸಮನಾಗಿ ಬೆನ್ನುಹುರಿಯಲ್ಲಿರುವ) ಸ್ವಾಧಿಷ್ಠಾನಚಕ್ರ, (ನಾಭೀಸ್ಥಾನಕ್ಕೆ ಸಮ ನಾಗಿರುವ) ಮಣಿಪೂರಚಕ್ರ, (ಹೃದಯಕ್ಕೆ ಸಮನಾಗಿರುವ) ಅನಾಹತಚಕ್ರ, (ಕಂಠದಲ್ಲಿರುವ) ವಿಶುದ್ಧಚಕ್ರ, (ಭ್ರೂಮಧ್ಯದಲ್ಲಿರುವ) ಆಜ್ಞಾಚಕ್ರ ಇವುಗಳ

ಮೂಲಕ ಏರುತ್ತಾ ಏರುತ್ತಾ ಬಂದವರೆ ಯೋಗಿಗೆ ಅನೇಕ ದಿವ್ಯದರ್ಶನಗಳೂ
ಸಿದ್ಧಿಗಳೂ, ಶಕ್ತಿಗಳೂ ಲಭಿಸುತ್ತವೆ. ಕುಂಡಲಿನೀ ಶಕ್ತಿಯು (ಭ್ರೂಮಧ್ಯದ
ಆಜ್ಞಾ ಚಕ್ರದಿಂದ ಮೇಲೇರಿ ನೆತ್ತಿಯ ಮಧ್ಯದಲ್ಲಿರುವ ಸಹಸ್ರಾರಚಕ್ರಕ್ಕೆ ಸೇ
ತೆಂದರೆ ಯೋಗಿಯು ದೇಹ ಮನಸ್ಸುಗಳಿಂದ ಬಿಡುಗಡೆ ಹೊಂದಿ ತನ್ನ ಮುಕ್ತ
ಸ್ವರೂಪವನ್ನು ಅನುಭವಮಾಡುತ್ತಾನೆ. ಅತೀಂದ್ರಿಯವಾದ ದಿವ್ಯಜ್ಞಾನವನ
ಪಡೆಯುವುದಕ್ಕೂ ಆತ್ಮಾನುಭವ ಮಾಡುವುದಕ್ಕೂ ಕುಂಡಲಿನೀ ಶಕ್ತಿಯ
ಉತ್ಥಾಪನೆಯೊಂದೇ ಸಾಧನವಾಗಿದೆ. ಕುಂಡಲಿನೀ ಉತ್ಥಾಪನೆಯು ಪೂರ್ಣ
ಯನ್ನು ಪಡೆದ ಮಹಾತ್ಮರ ಕೃಪೆಯಿಂದಲಾಗಲೀ, ಭಕ್ತಿಯೋಗಸಾಧ
ಯಿಂದಾಗಲೀ ತತ್ತ್ವಜ್ಞಾನಿಯ ಪ್ರಖರವಾದ, ವಿವೇಚನಾ ಶಕ್ತಿಯಿಂದಾಗಲಿ
ಬೇರೆ ಬೇರೆ ಸಾಧನಗಳಿಂದ ಆಗಬಹುದು.

ಬೆನ್ನು ಹುರಿಯಲ್ಲಿರುವ ಇಡಾ–ಪಿಂಗಳಾ ನಾಡಿಗಳು ಜ್ಞಾನವಾಹಿ ಮತ್ತ
ಕ್ರಿಯಾವಾಹಿಗಳಾದ ನರಗಳು. ಇಂದ್ರಿಯ ಸಂವೇದನೆಗಳನ್ನೆಲ್ಲಾ ಮೆದುಳಿ
ಮುಟ್ಟಿಸುವುದು ಜ್ಞಾನವಾಹಿಯಾದ ಇಡಾ ನಾಡಿಯು. ಪ್ರತಿಕ್ರಿಯಾತ್ಮ
ವಾದ ಮೆದುಳಿನ ಆಜ್ಞೆಯನ್ನು ಹೊರಗೆ ಕಳಿಸುವುದೇ ಕ್ರಿಯಾವಾಹಿಯಾ
ಪಿಂಗಳಾ ನಾಡಿಯು. ಹೊರಗಿನ ಶಬ್ದಾದಿ ವಿಷಯಗಳ ಸಂಬಂಧದಿಂ
ಉಂಟಾದ ಇಂದ್ರಿಯ ಸಂವೇದನೆಗೆ, ಬುದ್ಧಿಯಿಂದ ಪ್ರತಿಕ್ರಿಯಾತ್ಮಕವಾ
ಬರುವ ವಸ್ತುಕಲ್ಪನೆಯು ಚಿತ್ತದಲ್ಲಿ ತರಂಗರೂಪವಾಗಿ ಹೊಳೆದು ಅಳಿದರೂ
ಅವುಗಳ ಸೂಕ್ಷ್ಮಸಂಸ್ಕಾರಗಳು ವಾಸನಾರೂಪವಾಗಿ ಕುಂಡಲಿನಿಯಲ್ಲಿ ಅಡಗ
ತ್ತವೆ. ಎಲ್ಲಾ ವಿಷಯಾನುಭವಗಳೂ ಹೊರಗಿನಿಂದಾಗುವ ಇಂದ್ರಿಯ ಸಂವೆ
ದನೆಗೆ ಪ್ರತಿಕ್ರಿಯಾರೂಪವಾದರೂ ಬಾಹ್ಯಸಂವೇದನೆಗಳಿಲ್ಲದ ಕಾಲದಲ
ಗುವ ಸ್ವಪ್ನಕಲ್ಪನೆಗಳಾಗಲೀ ಎಚ್ಚರದ ಮಾನಸಿಕ ಕಲ್ಪನೆಗಳಾಗಲೀ ವಾಸನ
ರೂಪವಾದ ಕುಂಡಲಿನೀ ಶಕ್ತಿಯ ಕ್ರಿಯೆಗಳೇ ಆಗಿವೆ. ಚಿತ್ತದಲ್ಲುಂಟಾಗು
ಭಾವನಾತರಂಗಗಳು ಅಳಿದರೂ ಅವುಗಳ ಸೂಕ್ಷ್ಮಸಂಸ್ಕಾರಗಳು ವಾಸನ
ರೂಪವಾಗಿ ಮೂಲಾಧಾರ ಚಕ್ರದಲ್ಲಿ ಸುರುಳಿ ಸುತ್ತಿಕೊಂಡಿರುವ ಕುಂಡಲಿನ
ಶಕ್ತಿಯಾಗಿವೆ. ಈ ಕುಂಡಲಿನೀ ಶಕ್ತಿಯ ಅಲ್ಪಾಂಶವು ಒಂದು ನಾಡಿಯ
ಮೂಲಕ ಪ್ರವಹಿಸಿ ಕೇಂದ್ರಗಳಿಂದ ಪ್ರತಿಕ್ರಿಯೆಯನ್ನುಂಟುಮಾಡಿವರೆ, ಅದ
ಪ್ರತೀತಿಯು ಸ್ವಪ್ನವೋ ಅಥವಾ ಎಚ್ಚರದಲ್ಲಿಯ ಕಲ್ಪನೆಯೋ ಆಗುತ್ತವ

ವರೆ ದೀರ್ಘಕಾಲದ ಆಂತರಿಕ ಧ್ಯಾನಬಲದಿಂದ ಅಗಾಧವಾಸನಾರಾಶಿಯಾದ ಕುಂಡಲಿನೀ ಶಕ್ತಿಯು ಸುಷುಮ್ನೆಯ ಮೂಲಕ ಮೇಲಕ್ಕೆ ಪ್ರವಹಿಸಿ ಂದ್ರಗಳಿಗೆ ವೇಧಿಸಿದರೆ, ಇಂದ್ರಿಯ ಸಂವೇದನೆಗಳಿಂದಾಗುವ ಪ್ರತಿಕ್ರಿಯೆ ಂತಲೂ ಅತಿಶಯ ತೀವ್ರವೂ ಸ್ವಪ್ನರೂಪ ಅಥವಾ ಜಾಗ್ರತ್ ಕಲ್ಪನಾರೂಪ ತಿಕ್ರಿಯೆಗಿಂತಲೂ ಅತಿಶಯ ಶ್ರೇಷ್ಠವೂ ಆದ ಪ್ರಚಂಡ ಪ್ರತಿಕ್ರಿಯೆಯಾಗು ನೆ. ಆಗ ಅತೀಂದ್ರಿಯವಾದ ಪ್ರತೀತಿಯಾಗುತ್ತದೆ. ಅದು ಸರ್ವ ಸಂವೇದನೆ ಳ ರಾಜಕೇಂದ್ರವಾದ ಮೆದುಳಿಗೆ ಸೇರಿದೊಡನೆ, ಪೂರಾ ಮೆದುಳೇ ಪ್ರತಿ ಯಾಶೀಲವಾಗುವುದರಿಂದ, ಪೂರ್ಣಪ್ರಜ್ಞೆಯು ಪ್ರಜ್ವಲಿಸಿ ಆತ್ಮಾನುಭವ ಾಗುತ್ತದೆ.

ಆದ್ದರಿಂದ ಮೂಲಾಧಾರದಲ್ಲಿರುವ ಸುಷುಮ್ನೆಯ ಅಧೋದ್ವಾರವನ್ನು ೆದು, ಕುಂಡಲಿನೀ ಶಕ್ತಿಯನ್ನು ಎಚ್ಚರಿಸಿ, ಸುಷುಮ್ನೆಯ ಮೂಲಕ ಸಹ ್ರರಕ್ಕೆ ಪ್ರವಹಿಸುವಂತೆ ಪ್ರಯತ್ನಿಸುವುದೇ ಯೋಗಿಯ ಮುಖ್ಯ ಉದ್ದೇಶ ಾಗಿದೆ. ಕುಂಡಲಿನೀ ಶಕ್ತಿಯು ಚಕ್ರದಿಂದ ಚಕ್ರಕ್ಕೆ ಏರುತ್ತಾ ಏರುತ್ತಾ ನಸ್ಸೂ ಹೆಚ್ಚು ಹೆಚ್ಚು ವಿಕಾಸವಾಗುತ್ತಾ ಹೋಗಿ, ಯೋಗಿಗೆ ಇಡೀ ಜಗತ್ತೇ ೂಕ್ಷ್ಮರೂಪದಲ್ಲಿಯೂ ಕಾರಣರೂಪದಲ್ಲಿಯೂ ಕಂಡು ದಿವ್ಯಜ್ಞಾನವುಂಟಾಗು ದೆ. ಪ್ರಾಣಾಯಾಮದಿಂದ ಕುಂಡಲಿನಿಯನ್ನು ಜಾಗ್ರತಗೊಳಿಸಿ ಸುಷುಮ್ನೆ ಲ್ಲಿ ಮೇಲೇರಿಸುವ ಕಾರ್ಯದಲ್ಲಿ ಭಾವನಾಬಲವು ಬಹಳ ಸಹಾಯ ಾಡುತ್ತದೆ.

ಪ್ರಾಣಾಯಾಮದಲ್ಲಿ ರೇಚಕ, ಪೂರಕ, ಕುಂಭಕ ಎಂದು ಮುಖ್ಯವಾಗಿ ೂರು ಬಗೆ. ರೇಚಕ ಪೂರಕರಹಿತವಾದ ಕೇವಲ ಕುಂಭಕವೆನ್ನುವ ನಾಲ್ಕ ಯ ಬಗೆಯೂ ಇದೆ. ಹಿಂದೆ ಹೇಳಿದಂತೆ ನೆಟ್ಟಗೆ ಸಿದ್ಧಾಸನದಲ್ಲಿ ಕುಳಿತು ಣ್ಣುಗಳನ್ನು ಮುಚ್ಚಿಕೊಂಡು, ದೃಷ್ಟಿಯನ್ನು ಭ್ರೂಮಧ್ಯದಲ್ಲಿ ನಿಲ್ಲಿಸಿ. ಬಲಗೈ ಬ್ಬೆರಳಿನಿಂದ ಬಲದ ಮೂಗನ್ನು ಒತ್ತಿಹಿಡಿದು, ಎಡ ಮೂಗಿನಿಂದ ಶ್ವಾಸ ೋಶಗಳಲ್ಲಿರುವ ಎಲ್ಲಾ ಉಸಿರನ್ನೂ ಮೆಲ್ಲಗೆ ಹೊರಗೆ ಬಿಡಬೇಕು. ಇದಕ್ಕೆ ೇಚಕವೆಂದು ಹೆಸರು. ಅನಂತರ ಆ ಎಡದ ಮೂಗಿನಿಂದಲೇ ಉಸಿರನ್ನು ಳಗೆ ಎಳೆದುಕೊಳ್ಳಬೇಕು. ಇದಕ್ಕೆ ಪೂರಕವೆಂದು ಹೆಸರು. ಎಷ್ಟು ಧ್ಯವೋ ಅಷ್ಟು ಉಸಿರನ್ನೂ ಒಳಗೆ ತುಂಬಿಕೊಂಡು (ಒಳಗೆ ನಿಲ್ಲಿಸದೇ)

ಕೂಡಲೇ ಎಡದ ಮೂಗನ್ನು ಮೂರನೇ ಬೆರಳಿನಿಂದ ಒತ್ತಿಹಿಡಿದು ಬಲ ಮೂಗಿನಿಂದ ಹೊರಗೆ ಸಾವಕಾಶವಾಗಿ ಬಿಡಬೇಕು. ಎಡದ ಮೂಗನ್ನು ಒ ಹಿಡಿದು, ಪುನಃ ಬಲದ ಮೂಗಿನಿಂದಲೇ ಒಳಗೆ ಹಿಡಿಸುವಷ್ಟು ಉಸಿರ ತುಂಬಿಕೊಳ್ಳಬೇಕು. ಬಲದ ಮೂಗನ್ನು ಹೆಬ್ಬೆರಳಿಂದ ಒತ್ತಿಹಿಡಿದು ಎಡ ಮೂಗಿನಿಂದ ಸಾವಕಾಶವಾಗಿ ಎಲ್ಲಾ ವಾಯುವನ್ನೂ ಹೊರಗೆ ಬಿಡಬೇಕ ಇದು ಒಂದು ಪ್ರಾಣಾಯಾಮವಾಯಿತು. ಇದರಲ್ಲಿ ವಾಯುವನ್ನು ಒ ತಡೆದು ನಿಲ್ಲಿಸುವ ಕುಂಭಕವಿಲ್ಲದ್ದರಿಂದ ಯಾವ ಅಪಾಯವೂ ಇಲ್ಲ. ಪ್ರಾರ ವಲ್ಲಿ ಪ್ರಾತಃಕಾಲ ಅರ್ಧ ಘಂಟೆ ಸಾಯಂಕಾಲ ಅರ್ಧ ಘಂಟೆ ಈ ಪ್ರಾ ಯಾಮವನ್ನು ಅಭ್ಯಾಸಮಾಡಬೇಕು.

" **ಬಾಹ್ಯಾಭ್ಯಂತರಸ್ತಂಭವೃತ್ತಿಃ ದೇಶಕಾಲಸಂಖ್ಯಾಭಿಃ ಪ ದೃಷ್ಟೋ ದೀರ್ಘಃ ಸೂಕ್ಷ್ಮಃ ||** " ಎಂಬ ಯೋಗಸೂತ್ರದಂತೆ ಪ್ರಾ ಯಾಮವು ಹೊರಗಿನಿಂದ ಒಳಗೆಳೆದುಕೊಳ್ಳುವ ಪೂರಕವೆಂದೂ, ಒಳಗಿನಿ ಹೊರಗೆ ಬಿಡುವ ರೇಚಕವೆಂದೂ, ಶ್ವಾಸಕೋಶಗಳಲ್ಲಿಯೇ ಶ್ವಾಸವ ನಿಲ್ಲಿಸುವ ಅಥವಾ ಶ್ವಾಸಕೋಶಗಳಿಗೆ ಶ್ವಾಸವು ಪ್ರವೇಶಿಸದಂತೆ ತಡೆಯು ಕುಂಭಕವೆಂದೂ, ಮೂರು ಬಗೆ. ಇವು ಪುನಃ ದೇಶಕಾಲಗಳ ಭೇದದಿ ವ್ಯತ್ಯಾಸವಾಗುತ್ತವೆ. ದೇಶವೆಂಬುದರಿಂದ ಪ್ರಾಣವನ್ನು ದೇಹದಲ್ಲಿ ಯಾ ದಾದರೊಂದು ಚಕ್ರದಲ್ಲಿ ನಿಲ್ಲಿಸುವುದು. ಕಾಲವೆಂಬುದರಿಂದ ರೇಚಕಾದಿಗ ಎಷ್ಟು ಮಾತ್ರೆಗಳ ಕಾಲ ನಡೆಯಬೇಕೆಂಬ ವಿಚಾರವು. ಪ್ರಾಣಾಯಾಮ ಫಲವು 'ಉದ್ಘಾತವು' ಅಥವಾ ಕುಂಡಲಿನೀ ಉತ್ಥಾಪನೆಯು. ಎಷ್ಟು ಮಾ ಗಳ ಕಾಲವಲ್ಲಿ ಪೂರಕಾದಿಗಳನ್ನು ಮಾಡಬೇಕೆಂಬ ವಿಚಾರದಲ್ಲಿ ಭಿನ್ನಾ ಪ್ರಾಯಗಳಿವೆ. ಆದ್ದರಿಂದ ಗುರುಮುಖದಿಂದ ತಿಳಿದು ತನ್ನ ಗುರುವು ತನ ಹೇಳಿದಂತೆ ಯೋಗಿಯು ಅಭ್ಯಾಸಮಾಡಬೇಕು. ಉಸಿರಿನ ಜೊತೆಗೆ ಬ ಮಾತ್ರೆಗಳನ್ನು (ಒಂದು ಮಾತ್ರಾ ಕಾಲವೆಂದರೆ ಒಂದಂಕೆಯನ್ನು ಎಣಿಸುವ ಕಾಲ ಅಥವಾ ಒಂದು ಸೆಕೆಂಡ್) ಎಣಿಸುವುದಕ್ಕಿಂತ ಗುರೂಪದಿಷ್ಟವಾ ಮಂತ್ರವನ್ನು ಉಸಿರಿನ ಜೊತೆಗೆ ಸೇರಿಸಿಕೊಂಡು ರೇಚಕ ಪೂರಕಾದಿಗ ಎಷ್ಟೆಷ್ಟು ಮಾತ್ರಾಕಾಲವಾಯಿತೆಂದು ತಿಳಿಯುವುದು ಉತ್ತಮ. " **ತ ವಾಚಕಃ ಪ್ರಣವಃ** " ಎಂಬ ಯೋಗಸೂತ್ರದಂತೆ ಪ್ರಣವವೇ ಪರಮಾ

ರೇಚಕವಾದುದರಿಂದ ಉಸಿರಿನ ಜೊತೆಗೆ ಪ್ರಣವಮಂತ್ರವನ್ನು ಸೇರಿಸಿಕೊಂಡು ಮಾತ್ರಾಕಾಲವನ್ನು ನೆನಪಿನಲ್ಲಿಟ್ಟುಕೊಳ್ಳಬಹುದು.

ಕೆಲವು ಕಾಲ (2-3 ತಿಂಗಳು) ಕುಂಭಕವಿಲ್ಲದ ಬರೀ ರೇಚಕ ಪೂರಕ ಪ್ರಾಣಾಯಾಮವನ್ನು ಮಾಡುವುದರಿಂದ ದೇಹದಲ್ಲಿರುವ ನಾಡಿಗಳೆಲ್ಲಾ ಶುದ್ಧವಾಗಿ ಮನಸ್ಸೂ ಪ್ರಫುಲ್ಲವಾಗುವುದರಿಂದ ಇದಕ್ಕೆ ನಾಡೀಶುದ್ಧಿ ಪ್ರಾಣಾಯಾಮವೆಂದು ಹೆಸರು.

ಇನ್ನು ರೇಚಕ ಪೂರಕ ಪೂರ್ವಕವಾದ ಕುಂಭಕ ಪ್ರಾಣಾಯಾಮವನ್ನು ವಿಚಾರಮಾಡೋಣ. ಇಡಾ ನಾಡಿಗೆ ಚಂದ್ರನಾಡಿಯೆಂದೂ, ಪಿಂಗಳಾ ನಾಡಿಗೆ ಸೂರ್ಯನಾಡಿಯೆಂದೂ ಹೆಸರು. ಎಡಮೂಗು ಎಡಭಾಗವೆಲ್ಲಾ ಇಡಾ ನಾಡಿಗೇ ಸಂಬಂಧಪಟ್ಟಿರುವುದು ಬಲ ಮೂಗು ಬಲಭಾಗವೆಲ್ಲಾ ಪಿಂಗಳಾ ನಾಡಿಗೆ ಸಂಬಂಧಪಟ್ಟಿರುವುದು. ಮೊದಲಿನಂತೆ ಇಡೆಯಿಂದ ರೇಚಕ ಮಾಡಿ ಇಡೆಯಿಂದಲೇ ಪೂರಕ ಮಾಡಬೇಕು. ಪೂರಕವು ಪೂರ್ಣವಾದ ಕೂಡಲೇ ಎರಡು ಮೂಗನ್ನೂ ಮುಚ್ಚಿ ಹಿಡಿದು ಉಸಿರನ್ನು ಒಳಗೇ ತಡೆದು ನಿಲ್ಲಿಸಿಕೊಂಡು ಕುಂಭಕ ಮಾಡಬೇಕು. ಶ್ವಾಸಕೋಶದ ಮಾಂಸಖಂಡಗಳಿಗೆ ಅಭ್ಯಾಸಬಲದಿಂದ ಕ್ರಮಕ್ರಮವಾಗಿ ಶ್ವಾಸಧಾರಣಾಶಕ್ತಿಯು ಬೆಳೆಯುವವರೆಗೆ ಹೆಚ್ಚು ಶ್ರಮವಿಲ್ಲದೇ ಎಷ್ಟು ಮಾತ್ರೆಗಳ ಕಾಲ ಉಸಿರನ್ನು ನಿಲ್ಲಿಸಲು ಸಾಧ್ಯವೋ ಅಷ್ಟೇ ಕಾಲ ಕುಂಭಕ ಮಾಡಬೇಕು. ಶ್ವಾಸಕೋಶದ ಧಾರಣಾ ಶಕ್ತಿಯನ್ನು ಗಮನಿಸದೇ ಆರಂಭಶೂರತ್ವದಿಂದಲೂ ಅತ್ಯುತ್ಸಾಹದಿಂದಲೂ ತನ್ನ ಮಿತಿಯನ್ನು ಮೀರಿ ಕುಂಭಕ ಮಾಡಿದರೆ ಬಹಳ ಅಪಾಯವಾಗುತ್ತದೆ.

ಕುಂಭಕವಾದ ನಂತರ ಎಡ ಮೂಗನ್ನು ಮುಚ್ಚಿ ಹಿಡಿದು ಬಲ ಮೂಗಿನಿಂದ ಅಥವಾ ಪಿಂಗಳೆಯಿಂದ ರೇಚಕ ಮಾಡಬೇಕು. ರೇಚಕವಾದೊಡನೆಯೇ ಎರಡು ಮೂಗನ್ನೂ ಒತ್ತಿ ಹಿಡಿದು ಉಸಿರನ್ನು ಒಳಗೆ ಎಳೆದುಕೊಳ್ಳದೇ ಸಾಧ್ಯವಾದಷ್ಟು ಕಾಲ ಹೊರಗೇ ನಿಲ್ಲಿಸಬೇಕು. ಇದು ಬಾಹ್ಯ ಕುಂಭಕ. ಬಾಹ್ಯ ಕುಂಭಕಕ್ಕಿಂತಲೂ ಅಂತಃಕುಂಭಕದಲ್ಲಿ ಅಪಾಯವು ಹೆಚ್ಚು. ಬಲಗಡೆಯಲ್ಲಿ ಬಾಹ್ಯಕುಂಭಕವಾದೊಡನೆಯೇ ಬಲಗಡೆ ಮೂಗಿನಿಂದಲೇ ಪೂರಕ ಮಾಡಬೇಕು. ಅನಂತರ ಒಳಗೆ ಕುಂಭಕ ಮಾಡಿ ಎಡದಿಂದ ರೇಚಕಮಾಡಬೇಕು.

ಕೂಡಲೇ ಎಡದಲ್ಲಿಯೇ ಹೊರಗಡೆ ಕುಂಭಕ ಮಾಡಬೇಕು. ಇದು ರೇಚಕ-ಪೂರಕ-ಕುಂಭಕಗಳು ಕೂಡಿದ ಒಂದು ಪ್ರಾಣಾಯಾಮವಾಯಿತು.

ರೇಚಕದಲ್ಲಿಯೂ ಪೂರಕದಲ್ಲಿಯೂ ಕುಂಭಕದಲ್ಲಿಯೂ ಮಾನಸಿಕವಾಗಿ ಮಂತ್ರೋಚ್ಚಾರಣೆ ಮಾಡುತ್ತಾ ಮಾತ್ರಾಕಾಲವನ್ನು ತಿಳಿದು ಪ್ರಾಣಾಯಾಮ ಮಾಡಬೇಕು. ಗಾಯತ್ರೀ ಮಂತ್ರವನ್ನೋ ಪ್ರಣವ ಮಂತ್ರವನ್ನೋ ಪ್ರಾಣಾಯಾಮದಲ್ಲಿ ಉಪಯೋಗಿಸಿಕೊಳ್ಳಬಹುದು ಯಾವುದಕ್ಕೂ ಗುರೂಪದೇಶವು ಬೇಕು.

ಮೊದಲಿಂದಲೂ ಪೂರಕಾದಿಗಳು ಸಮಸಮ ಪ್ರಮಾಣದಿಂದ ನಡೆಯುತ್ತಾ ಸಾವಕಾಶವಾಗಿ ಬೆಳೆಯುತ್ತಾ ಹೋಗಬೇಕೆಂದು ಸ್ವಾಮಿ ರಾಮತೀರ್ಥರು ಹೇಳುವರು. ಅಂದರೆ ಪೂರಕವಷ್ಟು ಕಾಲವೇ ಕುಂಭಕವೂ ರೇಚಕವೂ ನಡೆಯಬೇಕು. ಪೂರಕದ ಕಾಲವನ್ನು ಹೆಚ್ಚಿಸಿದರೆ ಅಷ್ಟೇ ಕಾಲ ಕುಂಭಕ-ರೇಚಕಗಳನ್ನೂ ಹೆಚ್ಚಿಸಬೇಕು. ಶ್ವಾಸಗತಿಯು ಸಮಕಾಲವಾಗಿ ನಡೆಯುತ್ತಾ ಬಂದಂತೆ, ಶರೀರದ ಸಕಲ ಕ್ರಿಯೆಗಳೂ ಸಮಕಾಲವಾಗಿಯೂ ಸುಸ್ವರಸಮ್ಮೇಳನದಂತೆಯೂ ನಡೆಯುತ್ತಾ ಬಂದು, ಮನಸ್ಸು ಬುದ್ಧಿಯಾಗಿ ಪರಿವರ್ತನೆ ಹೊಂದಿದಾಗ, ವಿದ್ಯುಚ್ಛಕ್ತಿಯಂತಹ ಉನ್ಮನೀ ಶಕ್ತಿಯು ಯೋಗಿಯಲ್ಲಿ ಪ್ರತೀತಿಯಾಗುತ್ತದೆ. ಪೂರಕ ಮಾಡುವಾಗ ಒಳಗೆ ಪ್ರವಹಿಸುತ್ತಿರುವ ಪ್ರಾಣವು ಮೂಲಾಧಾರಕ್ಕೆ ಹೋಗಿ ತಾಕಿ, ಸುಷುಮ್ನೆಯ ದ್ವಾರವನ್ನು ತೆರೆಸಿ ಕುಂಡಲಿನೀ ಶಕ್ತಿಯನ್ನು ಎಚ್ಚರಿಸಿ, ಸುಷುಮ್ನೆಯ ದ್ವಾರದಿಂದ ಮೇಲಕ್ಕೇರಿಸುವಂತೆ ಭಾವಿಸಬೇಕು. ಪ್ರಾಣಪ್ರವಾಹವೂ ಚಿತ್ತವೃತ್ತಿ ಪ್ರವಾಹವೂ ಇಡಾಪಿಂಗಳೆಗಳನ್ನು ಬಿಟ್ಟು ಸುಷುಮ್ನೆಯಲ್ಲಿ ಪ್ರವಹಿಸುವಂತಾಗಬೇಕು. ಇದಕ್ಕೆ ಪ್ರಾಣಾಯಾಮದೊಡನೆ ಭಾವನಾಬಲವೂ ಬಹಳ ಸಹಾಯವಾಗುತ್ತದೆ.

ಯೋಗಿಗೆ ಮಾತ್ರ ಸುಷುಮ್ನೆಯು ತೆರೆಯುತ್ತದೆ. ಸುಷುಮ್ನಾ ಪ್ರವಾಹವು ಮೇಲೇರುವುದಕ್ಕೆ ಪ್ರಾರಂಭಿಸಿದರೆ ಯೋಗಿಯ ಮನಸ್ಸು ಇಂದ್ರಿಯಗಳನ್ನೂ ಸಾಮಾನ್ಯ ಜ್ಞಾನವನ್ನೂ ಬುದ್ಧಿಯನ್ನೂ ಮೀರಿ ತರ್ಕಕ್ಕೆ ಸಿಲುಕದ ಸ್ಥಾನಕ್ಕೆ ಸೇರುತ್ತದೆ. ಪ್ರಾಣಾಯಾಮದ ಅಭ್ಯಾಸದಿಂದ ಮೊದಲು ಮುಖಭಾವವು ಉಲ್ಲಸಿತವೂ ತೇಜಸ್ವಿಯೂ ಆಗುತ್ತದೆ. ಕಾಠಿಣ್ಯವೂ ಕಠೋರ

ಭಾವವೂ ಮಾಯವಾಗಿ ಶಾಂತಭಾವವು ಮುಖದಲ್ಲಿ ಮಿನುಗುತ್ತದೆ. ಕಂಠದ ಸ್ವರವು ಇಂಪಾಗುತ್ತದೆ. ದೂರಶ್ರವಣ ದೂರದರ್ಶನಾದಿ ಸಿದ್ಧಿಗಳು ಕ್ರಮ ಕ್ರಮವಾಗಿ ಬರುತ್ತವೆ. ಯೋಗಿಯ ಚಿತ್ತವು ಏಕಾಗ್ರವಾಗಿ ಅತೀಂದ್ರಿಯವೂ ಅಪಾರವೂ ಆದ ಆನಂದವನ್ನು ಅನುಭವಿಸುತ್ತಾನೆ.

ಪ್ರಾಣಾಯಾಮಕ್ಕೆ ಪೂರ್ವಸಿದ್ಧತೆಗಾಗಿಯೂ ದೇಹದ ವಾತಾದಿ ಮಲ ಗಳನ್ನು ಕಳೆಯುವುದಕ್ಕಾಗಿಯೂ ಹಠಯೋಗಪ್ರದೀಪಿಕೆಯಲ್ಲಿ ಬಸ್ತಿ ಧೌತಿ ಮೊದಲಾದ ಷಟ್ಕರ್ಮಗಳನ್ನು ಹೇಳಿದೆ. ದೇಹದಲ್ಲಿ ಸ್ಥೌಲ್ಯವುಳ್ಳವರು ಇವು ಗಳನ್ನು ಹೆಚ್ಚಾಗಿ ಅಭ್ಯಾಸಮಾಡಬೇಕು. **"ವಪುಃ ಕೃಶತ್ವಂ ವದನೇ ಪ್ರಸನ್ನತಾ"** ಶರೀರದ ಕೃಶತ್ವವೂ ಮುಖದ ಪ್ರಸನ್ನತೆಯೂ ಯೋಗ ಸಾಧನದ ಲಕ್ಷಣ. ಬಸ್ತಿ ಮೊದಲಾದ ಸಾಧನಗಳೂ, ಮಿತಾಹಾರವೂ, ಪ್ರಾಣಾ ಯಾಮವೂ, ಶರೀರವು ಆರೋಗ್ಯವಾಗುವುದಕ್ಕೂ. ಕೃಶವಾಗುವುದಕ್ಕೂ, ಲಘು ವಾಗುವುದಕ್ಕೂ ಮುಖವು, ಪ್ರಸನ್ನವಾಗುವುದಕ್ಕೂ, ಸಾಧನವಾಗಿವೆ.

ಪ್ರಾಣಾಯಾಮ ಸಾಧನವು ವೀರ್ಯವತ್ತರವೂ ಶೀಘ್ರಸಿದ್ಧಿದಾಯಕವೂ ಆಗುವುದಕ್ಕಾಗಿ ಮೂಲ ಬಂಧ, ಉಡ್ಡಿಯಾನ ಬಂಧ, ಜಾಲಂಧರ ಬಂಧ ಎಂಬ ಮೂರು ಬಂಧಗಳನ್ನು ಹಠಯೋಗದಲ್ಲಿ ಹೇಳಿದೆ. ಇವುಗಳಲ್ಲದೆ ಇವು ಗಳ ಜೊತೆಗೆ ಮುದ್ರಾದಿಗಳ ಸಾಧನೆಯನ್ನೂ ಹೇಳಿದೆ.

**ಮೂಲಬಂಧ :—**

ಪ್ರಾಣಾಯಾಮ ಮಾಡುವ ಸಮಯದಲ್ಲಿ ಮೂಲಬಂಧವನ್ನು ಪ್ರಾತ್ರ ಆರಂಭದಿಂದ ಕೊನೆಯವರೆಗೂ ದೃಢವಾಗಿ ಹಾಕಿಯೇ ಇರಬೇಕು. ಗುದದ ಸ್ವಲ್ಪ ಮೇಲುಭಾಗವನ್ನು ದೃಢವಾಗಿ ಸಂಕೋಚನ ಮಾಡುವುದೇ ಮೂಲ ಬಂಧವಾಗಿದೆ. ಈ ಮೂಲಬಂಧದಿಂದ ಅಪಾನ ತತ್ತ್ವವು ಮೇಲುಗಡೆಗೆ ಆಕರ್ಷಿತವಾಗುತ್ತದೆ. ಮೂಲಬಂಧವು ದೃಢವಾದರೆ ಮಲಮೂತ್ರ ವಿಸ ರ್ಜನೆಯೂ ನಿಯಮಿತ ರೀತಿಯಿಂದ ಆಗುತ್ತದೆ. ಮಲಾವರೋಧವಾಗುವು ದಿಲ್ಲ. ರಕ್ತಾಭಿಸರಣವೂ ಬಲವಾಗಿ ನಾದವು ಬಿಚ್ಚಿ ಚಿಮ್ಮಿದಂತಾಗುತ್ತದೆ. ನಾಡಿಗಳ ಮಲದೋಷವೂ ನಿವಾರಣೆಯಾಗುತ್ತದೆ. ಕುಂಡಲಿನೀ ಜಾಗ್ರತ

ವಾಗಿ ಅಪಾನವು ಪ್ರಾಣದೊಡನೆ ಸೇರಿ ಮಸ್ತಕಕ್ಕೆ ಏರತೊಡಗುತ್ತದೆ
ಮೂಲಬಂಧವೊಂದು ಶಿಥಿಲವಾದರೆ ಶ್ವಾಸಕೋಶಗಳಿಗೆ ಆಘಾತವಾಗಿ ಅ
ನಿರ್ಬಲವಾಗುತ್ತಾ ಹೋಗಬಹುದು. ಕಮಾನು ಸೇತುವೆಯ ಕಟ್ಟಡದ
ಮಧ್ಯದ ಕೀಲುಕಲ್ಲು ಒಂದು ಕಳಚಿದರೆ ಹೇಗೆ ಸೇತುವೆಯೇ ಮುರಿದ
ಬೀಳುತ್ತದೆಯೋ ಹಾಗೆ ಪ್ರಾಣಾಯಾಮ ಸಾಧನದಲ್ಲಿ ಮೂಲಬಂಧದ ಮಹತ್ತ
ವಿದೆ. ಈ ಮೂಲಬಂಧವು ದೋಷಯುಕ್ತವಾದುದಾದರೆ ಶ್ವಾಸಕೋಶವು
ಶರೀರವೂ ಕೆಡುತ್ತವೆ. ಮಲಾವರೋಧವಾಗಿ ಮಲವು ಕುರಿಗಳ ಹಿಕ್ಕೆ
ಯಂತೆ ಆಗುತ್ತದೆ.

**ಜಾಲಂಧರ ಬಂಧ :—**

ಪೂರಕ ಮಾಡಿದ ಕೂಡಲೇ ಜಾಲಂಧರ ಬಂಧವನ್ನು ಮಾಡಬೇಕು
ತಲೆಯನ್ನು ಬಗ್ಗಿಸಿ ಗಡ್ಡವನ್ನು ಎದೆ ಮತ್ತು ಕಂಠಗಳ ಸಂಧಿಸ್ಥಾನದಲ್ಲಿ
ವಿಶುದ್ಧಚಕ್ರವನ್ನು ಚೆನ್ನಾಗಿ ಒತ್ತಿ ಚಾಲನ ಮಾಡುವಂತೆ, ಹತ್ತಿಡಬೇಕು
ಇದೇ ಜಾಲಂಧರ ಬಂಧ. ಇದನ್ನು ಚೆನ್ನಾಗಿ ಹಾಕುವುದರಿಂದ ಕಂಠದಲ್ಲಿರು
ಶ್ವಾಸಮಾರ್ಗವೂ ನಿರೋಧವಾಗುತ್ತದೆ. ಇದರಿಂದ ಕುಂಭಕ ಮಾಡಿದಾ
ಶ್ವಾಸಕೋಶಗಳಿಂದ ಮೇಲುಭಾಗಕ್ಕೆ ವಾಯುವು ಏರಿ ಆಘಾತಮಾಡುವುದಿಲ್ಲ
ಕುಂಭಕದಿಂದ ಮಸ್ತಕಕ್ಕೆ ವಾಯುವಿನ ಆಘಾತವಾಗದಂತೆಯೂ ಜ್ಞಾನತಂತ
ಗಳೆಲ್ಲಾ ಬಲಪಡುವಂತೆಯೂ ಜಾಲಂಧರ ಬಂಧವು ರಕ್ಷಣಮಾಡುತ್ತದೆ
ಜಾಲಂಧರವು ಸರಿಯಾಗಿಲ್ಲವಾದರೆ ಕಣ್ಣು, ಕಿವಿ, ಮೂಗು, ಕಂಠ ಮತ್ತ
ತಲೆ ಮೊದಲಾದ ಅವಯವಗಳಿಗೆ ತೊಂದರೆಯಾಗಿ ವಾತಪ್ರಕೋಪಜನ್ಯವಾ
ವ್ಯಾಧಿಗಳು ಬರುತ್ತವೆ. ಇದರ ಅಭ್ಯಾಸವನ್ನು ಎರಡು ನಿಮಿಷಗಳಿಂದ ಆರಂ
ಮಾಡಿ ಸ್ವಲ್ಪಸ್ವಲ್ಪವಾಗಿ ಹೆಚ್ಚಿಸಬೇಕು.

**ಉಡ್ಡಿಯಾನ ಬಂಧ :—**

ಕುಂಭಕವು ಮುಗಿದ ನಂತರ ರೇಚಕ ಮಾಡುವುದಕ್ಕೆ ಮುಂಚೆ ಉಡ್ಡಿ
ಯಾನ ಬಂಧವನ್ನು ಹಾಕಿ ಜಾಲಂಧರವನ್ನು ಬಿಚ್ಚಬೇಕು. ಉದರದಲ್ಲಿರು
ಕರುಳುಗಳನ್ನು ಸಂಕೋಚಮಾಡುವುದೇ ಉಡ್ಡಿಯಾನ ಬಂಧ ಅಂತ

ಂಕೋಚನದಿಂದ ಶ್ವಾಸಕೋಶಗಳೂ ಸಂಕೋಚವಾಗುತ್ತಾ ಹೋಗಿ ಶ್ವಾಸ ೋಶಗಳು ಬಲವಾಗುತ್ತವೆ. ತ್ರಿಧಾತು ವಿಕಾರಗಳಿಂದ ಉತ್ಪನ್ನವಾದ ಸಮಸ್ತ ೋಗಗಳೂ ಈ ಬಂಧದಿಂದ ನಷ್ಟವಾಗುತ್ತವೆ. ತ್ರಿಧಾತುಗಳೂ ಸಮತಾವಸ್ಥೆಗೆ ುತ್ತವೆ. ಸುಷುಮ್ನಾ ಮಾರ್ಗವು ಶುದ್ಧವಾಗಿ ಪ್ರಾಣವು ಊರ್ಧ್ವಗಾಮಿ ಾಗುತ್ತದೆ. ಉಡ್ಡಿಯಾನ ಬಂಧವನ್ನು ಶಾಸ್ತ್ರಕಾರರು "**ಮೃತ್ಯುಮಾತಂಗ ೇಸರೀ**" "ಮೃತ್ಯುವೆಂಬುವ ಆನೆಯನ್ನು ಸಂಹಾರಮಾಡುವ ಸಿಂಹ" ಂದು ಹೇಳಿದ್ದಾರೆ. ಮೂರು ಬಂಧಗಳಲ್ಲಿ ಉಡ್ಡಿಯಾನ ಬಂಧವೇ ಶ್ರೇಷ್ಠ ದುದು. ಉಡ್ಡಿಯಾನ ದೋಷಯುಕ್ತವಾದುದಾದರೆ ಶ್ವಾಸಕೋಶಗಳೂ ಮಾಶಯವೂ ನಿರ್ಬಲವಾಗುತ್ತವೆ.

ಹೀಗೆ ಪ್ರಾಣಾಯಾಮದಲ್ಲಿ ಈ ಮೂರೂ ಬಂಧಗಳ ಉಪಯೋಗವಿರು ದರಿಂದ ಗುರುಮುಖದಿಂದ ಆರಂಭದಲ್ಲಿಯೇ ಇವುಗಳನ್ನು ಕಲಿಯಬೇಕು. ೀ ಶಂಕರಾಚಾರ್ಯರು ತಮ್ಮ ಯೋಗತಾರಾವಳಿಯಲ್ಲಿ,

**ಬಂಧತ್ರಯೇಽಸ್ಮಿನ್ ಪರಿಚೀಯಮಾನೇ ।**
**ಬಂಧಃಕುತೋಽನ್ಯೋ ದಾರುಣಕಾಲಪಾಶಾತ್ ॥**

ಮೂಲ-ಜಾಲಂಧರ-ಉಡ್ಡಿಯಾನಗಳೆಂಬ ಬಂಧತ್ರಯಗಳನ್ನು ಚೆನ್ನಾಗಿ ಭ್ಯಾಸಮಾಡಿದವನಿಗೆ ಭಯಂಕರವಾದ ಮೃತ್ಯುಪಾಶಬಂಧವೆಲ್ಲಿಯದು ?" ಂದು ಹೇಳಿದ್ದಾರೆ.

ಬ್ರಹ್ಮಚರ್ಯಪಾಲನೆಗೆ ವೀರ್ಯರಕ್ಷಣ ಮಾಡುವುದಕ್ಕಾಗಿ ಹಠಯೋಗ ಲ್ಲಿ ವಜ್ರೋಳಿ ಸಾಧನೆಯಿದೆ. ಹಠಯೋಗದಲ್ಲಿ ಸೂರ್ಯಭೇದಿನೀ ಶೀತಲೀ ಾದಲಾದ ಎಂಟು ಬಗೆಯ ಪ್ರಾಣಾಯಾಮಗಳಿವೆ. ಎಲ್ಲಾ ಪ್ರಾಣಾ ಾಮಗಳಲ್ಲಿಯೂ ಪೂರಕ-ರೇಚಕಗಳಿಲ್ಲದ ಕೇವಲ ಕುಂಭಕವೇ ಶ್ರೇಷ್ಠ ದುದು.

**ರೇಚಕಂ ಪೂರಕಂ ತ್ಯಕ್ತ್ವಾ ಸುಖಂ ಯದ್ವಾಯುಧಾರಣಂ ।**
**ಪ್ರಾಣಾಯಾಮೋಽಯಮಿತ್ಯುಕ್ತಃ ಸರ್ವೈಃ ಕೇವಲಕುಂಭಕಃ ॥**

**ಕೇವಲೇ ಕುಂಭಕೇ ಸಿದ್ಧೇ ರೇಚಕ ಪೂರಕವರ್ಜಿತೇ |**
**ನ ತಸ್ಯ ದುರ್ಲಭಂ ಕಿಂಚಿತ್ ತ್ರಿಷುಲೋಕೇಷು ವಿದ್ಯತೇ ||**
(ವಸಿಷ್ಠ ಸಂಹಿತ

"ರೇಚಕ ಪೂರಕಗಳನ್ನು ಬಿಟ್ಟು ತಾನೇತಾನಾಗಿ ಸುಖವಾಗಿ ನಿಲ್ಲುವ ಪವ ಗತಿ ಯಾವುದೋ ಅದೇ ಕೇವಲಕುಂಭಕ. ಕೇವಲಕುಂಭಕವು ಸಿದ್ಧಿಯಾದ ಮೂರು ಲೋಕಗಳಲ್ಲಿ ಆ ಯೋಗಿಗೆ ದುರ್ಲಭವಾದುದೇ ಇಲ್ಲ" ಎಂದ ವಸಿಷ್ಠಸಂಹಿತೆಯಲ್ಲಿ ಹೇಳಿದೆ. ಶ್ರೀ ಶಂಕರಾಚಾರ್ಯರೂ ಯೋಗತಾರಾವ ಯಲ್ಲಿ,

**ಬಂಧತ್ರಯಾಭ್ಯಾಸ ವಿಪಾಕಜಾತಾಂ |**
**ವಿವರ್ಜಿತಾಂ ರೇಚಕ ಪೂರಕಾಭ್ಯಾಂ ||**
**ವಿಶೋಷಯಂತೀಂ ವಿಷಯಪ್ರವಾಹಂ |**
**ವಿದ್ಯಾಂ ಭಜೇ ಕೇವಲಕುಂಭರೂಪಾಂ ||**

"ಬಂಧತ್ರಯಗಳನ್ನು ಅಭ್ಯಾಸಮಾಡಿದ ಫಲರೂಪವಾಗಿಯೂ ರೇಚಕಪೂರ ರಹಿತವಾಗಿಯೂ ವಿಷಯವಾಸನಾ ಪ್ರವಾಹವನ್ನು ಬತ್ತಿಸುವುದಾಗಿಯ ಇರುವ 'ಕೇವಲಕುಂಭಕ'ವೆಂಬ ವಿದ್ಯೆಯನ್ನು ಭಜಿಸುತ್ತೇನೆ" ಎಂದು ಹೇ ದ್ದಾರೆ. ಪುನಃ ಆಚಾರ್ಯರೇ "ಬಂಧತ್ರಯಪೂರ್ವಕವಾದ ಪ್ರಾಣಾಯಾವ ವನ್ನು ರೇಚಕಾದಿಗಳಿಂದ ಅಭ್ಯಾಸಮಾಡುವುದರಿಂದಲೂ, ಪ್ರಾಣವೂ ಮನಸ್ ಅನಾಹತನಾದದಲ್ಲಿ ಲೀನವಾಗುವುದರಿಂದಲೂ, ಶ್ರೇಷ್ಠವಾದ ಕೇವಲಕುಂಭಕ ಸಿದ್ಧಿಯಾಗುವುದು" ಎಂದು ಹೇಳಿದ್ದಾರೆ.

ಪ್ರಾಣಾಯಾಮ ಸಾಧನದಿಂದ ಮುಖವು ಪ್ರಸನ್ನವಾಗಿಯೂ ಕಣ್ಣುಗಳ ತೇಜಃಪುಂಜವಾಗಿಯೂ ಅಂತರ್ಲಕ್ಷ್ಯವುಳ್ಳದಾಗಿಯೂ ಆಗುವುವು. ಶರೀರ ಆರೋಗ್ಯವಾಗುವುದು. ನಾಡಿಗಳು ಶುದ್ಧವಾಗಿ ನಾದಾನುಸಂಧಾನವಾಗ ವುದು. ಜಠರಾಗ್ನಿಯು ಪ್ರಜ್ವಲನವಾಗುವುದು, ವೀರ್ಯಸ್ತಂಭನವಾಗುವುದ

ಪ್ರಾಣಾಯಾಮದಿಂದ ಬೆವರು ಉಂಟಾದರೆ ಪ್ರಾಥಮಿಕ ಲಕ್ಷಣವೆಂದೂ ಕಂಪನವುಂಟಾದರೆ ಮಧ್ಯಮಸಿದ್ಧಿಯೆಂದೂ, ಭೂಮಿಯಿಂದ ಉತ್ಥಾನವುಂಟ ದರೆ ಉತ್ತಮವೆಂದೂ ಯಾಜ್ಞವಲ್ಕ್ಯರು ಹೇಳಿರುವರು.

ನಿದ್ರಾತಂದ್ರಾದಿ ದೋಷಗಳುಳ್ಳವರೂ ಪ್ರಬಲ ವಾಸನೆಗಳಿಂದ ಬಹಳ ಚಲ ಮನಸ್ಸುಳ್ಳವರೂ ರೇಚಕ ಪೂರಕ ಕುಂಭಕಗಳನ್ನು ಮಾಡಬೇಕು. ದೋಷಗಳಿಲ್ಲದೆ ಸ್ವಭಾವದಿಂದ ಶಾಂತಮನಸ್ಕರಾದವರು ಕೇವಲಕುಂಭಕ ನ್ನು ಮಾಡಬಹುದು. ಇಂಥಾ ದೈವೀ ಸಂಪತ್ತುಳ್ಳವರು ಪ್ರತ್ಯಾಹಾರ ದಲೇ ಯೋಗಸಾಧನೆಯನ್ನು ಪ್ರಾರಂಭಿಸಬಹುದು. ಪ್ರತ್ಯಾಹಾರವೇ ನೆಯ ಯೋಗಾಂಗವು.

## ಪ್ರತ್ಯಾಹಾರ

**" ಸ್ವ ವಿಷಯಾ ಸಂಪ್ರಯೋಗೇ ಚಿತ್ತಸ್ವರೂಪಾನುಕಾರ ಪೇಂದ್ರಿಯಾಣಾಂ ಪ್ರತ್ಯಾಹಾರಃ "** ಎಂಬ ಯೋಗಸೂತ್ರದಂತೆ ವಿಷಯ ಅಭಿರುಚಿಯನ್ನು ಬಿಟ್ಟು, ಹಿಂದಿರುಗಿದ ಮನಸ್ಸನ್ನು ವಿಷಯಸಂಬಂಧ ನ್ನು ಬಿಟ್ಟ ಇಂದ್ರಿಯಗಳೂ ಹಿಂಬಾಲಿಸುವುದೇ ಪ್ರತ್ಯಾಹಾರ. ಹಿಂದೆ ಳಿರುವಂತೆ ಹೊರಗಡೆಯ ಇಂದ್ರಿಯಗಳು, ಮೆದುಳಿನಲ್ಲಿರುವ ಇಂದ್ರಿಯ ಂದ್ರಗಳು, ಮನಸ್ಸು ಇಷ್ಟೂ ಕೂಡಿ ಶಬ್ದಾದಿ ಬಾಹ್ಯ ವಿಷಯಗಳ ಸಂಬಂಧ ಂದಿದಾಗ ವಿಷಯಾನುಭವವನ್ನು ಪಡೆಯುತ್ತೇವೆ. ಇಂದ್ರಿಯ ಕೇಂದ್ರಗಳ ಬಂಧವನ್ನು ವಿಷಯಾಕಾರವಾಗದಂತೆ ಮನಸ್ಸನ್ನು ತಡೆದರೆ ಪ್ರತ್ಯಾಹಾರ ಗುತ್ತದೆ. ಇದರಿಂದ ಮನಸ್ಸು ಶಾಂತವಾಗುತ್ತದೆ. ಮನಸ್ಸು ಒಳಗೆ ತ್ಮಾಕಾರವಾಗಿ ಆಗಬೇಕಾದರೆ ಮೊದಲು ಮುಖ್ಯವಾಗಿ ಅದು ಹೊರಗಿನ ಯಾಕಾರವಾಗುವುದನ್ನು ಬಿಡಬೇಕು. ಇದರಿಂದ **" ತತಃ ಪರಮ ಶ್ಯತೇಂದ್ರಿಯಾಣಾಂ "** ಎಂಬ ಯೋಗಸೂತ್ರದಂತೆ ಇಂದ್ರಿಯಗಳ ಶ್ರೇಷ್ಠ ಮವು ಸಾಧ್ಯವಾಗುತ್ತದೆ. ಅಷ್ಟಾಂಗಯೋಗದಲ್ಲಿ ಪ್ರತ್ಯಾಹಾರಾನಂತರ ನೆಯ ಯೋಗಾಂಗವೇ 'ಧಾರಣಾ'.

## ಧಾರಣಾ

**" ದೇಶಬಂಧಶ್ಚಿತ್ತಸ್ಯ ಧಾರಣಾ "** ಎಂಬ ಯೋಗಸೂತ್ರದಂತೆ ಹದ ಒಳಗಾಗಲೀ ಹೊರಗಾಗಲೀ ಒಂದು ವಿಷಯವನ್ನು ಹಿಡಿದು ಮನಸ್ಸು ವುದೇ 'ಧಾರಣಾ' ಎಂಬ ಯೋಗಾಂಗವು.

ದೇಹದಲ್ಲಿ ಸುಷುಮ್ನಾ ನಾಳದಲ್ಲಿರುವ ಮೂಲಾಧ ಹಿಡಿದು ಸಹಸ್ರಾರ ಚಕ್ರದಲ್ಲಿಯಾದರೂ ಮನಸ್ಸನ್ನು ಸಿಲ್ಲಿಸ ಧಾರಣಾ. ದೇಹದ ಹೊರಗೂ ಯಾವ ವಸ್ತುವಿನಲ್ಲಿಯಾದ ಸಿಲ್ಲಿಸಬಹುದು. ಇದೂ ಧಾರಣೆಯು. ಧಾರಣೆಯಲ್ಲಿ ಭಾವನೆ ಬಹಳವಿದೆ. ಯೋಗಶಾಸ್ತ್ರದಲ್ಲಿ ಮೂಲಾಧಾರದಿಂದ ಸಹಸ ಸಪ್ತ ಚಕ್ರಗಳ ವಿವರವಾದ ವರ್ಣನೆಯಿದೆ. ಪ್ರತಿಯೊಂದು ಕಮಲದಳ, ವರ್ಣ, ಲೋಕ, ದಳಗಳ ಅಕ್ಷರ ........... ಮೊ ಹೇಳಲ್ಪಟ್ಟಿವೆ. ಪ್ರತಿಯೊಂದು ಚಕ್ರವೂ ಕಮಲದೋಪಾದಿಯ ಸಂಖ್ಯೆಗಳ ದಳಗಳನ್ನು ಪಡೆದು ತನ್ನ ಕರ್ಣಿಕಾಕೇಂದ್ರವನ್ನು ಹೊಂದಿದೆ. ಈ ಸಪ್ತ ಚಕ್ರಗಳ ಸೂಕ್ಷ್ಮ ಪರಿಚಯವು ಈ ಪ ಪಟ್ಟಿಯಲ್ಲಿದೆ.

## ಧ್ಯಾನಫಲ

ಆಧಾರ ಚಕ್ರದಲ್ಲಿ ಸಂಯಮ ಮಾಡುವುದರಿಂದ ಯೋ ಮನುಷ್ಯಶ್ರೇಷ್ಠ, ಸರ್ವವಿದ್ಯಾವಿನೋದೀ, ಆರೋಗ್ಯಶಾಲಿ, ಕವಿ....ಆಗುತ್ತಾನೆ.

ಸ್ವಾಧಿಷ್ಠಾನ ಚಕ್ರದಲ್ಲಿ ಸಂಯಮ ಮಾಡಿದರೆ ಅಹಂ ನಾಶ, ಯೋಗೀಶ್ವರ, ಮೋಹರಹಿತ, ಗದ್ಯಪದ್ಯರಚನಾ ಸಮ

ಮಣಿಪೂರ ಚಕ್ರದಲ್ಲಿ ಸಂಯಮ ಮಾಡಿದರೆ ರಕ್ಷಣ-ಸಂ ವಚನರಚನಾ ಸಮರ್ಥನಾಗುತ್ತಾನೆ.

ಅನಾಹತ ಚಕ್ರದಲ್ಲಿ ಸಂಯಮ ಮಾಡುವುದರಿಂದ ಸಮರ್ಥ, ಈಶತ್ವಸಿದ್ಧಿಯುಕ್ತ, ಇಂದ್ರಿಯಜಯೀ, ಕವಿ, ಪ ಸಮರ್ಥನಾಗುತ್ತಾನೆ.

ವಿಶುದ್ಧ ಚಕ್ರದಲ್ಲಿ ಧ್ಯಾನಮಾಡಿದರೆ ಕವಿ, ಜ್ಞಾನಿ, ಶಾಂತಚಿತ್ತ, ತ್ರಿಲೋಕದರ್ಶೀ, ಸರ್ವಹಿತಕಾರೀ, ಚಿರಂಜ ಆಗುತ್ತಾನೆ.

ಆಜ್ಞಾಚಕ್ರದಲ್ಲಿ ಸಂಯಮ ಮಾಡುವುದರಿಂದ ವಾಕ್ಯಸಿದ್ಧಿ, ದಿವ್ಯ ದರ್ಶನಗಳು, ಉಪಾಸ್ಯದೇವದರ್ಶನ, ಯೋಗಸಿದ್ಧಿಗಳು........ಮೊದಲಾದುವು ಪ್ರಾಪ್ತಿಯಾಗುತ್ತವೆ.

ಸಹಸ್ರಾರ ಚಕ್ರದಲ್ಲಿ ಸಂಯಮ ಮಾಡುವುದರಿಂದ ಅಮರ, ಮುಕ್ತ, ಉತ್ಪತ್ತಿ-ಪಾಲನ ಸಮರ್ಥ, ಆಕಾಶಗಾಮೀ, ಸಮಾಧಿಸಂಪನ್ನನಾಗುತ್ತಾನೆ.

ಯೋಗಿಯು ಪ್ರಾಣಾಯಾಮಾದಿಗಳಿಂದ ಕುಂಡಲಿನೀ ಶಕ್ತಿಯನ್ನು ಉತ್ಥಾಪನೆ ಮಾಡಿ ಮೂಲಾಧಾರದಿಂದ ಸ್ವಾಧಿಷ್ಠಾನಾದಿ ಚಕ್ರಗಳ ಮೂಲಕ ಸಹಸ್ರಾರ ಚಕ್ರಕ್ಕೆ ಪ್ರವಹಿಸುವಂತೆ ಮಾಡಬೇಕು. ಕುಂಡಲಿನೀ ಶಕ್ತಿಯನ್ನು ಋಷಿಶಿಷ್ಯರಾದ ಮ್ಯಾಡಂ ಬ್ಲ್ಯಾವಟ್ಸ್ಕಿಯವರು Cosmic Electricity ವಿಶ್ವವ್ಯಾಪೀ ವಿದ್ಯುಚ್ಛಕ್ತಿ' ಎಂದಿದ್ದಾರೆ. ಸಂಪೂರ್ಣ ಜಗತ್ತಿನ ಸಂಚಾಲನ ಮಾಡುತ್ತಿರುವುದು ಅವ್ಯಕ್ತವಾದ ಮಹಾ ಕುಂಡಲಿನಿಯಾಗಿದೆ. ವ್ಯಷ್ಟಿಜೀವನ ಸಂಚಾಲನ ಮಾಡುತ್ತಿರುವುದು ವ್ಯಕ್ತಕುಂಡಲಿನೀ ಆಗಿದೆ. ಯೋಗಿಯಲ್ಲಿ ಈ ಶಕ್ತಿಯು ವಲಯಾಕಾರವಾದ ಸರ್ಪದಂತೆ ಚಕ್ರಾಕಾರವಾಗಿ ಪ್ರವಹಿಸುವುದ ರಿಂದ ಇದಕ್ಕೆ ಕುಂಡಲಿನೀ ಶಕ್ತಿಯೆಂದು ಹೆಸರು. ಇದು ಒಂದು ವೈದ್ಯುತ ವಾದ ಅಗ್ನಿಮಯ ಗುಪ್ತಶಕ್ತಿಯಾಗಿದೆ. ಸರ್ವಸ್ಥಾವರ ಜಂಗಮ ಪದಾರ್ಥ ಗಳ ಮೂಲದಲ್ಲಿ ಈ ಮಹಾಶಕ್ತಿಯಿದೆ.

ಆಕಾಶಕ್ಕೆ ಆಘಾತಮಾಡಿ ಸಂಚಲನೆಯನ್ನು ಹುಟ್ಟಿಸುವ ಮಹಾಪ್ರಾಣ ಇಲ್ಲದಿದ್ದರೆ ಆಕಾಶದಿಂದ ಯಾವ ಸೃಷ್ಟಿಯೂ ಆಗುತ್ತಿರಲಿಲ್ಲ. ಮೊದಲಿರು ವುದು ಸ್ಪಂದನ ಅಥವಾ ಚಲನಶಕ್ತಿಯಾಗಿದೆ! ಚಲನವು ಒಂದೇ ದಿಕ್ಕಿನಲ್ಲಿ ಸರಳರೇಖೆಯಲ್ಲಿ ಘನವಾದ ವಸ್ತುಗಳಲ್ಲಿ ಮುಂದರಿದರೆ ಅದು ಭೂತಾಣು ಗಳನ್ನು ಒಟ್ಟಿಗೆ ಒತ್ತಿ ಅಮುಕುತ್ತದೆ. ಅಣುಗಳನ್ನು ಒತ್ತಿಡುವುದರಲ್ಲಿ ಶಾಖವು ಅದೃಶ್ಯ (ಗೂಢ-Latent) ಆಗುತ್ತದೆ. ಏಕೆಂದರೆ ಭೌತವು ರೂಪಾಂತರ ವನ್ನು ಹೊಂದುತ್ತದೆ. ನೀರು ಮಂಜುಗಡ್ಡೆಯಾಗುವಾಗ ನಡೆಯುವಂತೆ. ಮೂಲಭೂತ ತತ್ತ್ವಗಳಲ್ಲಿ ಶಾಖವು ಗೂಢವಾಗುವುದರಿಂದ, ಚಲನದರ್ಶಕ ರೇಖೆಯು ದಿಕ್ಕನ್ನು ಬದಲಾಯಿಸುತ್ತದೆ. ಶಾಖದಲ್ಲಿ ವ್ಯತ್ಯಾಸವಾಗುವುದರಿಂದ ಚಲನದಿಶೆಯಲ್ಲಿಯೂ ವ್ಯತ್ಯಾಸವಾಗುತ್ತದೆ. ಆದ್ದರಿಂದ ಚಲನದರ್ಶಕ

ರೇಖೆಯು ಸರಳವಾಗಿ ಒಂದೇ ದಿಕ್ಕಿಗೆ ಹರಿಯದೆ, ಭಿನ್ನದಿಕ್ಕುಗಳಲ್ಲಿ ಚಲಿಸುವ ಎರಡು ಸಂಯುಕ್ತ ಶಕ್ತಿಗಳ ಫಲಿತವಾಗಿ, ಅನಶ್ವರರೂಪುಗೊಳ್ಳುವ ಸುರುಳಿ ಸುರುಳಿಯಾದ ಕುಂಡಲಿನೀ ಶಕ್ತಿಯು ಪ್ರಸಿದ್ಧ ಸರ್ಪಾಕಾರವಾಗುತ್ತದೆ. ಈ ಚಕ್ರಾಕಾರ ಸರ್ಪಿಣಿಯೇ ವಿಶ್ವಶಕ್ತಿಯ ಗತಿರೂಪಿಣಿಯು. ಈ ಸರ್ಪಿಣೀ ಚಲನದಿಂದಲೇ ಮೂಲಭೂತಗಳ ಉತ್ಪತ್ತಿಯಾಗಿದೆ. ಆದ್ದರಿಂದ ವೈದಿಕರಲ್ಲಿ ಮಾಡುವ ಸರ್ಪಪೂಜೆಯು ವಿಶ್ವಕುಂಡಲಿನೀ ಅಥವಾ ಮಹಾಕುಂಡಲಿನೀ ಶಕ್ತಿಯ ಪೂಜೆಯೇ ಆಗಿದೆ.

ಪ್ರಕಾಶದ ಕಿರಣಗಳೂ ಮತ್ತು ವಿದ್ಯುಚ್ಛಕ್ತಿಯೂ ಒಂದು ಸೆಕೆಂಡಿಗೆ 1,86,000 ಮೈಲಿ ಓಟದ ವೇಗವುಳ್ಳುದಾದರೆ ಕುಂಡಲಿನೀ ಶಕ್ತಿಯ ವೇಗವು ಒಂದು ಸೆಕೆಂಡಿಗೆ 3,45,000 ಮೈಲಿಯಿದೆಯೆಂದು ಮ್ಯಾಡಂ ಬ್ಲೆವಟ್ಸ್ಕಿ ಯವರು ಹೇಳಿದ್ದಾರೆ. ತಂತ್ರಸಾರದಲ್ಲಿ ಹೇಳಿರುವುದೇನೆಂದರೆ,

**ಧ್ಯಾಯೇತ್ ಕುಂಡಲಿನೀಂ ಸೂಕ್ಷ್ಮಾಂ ಮೂಲಾಧಾರ ನಿವಾಸಿನೀಂ |**
**ತಾಮಿಷ್ಟದೇವತಾರೂಪಾಂ ಸಾರ್ಧ ತ್ರಿವಲಯಾನ್ವಿತಾಂ ||**
**ಕೋಟಿ ಸೌದಾಮಿನೀ ಭಾಸಾಂ ಸ್ವಯಂಭೂಲಿಂಗ ವೇಷ್ಟಿನೀಂ |**
**ತಾಮುತ್ಥಾಪ್ಯ ಮಹಾದೇವೀಂ ಪ್ರಾಣಮಂತ್ರೇಣ ಸಾಧಕಃ ||**

"ಸೂಕ್ಷ್ಮರೂಪಿಣಿಯೂ ಮೂಲಾಧಾರ ನಿವಾಸಿನಿಯೂ, ಇಷ್ಟದೇವತಾ ರೂಪಿಣಿಯೂ, ಮೂರೂವರೆ ಸುತ್ತಿನವಳೂ, ಕೋಟಿ ಮಿಂಚುಗಳಂತೆ ಪ್ರಕಾಶ ಮಾನಳಾದವಳೂ, ಮೂಲಾಧಾರದಲ್ಲಿರುವ ಸ್ವಯಂಭೂಲಿಂಗವನ್ನು ಆವರಿಸಿ ಕೊಂಡಿರುವವಳೂ ಆದ ಕುಂಡಲಿನೀ ಮಹಾದೇವಿಯನ್ನು ಸಾಧಕನು ಪ್ರಾಣ ಮಂತ್ರದಿಂದ ಅಥವಾ ಪ್ರಣವಮಂತ್ರದಿಂದ ಎಚ್ಚರಿಸಿ, ಎಬ್ಬಿಸಿ ಧ್ಯಾನಮಾಡ ಬೇಕು."

ಈ ಪ್ರಚಂಡ ಶಕ್ತಿಯ ಪ್ರಜ್ವಲನ–ಉತ್ಥಾಪನೆಗಳನ್ನು ಗುಪ್ತವಿದ್ಯೆಯ ಗುರುಗಳ ಪರಿಣತ ನೇತೃತ್ವದಲ್ಲಿಯೇ ಮಾಡದಿದ್ದರೆ, ಕುಂಡಲಿನಿಯು ಅಧೋ ಮುಖಿಯಾಗಿ ಪ್ರವಹಿಸಿ, ಭೋಗವಾಸನೆಯನ್ನೂ ಜನನೇಂದ್ರಿಯ ಪ್ರವೃತ್ತಿ ಯನ್ನೂ ಬೆಳೆಸಬಹುದು.

ಯಾವಾಗ ಈ ಕುಂಡಲಿನಿಯು ಮೇರು ವಂಶದಲ್ಲಿ (ಬೆನ್ನು ಹುರಿಯಲ್ಲಿ) ಊರ್ಧ್ವಗಾಮಿಯಾಗಿ ಪ್ರವಹಿಸುತ್ತದೆಯೋ ಆಗ, ಒಂದೊಂದು ಚಕ್ರವನ್ನು ಪ್ರಜ್ವಲನಗೊಳಿಸುತ್ತಾ, ಆ ವಿಯಚ್ಚಕ್ರಗಳ ದ್ವಾರಗಳನ್ನು ತೆರೆಸುತ್ತಾ, ಪಾರ ಭೌತಿಕದಿಂದ ಭೌತಿಕ ಜಗತ್ತಿಗೆ ಸುಲಭಗತಿಯನ್ನು ಕಲ್ಪಿಸುತ್ತಾ, ಪಾರಭೌತಿಕ ಸ್ಪಂದನಗಳನ್ನು ನೆಲೆಗೊಳಿಸುತ್ತಾ ಹಾಗೂ ಸರ್ವಯೌಗಿಕ ಶಕ್ತಿಗಳನ್ನೂ ಜಾಗ್ರತಗೊಳಿಸುತ್ತಾ, ಈ ಶರೀರದಲ್ಲಿ ಯೋಗಿಯು ವಿಶಿಷ್ಟ ಜಾಗ್ರತ ಸ್ಥಿತಿ ಯಲ್ಲಿರುವಂತೆ ಮಾಡುತ್ತದೆ

ಬ್ರಹ್ಮವಿದ್ಯಾ ಸಮಾಜದ (ಥಿಯಾಸೊಫಿಕಲ್ ಸೊಸೈಟಿಯ) ಆಚಾರ್ಯಿಣಿಯಾದ ಮ್ಯಾಡಂ ಬ್ಲ್ಯವಟ್ಸ್ಕಿಯವರು ಹೇಳಿರುವುದೇನೆಂದರೆ, " There are three principal centres in man — the heart, the head and the navel. " " ಮನುಷ್ಯನಲ್ಲಿ ಹೃದಯ-ಮಸ್ತಕ-ನಾಭಿಗಳೆಂಬ ಮೂರು ಮುಖ್ಯ ಕೇಂದ್ರಗಳಿವೆ. "

ಸ್ವಾಧಿಷ್ಠಾನ ಮತ್ತು ಮಣಿಪೂರಗಳು ಕುಂಡಲಿನೀ ಮೂಲಕ ಪ್ರಜ್ವಲಿತ ವಾದರೆ " This influence strengthens, rejuvenates, and normalises the life-process " ಇದರ ಪ್ರಭಾವದಿಂದ ಜೀವನಕ್ರಮವು ಬಲಯುಕ್ತವೂ, ನವಶಕ್ತಿಸಂಪನ್ನವೂ, ನಿಯಮಿತವೂ ಆಗುತ್ತದೆ.

" The solar plexus gives conscious emotional control " " ಮಣಿಪೂರ ಚಕ್ರವು ಮನೋವಿಕಾರ-ಭಾವಾವೇಗಗಳ ಸಜ್ಞಾನ ಪ್ರಭುತ್ವವನ್ನು ಕೊಡುತ್ತದೆ.

ಕುಂಡಲಿನಿಯಿಂದ ಅನಾಹತ ಚಕ್ರವು ಉದ್ಭಾಸಿತವಾಗುವುದರಿಂದ " It becomes the organ of intuition, — through it flows the power of the intuitional worlds. " ಬುದ್ಧಿಗಿಂತಲೂ ಮೇಲೆ ಶ್ರೇಷ್ಠವಾಗಿರುವ ಬೋಧಿಯ (ಅಂತರ್ದೃಷ್ಟಿಯ-ದಿವ್ಯ ದೃಷ್ಟಿಯ) ಸಾಧನವಾಗುತ್ತದೆ. ಇದರ ಮೂಲಕ ದಿವ್ಯ ಲೋಕಗಳ ಶಕ್ತಿಗಳು ಪ್ರವಹಿಸುತ್ತವೆ.

ಅನಾಹತಚಕ್ರದ ಮೇಲೆ ಕಂಠದಲ್ಲಿ ವಿಶುದ್ಧಚಕ್ರವಿದೆ. ಆಧುನಿಕ ವಿಜ್ಞಾನವು ಯಾವ (Thyroid gland) ಥೈರಾಯಿಡ್ ಗ್ಲ್ಯಾಂಡಿನ ಅದ್ಭುತ ಕಾರ್ಯಗಳ ಆವಿಷ್ಕಾರ ಮಾಡಿದೆಯೋ ಅದು ಈ ಚಕ್ರದಲ್ಲಿಯೇ ಇದೆ. ಈ ಚಕ್ರದ ಪ್ರಜ್ವಲನವಾಗುವುದರಿಂದ "Throat Chakram when vivified bestows the faculty of clair-audience." ಸಾಧಕನಿಗೆ ದಿವ್ಯಶ್ರವಣಶಕ್ತಿ ಬರುತ್ತದೆ.

ವಿಶುದ್ಧಚಕ್ರದ ಮೇಲೆ ಭ್ರೂಮಧ್ಯದಲ್ಲಿ ಆಜ್ಞಾಚಕ್ರವಿದೆ. ಇದಕ್ಕೆ ಎರಡು ದಳಗಳಿವೆ. ಒಂದು ದಳವು ಪಾಶ್ಚಾತ್ಯ ವಿಜ್ಞಾನದ pineal gland 'ಪೈನಿಯಲ್ ಗ್ಲ್ಯಾಂಡ್' ಮತ್ತು ಇನ್ನೊಂದು ದಳವು pituitary body 'ಪಿಚ್ಯುಟರಿ ಬಾಡಿ' ಆಗಿವೆ.

ಸಾಧಾರಣ ಮನುಷ್ಯರಲ್ಲಿ ಈ ಆಜ್ಞಾಚಕ್ರವು ಅವಿಕಸಿತವಿರುತ್ತದೆ. ಕುಂಡಲಿನೀ ಶಕ್ತಿಯು ಜಾಗ್ರತವಾಗಿ ಸುಷುಮ್ನಾ ಮಾರ್ಗದಲ್ಲಿ ಪ್ರವಹಿಸಿ ಆಜ್ಞಾಚಕ್ರದಲ್ಲಿ ಪ್ರವೇಶಮಾಡಿ.

On reaching the pituitary and pineal centres it polarizes them into positive and negative conditions and vivifies them into a hyper-active state, in which they interact so closely that they become one centre. (*Hodson*)
ಆ ಪಿಚ್ಯುಟರಿ ಮತ್ತು ಪೀನಿಯಲ್ ಕೇಂದ್ರಗಳನ್ನು ಧನಾತ್ಮಕ ಮತ್ತು ಋಣಾತ್ಮಕ ವಿದ್ಯುದ್ಗತಿಯುಕ್ತವಾದವುಗಳನ್ನಾಗಿ ಮಾಡಿ ಆ ಎರಡೂ ಅತ್ಯಂತ ನಿಕಟ ತನ್ಮಯವಾಗಿ ಒಂದೇ ಚಕ್ರವಾಗುವಂತೆ ಅತಿಶಯ ಸಂಚಲಿತ ಸ್ಥಿತಿಗೆ ಉದ್ದೀಪನಮಾಡುತ್ತದೆ.

ಈ ಸಂದರ್ಭದಲ್ಲಿ ಯೋಗಸಿದ್ಧರಾದ ಶ್ರೀಮತಿ ಬ್ಲ್ಯಾವಟ್ಸ್ಕಿಯವರು ಹೇಳಿರುವುದೇನೆಂದರೆ,

The pulsation of the pituitory body, mounts upward more and more untill the current finally

strikes the pineal gland and the dorment organ (ಆಜ್ಞಾಚಕ್ರ) is awakened and set all glowing with the pure Akashic Fire. (ಕುಂಡಲಿನೀ) " ಪಿಚ್ಯುಟರಿ ಗ್ರಂಥಿಯ ಸ್ಪಂದನವು ಹೆಚ್ಚು ಹೆಚ್ಚು ಮೇಲೇರಿದಂತೆ ಕುಂಡಲಿನೀ ಶಕ್ತಿಪ್ರವಾಹವು ಕೊನೆಗೆ ಪೀನಿಯಲ್ ಗ್ರಂಥಿಯನ್ನು ಆಘಾತಿಸಿ ಸುಪ್ತವಾದ ಆಜ್ಞಾಚಕ್ರವು ಜಾಗ್ರತವಾಗಿ ಪರಿಶುದ್ಧವಾದ ಆಕಾಶವಹ್ನಿ(ಕುಂಡಲಿನಿ)ಯಿಂದ ಸಂಪೂರ್ಣ ಪ್ರಜ್ವಲಿತವಾಗುತ್ತದೆ.

ಈ ವಿಕಸಿತವೂ ಪ್ರಜ್ವಲಿತವೂ ಆದ ಆಜ್ಞಾಚಕ್ರವೇ ಶಾಸ್ತ್ರೋಕ್ತವಾದ ಶಿವನೇತ್ರವಾಗಿದೆ. ಇದರ ಉನ್ಮೀಲನವಾದರೆ ಸಾಧಕನು ತ್ರಿಯಂಬಕ (ತ್ರಿನೇತ್ರ)ನಾಗುತ್ತಾನೆ. ಈ ಆಜ್ಞಾಚಕ್ರವೇ ದಿವ್ಯದೃಷ್ಟಿಯ ಇಂದ್ರಿಯ (Organ of clairvoyance) ಆಗಿದೆ. ಇದರ ಸಹಾಯದಿಂದಲೇ ಅಣಿಮಾದಿ ಅಷ್ಟಸಿದ್ಧಿಗಳು ಪ್ರಾಪ್ತಿಯಾಗುತ್ತವೆ.

It may seem strange, almost incomprehensible that the chief success in Guptha-vidya or occult knowledge, should depend upon such flashes of clairvoyance, and that the latter should depend in man on the two insignificant excrescences in his cranial cavity. (*Madam Blavatsky*)

" ಗುಪ್ತವಿದ್ಯೆಯ ಸಾಧನದಲ್ಲಿ ಮುಖ್ಯ ಸಫಲತೆಯನ್ನು ಪಡೆಯುವುದು ಇಂಥಾ ದಿವ್ಯದೃಷ್ಟಿಯ ಪ್ರಕಾಶನದ ಮೇಲೆ ಅವಲಂಬಿಸಿದೆಯೆಂಬುದೂ ಮತ್ತು ಈ ಪ್ರಭಾಸನವು ಮನುಷ್ಯನ ಕಪಾಲದ ಪೊಳ್ಳಿನಲ್ಲಿರುವ ಅಮುಖ್ಯವಾದ ಆ ಎರಡು ಗ್ರಂಥಿಗಳನ್ನು ಆಶ್ರಯಿಸಿದೆಯೆಂಬುದೂ ವಿಚಿತ್ರವಾಗಿಯೂ ಬಹಳ ಮಟ್ಟಿಗೆ ತಿಳಿಯಲಸಾಧ್ಯವಾಗಿಯೂ ಕಾಣಬಹುದು. "

ಆಜ್ಞಾಚಕ್ರದ ಮೇಲೆ ಬ್ರಹ್ಮರಂಧ್ರದಲ್ಲಿ ಸಹಸ್ರಾರಚಕ್ರವಿದೆ. ಆಜ್ಞಾ ಚಕ್ರವನ್ನು ಉದ್ಭಾಸನ ಮಾಡಿದ ಮೇಲೆ ಕುಂಡಲಿನಿಯು ಸಹಸ್ರಾರದಲ್ಲಿ ಉಪಸ್ಥಿತವಾಗುತ್ತದೆ. ಇದೇ ಕುಂಡಲಿನೀ ಸಾಧನೆಯ ಅಂತಿಮ ಸೀಮ ವಾಗಿದೆ.

When the Sahasrara is fully vivified the ego gains the power to withdraw from and return to the physical body at will without a break in consciousness occurring.

"ಸಹಸ್ರಾರವು ಸಮಗ್ರವಾಗಿ ಪ್ರಜ್ವಲಿತವಾದೊಡನೆಯೇ ಸ್ವಲ್ಪವೂ ಮರವೆ ಬಾರದ ಎಚ್ಚರಿಕೆಯಿಂದಲೇ ಭೌತಿಕ ದೇಹದಿಂದ– ಇಚ್ಛಾ ಪ್ರಕಾರ – ಪ್ರತ್ಯೇಕವಾಗುವುದಕ್ಕಾಗಲೀ ದೇಹದಲ್ಲಿ ಸೇರಿಕೊಳ್ಳುವುದಕ್ಕಾಗಲೀ ಜೀವನು ಶಕ್ತಿಯನ್ನು ಪಡೆಯುವನು."

ಈ ಸ್ವಚ್ಛಂದ ವಿಹಾರವು ಉಪನಿಷತ್ತುಗಳಲ್ಲಿ 'ಕಾಮಚಾರ'ವೆನ್ನಲ್ಪಟ್ಟಿದೆ. **"ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ"** 'ಆ ಯೋಗಿಯು ಸರ್ವಲೋಕಗಳಲ್ಲಿಯೂ ಇಚ್ಛೆ ಬಂದಂತೆ ಸಂಚಾರಮಾಡಬಲ್ಲನು.'

ಕುಂಡಲಿನೀ ದೇವಿಯು ಸಹಸ್ರಾರದಲ್ಲಿ ಸದಾಶಿವನೊಡನೆ ಸೇರುತ್ತಾಳೆಂದು ತಂತ್ರಶಾಸ್ತ್ರವು ಹೇಳುವುದು. ಇದೇ ಸರ್ವಜ್ಞತೆಯ ಸಿದ್ಧಿಯಾಗಿದೆ.

**"ತಾರಕಂ ಸರ್ವವಿಷಯಂ ಸರ್ವಥಾ ವಿಷಯಮಕ್ರಮಂ ಚೇತಿ ವಿವೇಕಜಜ್ಞಾನಂ।"** ಎಂಬ ಯೋಗಸೂತ್ರದಂತೆ "ಭಿನ್ನಭಿನ್ನವಾದ ಅನಂತ ವಿಷಯಗಳೆಲ್ಲವನ್ನೂ (ಬೇರೆ ಬೇರೆಯಾಗಿ ಅಲ್ಲದೆ) ಏಕಕಾಲಕ್ಕೆ ಮುಟ್ಟುವ ವಿವೇಕಜನ್ಯ ಜ್ಞಾನವಾವುದೋ ಅದೇ ಸಂಸಾರ ಸಾಗರವನ್ನು ದಾಟಿಸುವ ಜ್ಞಾನವು."

ಸ್ಥೂಲ ಸೂಕ್ಷ್ಮವಾದ ಸರ್ವಾವಸ್ಥೆಗಳುಳ್ಳ ಪ್ರಕೃತಿಯೆಲ್ಲವನ್ನೂ ಒಂದೇ ಸಮಯದಲ್ಲಿ ಗ್ರಹಿಸಬಲ್ಲ ಸರ್ವಜ್ಞತ್ವವು ಆ ಯೋಗಿಗೆ ಲಭಿಸುತ್ತದೆ.

**"ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ ಸಮುತ್ಥಾಯ ಪರಂಜ್ಯೋತಿರೂಪ ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ॥"** ಎಂಬ ಛಾಂದೋಗ್ಯ ವಾಕ್ಯದಂತೆ "ಈ ಜೀವನು ಈ ಶರೀರದಿಂದ ಮೇಲೆದ್ದು ಪರಂಜ್ಯೋತಿಯ ಪ್ರಾಪ್ತಿ ಮಾಡಿಕೊಂಡು ತನ್ನ ಸ್ವರೂಪದಲ್ಲಿ ಸ್ಥಿತನಾಗುತ್ತಾನೆ.

ಹೀಗೆ ಇದುವರೆಗೆ ಮೇಲೆ ಹೇಳಿರುವಂತೆ ಮೂಲಾಧಾರದಿಂದ ಹಿಡಿದು ಆಜ್ಞಾಚಕ್ರದವರೆಗೆ ಗುರೂಪದಿಷ್ಟವಾದ ಚಕ್ರದಲ್ಲಿ ಮನಸ್ಸನ್ನು ನಿಲ್ಲಿಸುವುದೇ

'ಧಾರಣಾ'. ಈ ಚಕ್ರಗಳಲ್ಲಿ ಧಾರಣಾ ಧ್ಯಾನಗಳು ಬಲಿತು ಸಹಸ್ರಾರದಲ್ಲಿ ಲಕ್ಷ್ಯವು ನಿಂತರೆ ಸಮಾಧಿಯಾಗುತ್ತದೆ.

## ಮುದ್ರಾ

ಧಾರಣವು ಸಿದ್ಧಿಯಾಗುವುದಕ್ಕಾಗಿ ಮುದ್ರೆಗಳನ್ನು ಅಭ್ಯಾಸಮಾಡಬಹುದು. ಮುದ್ರೆಗಳಲ್ಲಿ ಭೂಚರೀ, ಖೇಚರೀ, ಶಾಂಭವೀ ಮುದ್ರೆಗಳು ಮುಖ್ಯವಾದವು.

ನಾಸಿಕಾಗ್ರದಲ್ಲಿ ಆಗಲೀ ನಾಸಿಕಾಗ್ರದಿಂದ ನಾಲ್ಕು ಅಂಗುಲ ದೂರದಲ್ಲಿರುವ ಅವಕಾಶದಲ್ಲಿ ಆಗಲೀ ಮನಸ್ಸನ್ನು ನಿಲ್ಲಿಸುವುದೇ **ಭೂಚರೀ ಮುದ್ರೆಯು.**

ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರದಲ್ಲಿ (ಗೋಲ್ಲಾಟ ಪೀಠದಲ್ಲಿ) ದೃಷ್ಟಿಯನ್ನೂ ಮನಸ್ಸನ್ನೂ (ಲಕ್ಷ್ಯವನ್ನು) ನಿಲ್ಲಿಸುವುದು **ಖೇಚರೀ ಮುದ್ರೆಯು.**

ಮನಸ್ಸನ್ನು ಆಜ್ಞಾಚಕ್ರದಲ್ಲಿ ಸ್ಥಿರಗೊಳಿಸಿ ದೃಷ್ಟಿಯನ್ನು ಅದಕ್ಕೆ ಸಮತಳದಲ್ಲಿ ಒಂದು ಗಜ ದೂರದಲ್ಲಿ ಅಥವಾ ಸಮೀಪದಲ್ಲಿ ಹೊರಗಡೆ ಮನಸ್ಸಿನಿಂದ ಕಲ್ಪಿತವಾದ ಒಂದು ವಸ್ತುವಿನಲ್ಲಿ ನಿಲ್ಲಿಸುವುದೇ **ಶಾಂಭವೀ ಮುದ್ರೆಯು.** ಇದು ಬಹಿರ್ದೃಷ್ಟಿ ಮತ್ತು ಅಂತರ್ಲಕ್ಷ್ಯವುಳ್ಳುದು ನಿಂತಿರಲಿ, ಕುಳಿತಿರಲಿ, ಮಲಗಿರಲಿ, ಓಡಾಡುತ್ತಿರಲಿ, ಯಾವ ಕಾರ್ಯವನ್ನು ಮಾಡುತ್ತಿರಲಿ, ದೃಷ್ಟಿಯಿಂದ ಹೊರಗಿನ ಪದಾರ್ಥಗಳನ್ನು ನೋಡುತ್ತಿರುವಂತೆ ಕಂಡರೂ ಯೋಗಿಯ ಲಕ್ಷ್ಯವು ಯಾವಾಗಲೂ ಪ್ರತ್ಯಗಾತ್ಮನಲ್ಲಿ ಅಥವಾ ಬ್ರಹ್ಮದಲ್ಲಿ ಲೀನವಾಗಿರುವುದೇ ಶಾಂಭವೀ ಮುದ್ರೆಯು. ಜಗತ್ಪ್ರಸಿದ್ಧರಾದ ಶ್ರೀ ರಮಣಮಹರ್ಷಿಗಳು ವಿಶೇಷವಾಗಿ ಶಾಂಭವೀ ಮುದ್ರೆಯಲ್ಲಿಯೇ ಇರುತ್ತಿದ್ದರು. ಈ ಮುದ್ರೆಯಲ್ಲಿ ದೃಷ್ಟಿಯು ಎವೆಯನ್ನು ಮುಚ್ಚದಂತೆ ( **ನಿಮೇಷೋನ್ಮೇಷ ವರ್ಜಿತಃ** ) ತೆರೆದೇ ಇರಬೇಕು.

## ತ್ರಾಟಕ

ಹಠಯೋಗದ ಷಟ್ಕರ್ಮಗಳಲ್ಲಿ ಒಂದಾದ ತ್ರಾಟಕ ಸಾಧನವನ್ನು ಧಾರಣಕ್ಕಾಗಿ ಉಪಯೋಗಿಸಬಹುದು.

**ನಿರೀಕ್ಷೇನ್ನಿಶ್ಚಲದೃಶಾ ಸೂಕ್ಷ್ಮಲಕ್ಷ್ಯಂ ಸಮಾಹಿತಃ ।**
**ಅಶ್ರುಸಂಪಾತಪರ್ಯಂತಮಾಚಾರ್ಯೈಸ್ತ್ರಾಟಕಂ ಸ್ಮೃತಮ್ ॥**

" ಏಕಾಗ್ರಚಿತ್ತನಾದ ಯೋಗಿಯು ಕಣ್ಣುಗಳಿಂದ ನೀರು ಬೀಳುವವರೆಗೂ ಎವೆಯಿಕ್ಕದೇ ನಿಶ್ಚಲವಾದ ದೃಷ್ಟಿಯಿಂದ ಸೂಕ್ಷ್ಮವಾದ ಗುರಿಯನ್ನು ನೋಡಬೇಕು. ಇದನ್ನೇ ಮತ್ಸ್ಯೇಂದ್ರ ಮೊದಲಾದ ಆಚಾರ್ಯರು 'ತ್ರಾಟಕ'ವೆನ್ನುತ್ತಾರೆ.

**ಮೋಚನಂ ನೇತ್ರರೋಗಾಣಾಂ ತಂದ್ರಾದೀನಾಂ ಕಪಾಟಕಮ್ ।**
**ಯತ್ನತಸ್ತ್ರಾಟಕಂ ಗೋಪ್ಯಂ ಯಥಾ ಹಾಟಕಪೇಟಕಮ್ ॥**

(ಹಠಯೋಗ ಪ್ರದೀಪಿಕಾ)

" ತ್ರಾಟಕದಿಂದ ನೇತ್ರರೋಗವು ನಾಶವಾಗುತ್ತದೆ. ತಂದ್ರಾ ನಿದ್ರಾ ಆಲಸ್ಯ ಮೊದಲಾದುವುಗಳನ್ನು ಬರುವುದಕ್ಕೆ ಬಿಡುವುದಿಲ್ಲ. ಇದು ಬಹಳ ಅಮೂಲ್ಯವಾದುದರಿಂದ ಬಂಗಾರದ ಪೆಟ್ಟಿಗೆಯಂತೆ ಭದ್ರಪಡಿಸಬೇಕು.

ಉಪನಿಷತ್ತುಗಳಲ್ಲಿ ಅಂತರ–ಬಾಹ್ಯ–ಮಧ್ಯಗಳೆಂದು ತ್ರಾಟಕದಲ್ಲಿ ಮೂರು ಭೇದಗಳನ್ನು ಮಾಡಿದೆ. ಹೃದಯ ಅಥವಾ ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಕಣ್ಣುಗಳನ್ನು ಮುಚ್ಚಿ ದೃಷ್ಟಿಯು ಚಲನವಾಗದಂತೆ ಏಕಾಗ್ರತೆಯಿಂದಿರುವುದು " **ಅಂತರ ತ್ರಾಟಕ** " ವೆನ್ನುತ್ತಾರೆ. ಮೊದಲು ಮೊದಲು ದೃಷ್ಟಿಯಲ್ಲಿ ಚಲನವು ತೋರುತ್ತದೆ. ಮುಂದೆ ಮುಂದೆ ಅಭ್ಯಾಸವು ಬಲಿತಂತೆಯೂ, ಏಕಾಗ್ರತೆಯು ಬೆಳೆದಂತೆಯೂ ದೃಷ್ಟಿಯು ನಿಶ್ಚಲವಾಗುತ್ತದೆ.

**ಬಾಹ್ಯತ್ರಾಟಕ :**—ರಾತ್ರಿಯ ಸಮಯದಲ್ಲಿ ಚಂದ್ರನ ಮೇಲೂ, ಪ್ರಕಾಶವಾದ ನಕ್ಷತ್ರದ ಮೇಲೂ, ದೂರದಲ್ಲಿರುವ ವನಾಚ್ಛಾದಿತ ಪರ್ವತ ಶಿಖರದ ಮೇಲೂ ಅಥವಾ ಆದರಲ್ಲಿ ಥಳಥಳನೆ ಹರಿಯುತ್ತಿರುವ ಜಲಝರಿಯ ಮೇಲೂ ದೃಷ್ಟಿಯನ್ನು ಸ್ಥಿರವಾಗಿ ನಿಲ್ಲಿಸಿದರೆ ಬಾಹ್ಯತ್ರಾಟಕವಾಗುತ್ತದೆ. ಕೇವಲ ಸೂರ್ಯಮಂಡಲದ ಮೇಲೇ ತ್ರಾಟಕ ಮಾಡಬಾರದು. ಸೂರ್ಯಮಂಡಲ ತ್ರಾಟಕದಿಂದ ನೇತ್ರಶಕ್ತಿಯು ಮಂದವಾಗುತ್ತದೆ. ಜಲದಲ್ಲಿ ಪ್ರತಿಫಲಿಸಿರುವ ಸೂರ್ಯಮಂಡಲದಲ್ಲಿಯೂ ಪ್ರಾತಃಕಾಲದ ಕೇವಲ ಬಾಲಸೂರ್ಯನಲ್ಲಿಯೂ ತ್ರಾಟಕ ಮಾಡಬಹುದು.

**ಮಧ್ಯತ್ರಾಟಕ :**—ಕಾಗದದ ಮೇಲೆ ಬರೆದಿರುವ ಓಂ ಅಕ್ಷರವಲ್ಲಾಗಲೀ, ಬಿಂದುವಿನಲ್ಲಾಗಲೀ, ದೇವತಾಮೂರ್ತಿ ಅಥವಾ ಭಾವಚಿತ್ರದಲ್ಲಾಗಲೀ, ಅಚಲವಾದ ತುಪ್ಪದ ದೀಪದ ಮೇಲಾಗಲೀ, ನಾಸಿಕಾಗ್ರದಲ್ಲಾಗಲೀ ದೃಷ್ಟಿಯನ್ನು ಸ್ಥಿರವಾಗಿ ನಿಲ್ಲಿಸುವುದಕ್ಕೆ ಮಧ್ಯತ್ರಾಟಕವೆನ್ನುತ್ತಾರೆ.

ಮನಸ್ಸಿನ ವಿಕ್ಷೇಪವನ್ನು ನಿಲ್ಲಿಸಿ ಏಕಾಗ್ರತೆಯನ್ನುಂಟುಮಾಡುವುದಕ್ಕೆ ತ್ರಾಟಕವು ಪ್ರಬಲ ಸಾಧನ. ತ್ರಾಟಕದಲ್ಲಿ ಕಣ್ಣುಮುಚ್ಚದೇ (ಅನಿಮಿಷವಾಗಿ) ಒಂದೇ ದೃಷ್ಟಿಯಿಂದ ಸೂಕ್ಷ್ಮ ಲಕ್ಷ್ಯವನ್ನು ಹೆಚ್ಚು ಹೆಚ್ಚು ಕಾಲ ನೋಡುವುದನ್ನು ಅಭ್ಯಾಸ ಮಾಡಬೇಕು. ಇಷ್ಟಮೂರ್ತಿಯ ಮೇಲೆ ತ್ರಾಟಕ ಮಾಡುವುದರಿಂದ ಮೂರ್ತಿಯು ಚಿತ್ತದಲ್ಲಿ ಚಿತ್ರ ಬರೆದಂತೆ ಖಚಿತವಾಗಿ ನಿಲ್ಲುತ್ತದೆ.

## ಧ್ಯಾನ ಮತ್ತು ಸಮಾಧಿ

ರಾಜಯೋಗದ ಅಷ್ಟಾಂಗಗಳಲ್ಲಿ ಏಳನೆಯ ಅಂಗವೇ ಧ್ಯಾನವು.

“ **ತತ್ರ ಪ್ರತ್ಯಯೈಕತಾನತಾ ಧ್ಯಾನಂ** ” ಎಂಬ ಯೋಗಸೂತ್ರದಂತೆ ಆ ವಿಷಯದಲ್ಲಿ ಅಖಂಡವಾದ ಜ್ಞಾನಪ್ರವಾಹವೇ ಧ್ಯಾನ. ಹೃದಯ, ಭ್ರೂಮಧ್ಯ, ಮಸ್ತಕ ಮೊದಲಾದ ಒಂದೊಂದು ಕೇಂದ್ರದಲ್ಲಿ ಮನಸ್ಸು ಅಚಲವಾಗಿ ನಿಲ್ಲುವುದಕ್ಕಾಗಿ ಅದು ಅಲ್ಲಿ ಒಂದೇ ವಸ್ತುವನ್ನು ಚಿಂತನಮಾಡಬೇಕು. ದೇಹದ ಮಿಕ್ಕ ಎಲ್ಲಾ ಭಾಗಗಳ ಅರಿವನ್ನೂ ತಪ್ಪಿಸಿಕೊಂಡು ಮನಸ್ಸು ಒಂದೇ ಕೇಂದ್ರದಲ್ಲಿ ನಿಲ್ಲುವುದಕ್ಕೆ ಕಲಿತರೆ ಅದು ಧಾರಣೆಯು. ಮನಸ್ಸು ಧಾರಣಾ ಸ್ಥಿತಿಯಲ್ಲಿಯೇ ತೈಲಧಾರೆಯಂತೆ ಕೆಲವು ಹೊತ್ತಾದರೂ ಸ್ಥಿರವಾಗಿರುವುದಕ್ಕೆ ಅಭ್ಯಾಸವಾದರೆ ಅದು ಧ್ಯಾನವೆನ್ನಿಸಿಕೊಳ್ಳುವುದು. ಒಂದು ಚಕ್ರದ ಕೇಂದ್ರಕ್ಕೆ ಸಂಬಂಧಪಟ್ಟು ಆ ನಿರ್ಬಂಧದಲ್ಲಿ ಏಳುವ ಒಂದು ಬಗೆಯ ವೃತ್ತಿಗಳೇ ಪ್ರಧಾನವಾಗಿ, ಉಳಿದ ವೃತ್ತಿಗಳನ್ನೆಲ್ಲಾ ಮುಳುಗಿಸುವುದು ಧ್ಯಾನವಾದರೆ, ಯಾವ ಕೇಂದ್ರದ ಆಧಾರವೂ ಇಲ್ಲದೆ ಇಡಿಯ ಮನಸ್ಸೇ ಒಂದು ತರಂಗವೂ ಒಂದೇ ರೂಪವೂ ಆಗುವುದೇ ಸಮಾಧಿಯು. ಯಾವ ಸ್ಥಾನಗಳ ಮತ್ತು ಕೇಂದ್ರಗಳ ಸಹಾಯವೂ ಪರಿವೆಯೂ ಇಲ್ಲದೆ ಧ್ಯಾನದಲ್ಲಿರುವ ಭಾವದ ಅರ್ಥಜ್ಞಾನ ಮಾತ್ರ ಸ್ಫುರಿಸುವುದೇ ಸಮಾಧಿಯು. ಒಂದು ಕೇಂದ್ರದಲ್ಲಿ ಮನಸ್ಸನ್ನು

ಹನ್ನೆರಡು ಸೆಕೆಂಡುಗಳು ನಿಲ್ಲಿಸುವುದು ಸಾಧ್ಯವಾದರೆ ಅದು ಧಾರಣವೆನ್ನಿಸುತ್ತದೆ. ಅಂಥ ಹನ್ನೆರಡು ಧಾರಣಗಳು (2 ನಿಮಿಷ 24 ಸೆಕೆಂಡ್‌ಗಳು) ಆದರೆ ಒಂದು ಧ್ಯಾನವೂ, ಅಂಥ ಹನ್ನೆರಡು (28 ನಿಮಿಷ 48 ಸೆಕೆಂಡ್‌ಗಳು) ಧ್ಯಾನಗಳಾದರೆ ಒಂದು ಸಮಾಧಿಯೂ ಆಗುತ್ತದೆ. ಅರ್ಧ ಗಂಟೆಯ ಕಾಲ ಅಖಂಡವಾಗಿ ತೈಲಧಾರೆಯಂತೆ ಧ್ಯಾನವಾದರೆ ಸಮಾಧಿಯಾಗುತ್ತದೆ.

ಈಗ ಧ್ಯಾನದ ವಿಚಾರವನ್ನೇ ಹೆಚ್ಚಾಗಿ ಮಾಡೋಣ. ಮೊದಲು ಧ್ಯಾನಕ್ಕೆ ಆಸನದ ಮೇಲೆ ಕುಳಿತು ಧಾರಣ ಮಾಡಿದರೆ ಮನಸ್ಸು ವಾಸನಾ ಬಲದಿಂದ ಎಲ್ಲೆಲ್ಲಿಯೋ ಹರಿದಾಡಲು ಹೋಗುವುದು. ಮನಸ್ಸಿನಲ್ಲಿ ಕಲ್ಪನೆಗಳ ಮೇಲೆ ಕಲ್ಪನೆಗಳು ಬರುತ್ತಿರುವುವು. ಮನಸ್ಸು ಕಪಿಯಂತೆ ಬಹಳ ಚಪಲಸ್ವಭಾವವುಳ್ಳದ್ದು. ನಾವು ಅದರ ಸ್ವಭಾವವನ್ನು ತಿಳಿದು ಒಳಗೇ ನಗಬೇಕೇ ಹೊರತು ಬೇಸರಪಟ್ಟುಕೊಳ್ಳಬಾರದು. ಬೇಸರವು ತಮೋಗುಣದ ಪ್ರಭಾವ. ಹರಿದಾಟವು ರಜೋಗುಣದ ಸ್ವಭಾವ. ಸ್ವಭಾವವನ್ನು ತಿಳಿದು ಸಮಾಧಾನದಿಂದಲೂ ಜಾಣತನದಿಂದಲೂ ಒಳಗೇ ನಗುವ ಸಂತೋಷವೂ ಧೈರ್ಯವೂ ಸತ್ವಗುಣ. ರಜೋಗುಣವನ್ನೂ ತಮೋಗುಣವನ್ನೂ ಜಯಿಸಿ ನಾವು ಸತ್ವಸಂಪನ್ನರಾಗಬೇಕು. ಮಂಗ ಮನಸ್ಸು ಬೇಕಾದಷ್ಟು ಕುಣಿಯಲೆಂದು ಸ್ವಲ್ಪ ಹೊತ್ತು ಸಾವಧಾನದಿಂದ ಕೈಬಿಟ್ಟು ಕಾದು ನೋಡಬೇಕು. ಮನಸ್ಸಿನ ಮರೆಮೋಸಗಳನ್ನೂ ಚರ್ಯವನ್ನೂ ನಾವು ತಿಳಿದ ಹೊರತು ಅದನ್ನು ನಿಗ್ರಹಿಸಲಾರೆವು. ಜ್ಞಾನವೇ ಶಕ್ತಿಯು. (knowledge is power.) ಆದುದರಿಂದ ಮನಸ್ಸಿನ ಸ್ವಭಾವಗಳನ್ನು ತಿಳಿಯುವ ಶಕ್ತಿಯೇ ಅದನ್ನು ವಶಪಡಿಸಿಕೊಳ್ಳುವ ಶಕ್ತಿಯನ್ನೂ ಕೊಡುತ್ತದೆ. ಸ್ವಾಭಾವಿಕವಾದ ಚಪಲತೆಯಿಂದ ಸಾಮಾನ್ಯವಾಗಿ ಸುಳಿದಾಡುತ್ತಿದ್ದ ಮಂಗನನ್ನು ಹಿಡಿದು ಕಟ್ಟಲು ಹೋದರೆ ಅದು ಯಾರ ಕೈಗೂ ದಕ್ಕದ ರೀತಿಯಲ್ಲಿ ಪೈಶಾಚಿಕನರ್ತನವನ್ನೇ ಆರಂಭಿಸಿಬಿಡುವಂತೆ ಮನಸ್ಸಿನ ಹಾರಾಟವಿದೆ. ಸಾಧನಾರಂಭದಲ್ಲಿ ನಾವು ಧ್ಯಾನಕ್ಕಾಗಿ ಕುಳಿತಾಗ ನಮ್ಮ ಮನಸ್ಸಿನಲ್ಲಿ ನುಗ್ಗುವ ಕಲ್ಪನೆಗಳ ಪ್ರವಾಹವನ್ನು ನೋಡಿದರೆ ನಮಗೇ ಆಶ್ಚರ್ಯವೂ ಅಂಜಿಕೆಯೂ ಆಗಬಹುದು. ಧ್ಯಾನದ ಪ್ರಯತ್ನವನ್ನು ನಾವು ಮಾಡದಿದ್ದಿದ್ದರೆ ಇಂಥಾ ಕಲ್ಪನೆಗಳೂ ಇಷ್ಟು ಕಲ್ಪನೆಗಳೂ ಬರುತ್ತಿರಲಿಲ್ಲವೆನಿಸುತ್ತದೆ. ಮನೋನಿಗ್ರಹ ಮಾಡ

ಬೇಕೆಂಬ ನಮ್ಮ ಶುದ್ಧಬುದ್ಧಿಯ ಗುಪ್ತವಾದ ಉದ್ದೇಶವನ್ನು ನಮ್ಮ ಮನಸ್ಸೇ ತಿಳಿದು ತನ್ನ ಸರ್ವ ಶಕ್ತಿಗಳಿಂದಲೂ ಯುಕ್ತಿಗಳಿಂದಲೂ ಅದನ್ನು ಪ್ರತಿಭಟಿಸಿ, ಪರಾಭವಗೊಳಿಸಿ ತನ್ನದೇ ಆದ ಸ್ವಚ್ಛಂದ ಸಾಮ್ರಾಜ್ಯವನ್ನು ಸ್ಥಾಪನೆಮಾಡಿ ಕೊಳ್ಳಬೇಕೆಂಬ ಮನಸ್ಸಿನ ಸಾಹಸವೂ ಪರಾಕ್ರಮವೂ ತೋರಿಬರುತ್ತದೆ. ನಮ್ಮ ಅಂತಃಕರಣದಲ್ಲಿಯೇ ಒಂದಕ್ಕೊಂದು ವಿರೋಧವಾದ ಎರಡು ಬಗೆಯ ವೃತ್ತಿಗಳಿವೆ. ಒಂದು ಶುದ್ಧವೃತ್ತಿ, ಇನ್ನೊಂದು ಅಶುದ್ಧವೃತ್ತಿ. ಶುದ್ಧವೃತ್ತಿಯೇ ಬುದ್ಧಿ; ಅಶುದ್ಧವೃತ್ತಿಯೇ ಮನಸ್ಸು. ವಿವೇಕ ವಿಚಾರಗಳೇ ಬುದ್ಧಿವೃತ್ತಿಗಳು; ಅವಿವೇಕ, ಅವಿಚಾರಗಳೇ ಮನೋವೃತ್ತಿಗಳು. ಸಜ್ಜನ ಸಹವಾಸದಿಂದಲೂ, ಸತ್ಸಂಸ್ಕಾರ ಬಲದಿಂದಲೂ, ಶಾಸ್ತ್ರಾಭ್ಯಾಸದಿಂದಲೂ, ಶಿಕ್ಷಣ ಪ್ರಭಾವದಿಂದಲೂ, ದೈವಾನುಗ್ರಹದಿಂದಲೂ ಉದಿಸಿ ವೃದ್ಧಿಯಾಗುವ ತಾರಕ ವೃತ್ತಿಯೇ ವಿವೇಕಯುಕ್ತವಾದ ಬುದ್ಧಿವೃತ್ತಿ. ಇದಕ್ಕೆ ವಿರುದ್ಧವಾದ ಸಾಧನಗಳಿಂದಲೂ, ಜನ್ಮಾಂತರ ಪಾಪವಾಸನೆಗಳಿಂದಲೂ, ಭೋಗೇಚ್ಛೆಯಿಂದಲೂ. ಯಾವ ನಿಯಂತ್ರಣವನ್ನೂ ಸಹಿಸದೇ ಸ್ವೇಚ್ಛೆಯಾಗಿ ನುಗ್ಗುವ ಮಾರಕ ವೃತ್ತಿಯೇ ಅವಿವೇಕಯುಕ್ತವಾದ ಮನೋವೃತ್ತಿ. ಬುದ್ಧಿಯು ಮೋಕ್ಷಕ್ಕೂ, ಮನಸ್ಸು ಬಂಧಕ್ಕೂ ದುಃಖಕ್ಕೂ ಕಾರಣವಾಗಿವೆ. ಪ್ರತಿಯೊಬ್ಬ ಮನುಷ್ಯನಲ್ಲಿಯೂ ಬುದ್ಧಿಗೂ ಮನಸ್ಸಿಗೂ ನಿತ್ಯವೂ ನಿರಂತರವಾದ ಹೋರಾಟವು ನಡೆದಿದೆ. ಒಮ್ಮೊಮ್ಮೆ ಬುದ್ಧಿಯನ್ನು ಸೋಲಿಸಿ ಮನಸ್ಸು ಮೇಲಾಗುತ್ತದೆ. ಮತ್ತೊಮ್ಮೆ ಮನಸ್ಸನ್ನು ಸೋಲಿಸಿ ಬುದ್ಧಿಯು ಮೇಲಾಗುತ್ತದೆ. ಈ ಮೋಹ-ವಿವೇಕಗಳ ಯುದ್ಧವೂ ಆಸುರೀಶಕ್ತಿ-ದೈವೀಶಕ್ತಿಗಳ ಸಂಗ್ರಾಮವೂ ಪ್ರತಿಯೊಬ್ಬನಲ್ಲಿಯೂ ನಡೆದಿವೆ. ಆದರೆ ಈ ದ್ವಂದ್ವಶಕ್ತಿಗಳ ಕಿತ್ತಾಟ-ತಿಕ್ಕಾಟಗಳನ್ನು ಕೊನೆಗಾಣಿಸಿ ಶತ್ರುಶೇಷವಿಲ್ಲದಂತೆ ದೈವೀಸಂಪತ್ತಿನ ಸ್ವರಾಜ್ಯವನ್ನೇ ಸಂಸ್ಥಾಪಿಸಬೇಕೆಂಬ ದೃಢಸಂಕಲ್ಪವುಳ್ಳ ಯೋಗಿಯಲ್ಲಿ ಈ ಹೋರಾಟವು ಪ್ರಸ್ಫುಟವಾಗಿ ವ್ಯಕ್ತವಾಗುವುದೂ, ಅವನು ಅದೇ ಪ್ರಯತ್ನಕ್ಕಾಗಿ ಕುಳಿತ ಧ್ಯಾನಕಾಲದಲ್ಲಿ ಮೊದಲು ಮೊದಲು ಮನೋಬುದ್ಧಿಗಳ ಸಂಗ್ರಾಮವು ಭಯಂಕರ ಜ್ವಾಲಾಮುಖಿಯ ಸ್ಫೋಟದಂತಾಗುವುದೂ ಸ್ವಾಭಾವಿಕವೂ ಅನಿವಾರ್ಯವೂ ಆಗಿದೆ.

ಸ್ವಲ್ಪ ಹೊತ್ತು ನಾವು (ಬುದ್ಧಿಯು) ಮನಸ್ಸಿನಿಂದ ಬೇರೆ ನಿಂತು ಸಹನೆ

ಸಹಾನುಭೂತಿ-ವಾತ್ಸಲ್ಯಗಳಿಂದ ಅದರ ಒಳತೋಟಿ-ಹೋರಾಟಗಳನ್ನು ಸಾಕ್ಷಿಯಾಗಿ ನಿರೀಕ್ಷಿಸುವ ಅಭ್ಯಾಸ ಮಾಡಬೇಕು. ಬಲಾತ್ಕಾರದಿಂದ ಮನಸ್ಸನ್ನು ಹೆಡಮುರಿಗಟ್ಟಲು ಹೊರಟರೆ ಅದರ ವಿರೋಧವೂ ಪ್ರಚಂಡವಾಗುತ್ತದೆ. ಒತ್ತಾಯದಿಂದ, ಬುದ್ಧಿಶಕ್ತಿಯು ವ್ಯರ್ಥವಾಗಿ ವ್ಯಯವಾಗುತ್ತದೆ. ಇದರಿಂದ ನಮ್ಮ ನೆರಳಿನೊಡನೆಯೂ, ಕನ್ನಡಿಯಲ್ಲಿರುವ ನಮ್ಮ ಪ್ರತಿಬಿಂಬದೊಡನೆಯೂ ನಾವೇ ಹೋರಾಡಿದಂತಾಗುತ್ತದೆ.

ಹುಚ್ಚ ಮನುಷ್ಯನೊಬ್ಬನು ಒಂದು ದಿನ ಕನ್ನಡಿಯ ಎದುರಿಗೆ ನಿಂತು ನೋಡುವುದಕ್ಕೆ ತೊಡಗಿದನು. ಅವನು ತನ್ನ ಹುಚ್ಚು ಕಲ್ಪನೆಯ ಪ್ರಭಾವದಿಂದ, ಕನ್ನಡಿಯಲ್ಲಿ ಕಾಣುವ ತನ್ನ ಪ್ರತಿಬಿಂಬವನ್ನೇ ಬೇರೊಬ್ಬ ಮನುಷ್ಯನೆಂದೂ, ಅವನು ತನ್ನ ಶತ್ರುವೆಂದೂ ಭಾವಿಸಹತ್ತಿದನು. ಇದರಿಂದ ಅವನ ಮನಸ್ಸಿನಲ್ಲಿಯೇ ಉದಿಸಿದ ವಿರೋಧಭಾವವು ಸಹಜವಾಗಿ ಅವನ ಮುಖದಲ್ಲಿಯೂ, ಅವನ ಪ್ರತಿಬಿಂಬದ ಮುಖದಲ್ಲಿಯೂ ಮೂಡಿತು. ಅವನ ಮನಸ್ಸೂ ಅವನ ಮುಖವೂ ಅವನಿಗೇ ಕಾಣದಿರುವುದರಿಂದ ತನ್ನ ಎದುರಾಳಿಯ ಮುಖದಲ್ಲಿ ಆ ವಿರೋಧಭಾವವನ್ನು ನೋಡಿ ಕೋಪಗೊಂಡನು. ಈ ಕೋಪವೂ ಅವನ ಮುಖದಲ್ಲಿಯೂ, ಅವನ ಪ್ರತಿಬಿಂಬದ ಮುಖದಲ್ಲಿಯೂ ತೋರಿತು. ಆದರೆ ಕನ್ನಡಿಯಲ್ಲಿರುವ ಮನುಷ್ಯನ ಕೋಪಕ್ಕೆ ತನ್ನ ಕೋಪವೇ ಕಾರಣವೆಂಬುದನ್ನು ತಿಳಿಯದೇ ರೋಷಾವೇಶದಿಂದ ಅವನನ್ನು ಹೊಡೆಯುವುದಕ್ಕೆ ಹೋದನು. ಆದರೆ ಅವನಿಗೆ ಬಂದ ಆವೇಶವು ಅವನಿಗೇ ತಿಳಿಯುವುದಕ್ಕೆ ಮೊದಲೇ ಕನ್ನಡಿಯ ಶತ್ರುವು ಭಯಂಕರ ರೋಷಾವೇಶದಿಂದ ತನ್ನನ್ನೇ ಅಪ್ಪಳಿಸುವುದಕ್ಕೆ ಕೈಯೆತ್ತಿ ಮುಂದೋಡಿ ಬರುತ್ತಿರುವುದನ್ನು ನೋಡಿ ಆ ಹುಚ್ಚನು ಭಯಪಟ್ಟು ಬಾಯಿಬಡಿದುಕೊಳ್ಳುತ್ತಾ ಓಡುವುದಕ್ಕೆ ತೊಡಗಿದನು.

ನಮ್ಮ ಮನೋನಿಗ್ರಹದ ಸಾಧನದಲ್ಲಿ ನಮ್ಮ ಮನಸ್ಸಿಗೇ ನಾವು ಭಯಪಡುತ್ತಿರುವುದೂ ಮೇಲಿನ ಹುಚ್ಚನ ಭಯದಂತೆಯೇ ಇದೆ. ವಿಜ್ಞಾನಮಯ ಜೀವನು ಮಲಿನಾಂತಃಕರಣದಲ್ಲಿ ಮೂಡಿರುವ ತನ್ನ ಪ್ರತಿಬಿಂಬವೇ ಆದ ಮನೋಮಯ ಜೀವನನ್ನು ಭ್ರಾಂತಿಯಿಂದ ತನ್ನ ವಿರೋಧಿಯೆಂದು ತಿಳಿದಿದ್ದಾನೆ. ಅಂದರೆ ವಿವೇಕಜನ್ಯವಾದ ನಮ್ಮ ಶುಭೇಚ್ಛೆಗೆ ನಮ್ಮ ಮನಸ್ಸೇ ವಿರೋಧವಾಗಿದೆಯೆಂದು ನಾವು ತಿಳಿದಿದ್ದೇವೆ. ಮೂಲತಃ ಗೂಢವಾಗಿರುವ

ಈ ಭ್ರಾಂತಿಯೇ ಮುಂದಿನ ಸರ್ವಾನರ್ಥಗಳಿಗೂ ವಿಷಬೀಜವಾಗಿದೆ. ಈ ಮೂಲ ಭಾವನಾತರಂಗವೇ ಸ್ಪಂದನ–ಪ್ರತಿಸ್ಪಂದನ ಪರಂಪರಾರೂಪ (ಕ್ರಿಯಾ-ಪ್ರತಿಕ್ರಿಯಾತ್ಮಕ)ವಾದ ಕಲ್ಪನಾಶರಧಿಯಲ್ಲಿ ಪರ್ವತೋಪಮ ತರಂಗಗಳಾಗಿ ಬೆಳೆದು ಪ್ರಚಂಡವಾಗಿ ನಮ್ಮನ್ನು (ಬುದ್ಧಿಯನ್ನು) ಅಪ್ಪಳಿಸುವಂತೆ ತೋರುತ್ತಿದೆ. ಸಮುದ್ರದಲ್ಲಿ ಒಂದೊಂದು ಸಣ್ಣ ಸಣ್ಣ ಅಲೆಯೇ ಕ್ರಿಯಾ–ಪ್ರತಿಕ್ರಿಯಾತ್ಮಕ ವಿಲಾಸದಿಂದ ಅನಂತವಾಗಿ ಸೇರಿ ಬೆಟ್ಟಬೆಟ್ಟದಂಥ ತೆರೆಗಳಾಗಿ ಅಲ್ಲೋಲ ಕಲ್ಲೋಲ ಮಾಡುವಂತೆ ನಮ್ಮ ಮನಸ್ಸಿನ ಸ್ಥಿತಿಯೂ ಆಗಿದೆ. ಅದು ಅಷ್ಟು ಪ್ರಕ್ಷುಬ್ಧವಾಗುವುದಕ್ಕೆ ನಮ್ಮ ಮನಸ್ಸೇ ನಮಗೆ ಅನ್ಯವಾಗಿಯೂ ವಿರೋಧಿಯಾಗಿಯೂ ಇದೆಯೆಂಬ ಮೂಲ ಭ್ರಾಂತಿಯೇ ಆಗಿದೆ. ಒಂದು ಕನ್ನಡಿಯ ಎದುರಿಗೆ ಇನ್ನೊಂದು ಕನ್ನಡಿಯನ್ನು ಒಂದರೊಳಗೊಂದು ಪ್ರತಿಫಲನವಾಗುವಂತೆ ಸರಿಯಾಗಿ ಏರ್ಪಡಿಸಿಟ್ಟರೆ ಒಂದೊಂದು ಕನ್ನಡಿಯಲ್ಲಿಯೂ ಅನಂತ ಪ್ರತಿಬಿಂಬಗಳು ಕಾಣುತ್ತವೆ. ದ್ವೈತಭ್ರಾಂತಿಯೇ ಮೂಲವಾದ ನಮ್ಮ ಮನಸ್ಸಿನಲ್ಲಿ ಅನಂತವೃತ್ತಿಗಳೆದ್ದು ಅಜೇಯವಾಗಿ ಕಾಣುವುದೂ ಹೀಗೇಯೇ. ಆದ್ದರಿಂದ ನಮ್ಮ ಮನಸ್ಸನ್ನು ನಾವು ವಿರೋಧಿಯೆಂದು ಭಾವಿಸಿ ಅದರ ಮೇಲೆ ಬಲಾತ್ಕಾರ ಮಾಡುವುದಕ್ಕೆ ಹೋಗದೇ ಅನುಕೂಲ ಭಾವನೆಗಳೆಂಬ ಉಪಾಯದಿಂದ ಮನಸ್ಸನ್ನು ವಶಪಡಿಸಿಕೊಳ್ಳಬೇಕು. **"ಯೋಗಃ ಕರ್ಮಸು ಕೌಶಲಂ"** ಎಂಬ ಭಗವದುಕ್ತಿಯಂತೆ ಸಾಧನ ಕರ್ಮದಲ್ಲಿ ಈ ಬಗೆಯ ಉಪಾಯ ಕೌಶಲಗಳೇ ಯೋಗವೆನಿಸುತ್ತವೆ.

ಇನ್ನು ಆಜ್ಞಾಚಕ್ರದಲ್ಲಿ ಲಕ್ಷ್ಯವನ್ನು ನಿಲ್ಲಿಸಿ ಚಿಂತನ ಮಾಡುವುದಕ್ಕೆ ತೊಡಗಿದರೆ ಕೆಲವರಿಗೆ ಭಯಂಕರವಾದ ರಾಕ್ಷಸಾಕಾರಗಳಾದ ವಿಚಿತ್ರ ರೂಪಗಳೂ ಕಾಣಬಹುದು. ಅಲ್ಲಿಯೇ ಲಕ್ಷ್ಯವನ್ನು ನಿಲ್ಲಿಸುವುದಕ್ಕೆ ಭಯವೂ ಆಗಬಹುದು. ದೆವ್ವದ ಕಥೆಗಳನ್ನು ಕೇಳಿದ ಬಾಲಕನು ರಾತ್ರಿಯ ದೀಪದಲ್ಲಿ ತನ್ನ ನೆರಳನ್ನು ತಾನೇ ನೋಡಿಕೊಂಡು ಅದನ್ನು ದೆವ್ವನೆಂದು ತಿಳಿದು ಅಂಜಿದಂತೆ, ಮೂಢ ಮನುಷ್ಯನು ತನ್ನ ತುಂಟ ಮನಸ್ಸಿನ ಕಲ್ಪನೆಗಳನ್ನೇ ಅನ್ಯ ರಾಕ್ಷಸನೆಂದು ತಿಳಿದು ಬೆದರಬಹುದು. ತೋರಿಕೆಯು ಸತ್ಯವೆಂದು ತಿಳಿಯುವುದರಿಂದ ಆ ಕಲ್ಪನೆಗಳಿಗೆ ನಮ್ಮಿಂದಲೇ ಶಕ್ತಿಯು ದೊರೆತು ಪುಷ್ಟವಾಗಿ ನಮ್ಮನ್ನೇ ಹೆದರಿಸುತ್ತವೆ. " ಆದ್ದರಿಂದ ಇವು ಕೇವಲ ಕಲ್ಪನಾಮಾತ್ರ

ವಾಗಿವೆ; ಸತ್ಯವಲ್ಲ" ಎಂದು ಭಾವಿಸುವುದರಿಂದ ಅವುಗಳ ನಾಶವಾಗುತ್ತದೆ. ಕೆಲವು ಯೋಗಿಗಳಿಗೆ ಸಂಯಮದಲ್ಲಿ ಭುವರ್ಲೋಕದ ದೃಷ್ಟಿಯು ತೆರೆದು ಚಿತ್ರವಿಚಿತ್ರವಾದ ಭಯಂಕರ ಭೂತಗಳ ದರ್ಶನವಾಗುವುದುಂಟು. ಇವುಗಳಿಂದ ಯಾವ ಅಪಾಯವೂ ಇಲ್ಲವಾದರೂ ಸಾಧಕನ ಧೈರ್ಯವನ್ನು ಬೆಳೆಸುವುದಕ್ಕಾಗಿ ತೋರುವುವೆಂದು ತಿಳಿಯಬೇಕು. ಆದರೆ ಮಂತ್ರೋಚ್ಚಾರಣೆಯಿಂದ ಅವುಗಳ ಉಚ್ಚಾಟನೆಯಾಗುತ್ತದೆ. ಅಲ್ಲದೆ ಅವುಗಳನ್ನು ಶಿವನ ಪರಿವಾರನೆಂದು ಬಾವಿಸುವುದರಿಂದ ಭಯನಾಶವಾಗುತ್ತದೆ. ದೇಹಬುದ್ಧಿಯೇ ಯಾವಾಗಲೂ ಭಯಕ್ಕೆ ಕಾರಣವಾದುದೂ, ಆತ್ಮಬುದ್ಧಿಯೇ ಅಭಯಪ್ರದವಾದುದೂ ಇರುವುದರಿಂದ ಯೋಗಿಯು ನಿರಂತರ ಆತ್ಮಭಾವನೆಯಲ್ಲಿರಬೇಕು.

ಧೈರ್ಯದಿಂದಲೂ ಉತ್ಸಾಹದಿಂದಲೂ ಎಡೆಬಿಡದೇ ಯೋಗಿಯು ಅಭ್ಯಾಸಮಾಡುತ್ತಿದ್ದರೆ ಕೆಲವು ದಿನಗಳಲ್ಲಿ ಮನಸ್ಸಿನ ತುಂಟಾಟವೆಲ್ಲ ಅಡಗಿ ಅದು ಸಮಾಧಾನವಾಗುತ್ತಾ ಬರುತ್ತದೆ.

ಯೋಗಿಯು ವಿಚಾರ ವೈರಾಗ್ಯಗಳಿಂದ ಆಶೆಗಳನ್ನೂ, ತನ್ನ ಭವಿಷ್ಯತ್ತಿನ ಆಲೋಚನೆ ಹವಣಿಕೆಗಳನ್ನೂ ಹಿಂದಿನ ನೆನಪುಗಳನ್ನೂ ಧ್ಯಾನಕ್ಕಾಗಿ ಆಸನದಲ್ಲಿ ಕುಳಿತಾಗಲಾದರೂ ಪೂರ್ತಿಯಾಗಿ ಬಿಡಬೇಕು. ಏಕಾಂತವಾಸದಿಂದಲೂ ನಿರಂತರ ಅಭ್ಯಾಸಬಲದಿಂದಲೂ ಧ್ಯಾನಕಾಲದಲ್ಲಿರಬೇಕಾದ ನಿಶ್ಚಿಂತ ಸ್ಥಿತಿಯನ್ನೇ ಯಾವಾಗಲೂ ಅಖಂಡವಾಗಿ ಇಟ್ಟುಕೊಳ್ಳಬಹುದು. ರಾಗದ್ವೇಷಗಳೂ ಹರ್ಷವಿಷಾದಗಳೂ ಕೇವಲ ಕಲ್ಪನಾಮಯವಾದವುಗಳೆಂದು ತಿಳಿದು ಮನಸ್ಸಿನಲ್ಲಿ ಅವುಗಳಿಗೆ ಅವಕಾಶ ಕೊಡಬಾರದು. ಸಮತ್ವವೇ ಯೋಗವಾದುದರಿಂದ ರಾಗದ್ವೇಷಾದಿ ದ್ವಂದ್ವಾತ್ಮಕವಾದ ವೃತ್ತಿಗಳಿಂದ ಮನಸ್ಸು ತನ್ನ ಸಮತ್ವವನ್ನು ಕಳೆದುಕೊಂಡು ಏರುಪೇರಾಗದಂತೆ ಎಚ್ಚರವಾಗಿರಬೇಕು.

ಮೀನು ಹಿಡಿಯುವುದಕ್ಕಾಗಿ ಕೈಯಲ್ಲಿ ದೊಡ್ಡದಾದ ದಾರದುಂಡೆಯನ್ನು ಹಿಡಿದು ನೀರೊಳಗೆ ಗಾಣವನ್ನು ಒಗೆದು ಕಾತರದಿಂದಲೂ ಏಕಾಗ್ರತೆಯಿಂದಲೂ ಕಾದು ಕುಳಿತಿರುವ ಧೀವರ (ಬೆಸ್ತರು) ತಪಸ್ವಿಗಳನ್ನು ನಾವು ನದೀ ತೀರ ಸರೋವರ ತೀರಗಳಲ್ಲಿ ನೋಡಬಹುದು. ಕೆಲವು ಸಮಯ ಒಂದೊಂದು ಮೀನಿಗಾಗಿ ಬೆಳಗಿನಿಂದ ಸಂಜೆಯವರೆಗೂ ಅಥವಾ ಮಧ್ಯರಾತ್ರಿಯವರೆಗೂ ಆ ಮಹಾ ತಪಸ್ವಿಗಳು ಕಾಯುವುದುಂಟು. ಅವರ ಉದ್ದೇಶವು ಎಷ್ಟೇ ಕ್ಷುದ್ರ

ವಾದುದಿರಲಿ, ಅವರ ಸಾಧನವು ಶ್ಲಾಘನೀಯವಾದುದು. ಏಕೆಂದರೆ ಅವರ ಸಹನೆಯೂ, ಸಮಾಧಾನವೂ, ನಿರೀಕ್ಷಕ ಶಕ್ತಿಯೂ, ಉತ್ಸಾಹವೂ, ನಿಶ್ಚಲತೆಯೂ, ಆಸನಸಿದ್ಧಿಯೂ, ಏಕಾಗ್ರತೆಯೂ, ಲಕ್ಷ್ಯಾನುಸಂಧಾನ ಪಾಟವವೂ, ಅಕುಂಠಿತವಾದ ಧ್ಯೇಯಸಾಧನಾಪೇಕ್ಷೆಯೂ ಆಶ್ಚರ್ಯಕರವಾದುದು. ಇದರಿಂದ ಯೋಗಿಯು ಕಲಿಯತಕ್ಕ ಪಾಠವಿದೆ.

ಯೋಗಿಯೂ ಚಿತ್ತಸರೋವರದಲ್ಲಿ ಧ್ಯಾನವೆಂಬ ಗಾಳವನ್ನು ಹಾಕಿ ಚಂಚಲವಾದ ಮನಸ್ಸೆಂಬ ಮೀನನ್ನು ಹಿಡಿದುಕೊಳ್ಳಲು ಸಹನೆಯಿಂದಲೂ, ಸಮಾಧಾನದಿಂದಲೂ, ಉತ್ಸಾಹದಿಂದಲೂ, ಆಸನಸಿದ್ಧಿಯಿಂದಲೂ, ನಿಶ್ಚಲತೆಯಿಂದಲೂ, ಏಕಾಗ್ರತೆಯಿಂದಲೂ ಮತ್ತು ಲಕ್ಷ್ಯಾನುಸಂಧಾನಪೂರ್ವಕವಾಗಿಯೂ ಬಹುಕಾಲ ತಪಸ್ಸು ಮಾಡಬೇಕು. ಗಾಳಕ್ಕೆ ಮೀನು ಬಾಯಿ ಹಾಕಿದೊಡನೆಯೇ ಧೀವರನು ಅವಿಚಾರದಿಂದಲೂ, ಆತುರದಿಂದಲೂ ಎಳೆದು ಬಿಡುವುದಿಲ್ಲ. ಗಾಳವನ್ನು ಕಚ್ಚಿದೊಡನೆಯೇ ಮೀನನ್ನು ಸೆಳೆದುಕೊಳ್ಳದೇ ಅವನು ಕೈಯಲ್ಲಿರುವ ಉದ್ದವಾದ ಹುರಿಯನ್ನು ಬಿಚ್ಚಿ ಬಿಡುತ್ತಾ ಬರುತ್ತಾನೆ. ಗಾಳವನ್ನು ನುಂಗಿದ ಮೀನು ಅದನ್ನು ಉಗುಳಿ ಬಿಡಿಸಿಕೊಳ್ಳುವುದಕ್ಕಾಗಿ ತನ್ನ ಸರ್ವಶಕ್ತಿಯಿಂದಲೂ ಎಳೆದಾಡಿ ಜಗ್ಗಾಡಿ ಹಾರಾಡುತ್ತದೆ. ಅದು ಮೊದ ಮೊದಲು ಜಗ್ಗಿದಷ್ಟೂ ಧೀವರನು ಹುರಿಯನ್ನು ಬಿಚ್ಚಿ ಬಿಡುತ್ತಾ ಬರುತ್ತಾನೆ. ಎಷ್ಟು ಹೊತ್ತಾದರೂ ಆ ಮೀನು ಎಷ್ಟು ಒದ್ದಾಡಿದರೂ ಕೊನೆಯಲ್ಲಿ ತನ್ನ ಕೈಗೆ ಸಿಕ್ಕೇ ಸಿಕ್ಕುವುದೆಂಬ ಭರವಸೆಯಿರುವುದರಿಂದ ಅವನು ಹುರಿಯನ್ನು ಎಷ್ಟು ಉದ್ದವಾದರೂ ಬಿಡುತ್ತಾನೆ. ಮೀನು ಜಗ್ಗಿದಷ್ಟೂ ಅದರ ಗಂಟಲಲ್ಲಿ ಗಾಳದ ಉಕ್ಕಿನ ಕೊಂಡಿಯು ಹೆಚ್ಚು ಬಲವಾಗಿ ಸಿಕ್ಕಿಕೊಂಡು ಅದನ್ನು ನಿರ್ವೀರ್ಯವಾಗಿ ಮಾಡುತ್ತದೆ. ಕುಣಿದಾಡಿ ಕುಣಿದಾಡಿ ಮೀನು ನಿರ್ವಿಣ್ಣವಾಗಿಯೂ ನಿಶ್ಚೇಷ್ಟವಾಗಿಯೂ ಆದ ಕೂಡಲೇ ಧೀವರನು ಸರಿಯಾದ ಸಮಯವೆಂದು ತಿಳಿದು ದಾರವನ್ನು ಸುತ್ತುವುದಕ್ಕೆ ತೊಡಗಿ ಸೆಳೆದುಕೊಂಡು ಕೈಗೆ ತಗೆದುಕೊಳ್ಳುತ್ತಾನೆ.

ಹಾಗೆಯೇ ಸುಧೀವರನಾದ ಯೋಗಿಯೂ ಚಿತ್ತಸರೋರವದಲ್ಲಿ ಧ್ಯಾನವೆಂಬ ಗಾಳವನ್ನು ಒಗೆದಕೂಡಲೇ ಮನೋಮತ್ಸ್ಯವು ಕೈಗೆ ಸಿಕ್ಕಿಬಿಡಬೇಕೆಂದು ಆತುರಪಡುವುದು ಮನಸ್ಸಿನ ಸ್ವಭಾವವನ್ನು ತಿಳಿಯದ ಕೇವಲ ಅವಿಚಾರವೇ

ಸರಿ. ತೀಕ್ಷ್ಣವೂ ದೃಢವೂ ಆದ ಉಕ್ಕಿನ ಗಾಳದಂತಿರುವ ಧ್ಯಾನಸಂಸ್ಕಾರವನ್ನು ನುಂಗಿದ ಮನಸ್ಸು ತನ್ನ ಸ್ವಚ್ಛಂದತೆಯನ್ನು ಕಳೆದುಕೊಳ್ಳಬೇಕಾದೀತೆಂಬ ಸಂಕಟದಿಂದ ಧ್ಯಾನೇಚ್ಛೆಯನ್ನು ಉಗುಳುವುದಕ್ಕಾಗಿ ಅತಿ ಸಾಹಸದಿಂದ ಹೋರಾಡುತ್ತದೆ. ಇದರ ಮರ್ಮವನ್ನು ತಿಳಿದ ಸುಧೀವರ ಯೋಗಿಯು ಸಹನೆಯಿಂದಲೂ, ಶಾಂತಿಯಿಂದಲೂ, ಧೈರ್ಯೋತ್ಸಾಹದಿಂದಲೂ. ಭರವಸೆಯಿಂದಲೂ ತನ್ನ ವಶದಲ್ಲಿರುವ ಸಂಯಮಸೂತ್ರವನ್ನು ಸ್ವಲ್ಪಕಾಲ ಬಿಚ್ಚಿ ಸಡಿಲಿಸಿ ಆ ಮನೋಮತ್ಸ್ಯದ ಸ್ವೈರ ತಾಂಡವವನ್ನು ವಿನೋದದಿಂದ ಸಾಕ್ಷಿಯಾಗಿ ನೋಡುತ್ತಿರಬೇಕು. ಹಾಗಲ್ಲದೇ ಖತಿಗೊಂಡು ಭಯದಿಂದಲೂ, ಆತುರದಿಂದಲೂ ಮೀನನ್ನು ಎಳೆದಾಡಿದರೆ ಗಾಳವು ಕಿತ್ತುಬಂದು ಮೀನು ತಪ್ಪಿಸಿಕೊಂಡೇ ಹೋಗುವಂತೆ, ಸಂಯಮಕ್ಕೆ ವಿರೋಧಿಯಾಗಿ ಹೋರಾಡುವ ಮನಸ್ಸಿನೊಡನೆ ಹೆಣಗಾಡುವುದಕ್ಕೆ ತೊಡಗಿದರೆ ಯೋಗಿಯು ವ್ಯರ್ಥವಾದ ಶ್ರಮದಿಂದ ಹೆಣವಾಗಬೇಕಾಗುತ್ತದೆ, ಮಾತ್ರ. ಸಂಯಮ ಸೂತ್ರವನ್ನು ಚಾತುರ್ಯದಿಂದ ಸ್ವಲ್ಪಹೊತ್ತು ಸಡಿಲಿಸಿದಂತಿದ್ದರೂ ದೃಢವಾದ ಧ್ಯಾನೇಚ್ಛೆಯು ಅಂತರಾಳದಲ್ಲಿ ಅಡಗಿಯೇ ಇರುವುದರಿಂದ ಮನಸ್ಸು ಸ್ವಚ್ಛಂದವಾಗುವುದಕ್ಕೆ ಎಷ್ಟು ಕುಣಿದಾಡಿದರೂ ಧ್ಯಾನಸಂಸ್ಕಾರವು ಒಳಗೇ ಗಂಟಲಲ್ಲಿ ನಾಟಿಕೊಂಡು ಅದು ನಿರ್ವಿಣ್ಣವಾಗಿ ಸಾಕ್ಷಿಚೇತನನ ಕೈಯೊಳಗೆ ಸೆಳೆದು ಬೀಳುತ್ತದೆ. ಯೋಗಸೂತ್ರದಲ್ಲಿಯೂ ಹೀಗೆಯೇ ಹೇಳಿದೆ;

**" ವ್ಯುತ್ಥಾನ-ನಿರೋಧ ಸಂಸ್ಕಾರಯೋರಭಿಭವ-ಪ್ರಾದುರ್ಭಾವೌ ನಿರೋಧಕ್ಷಣಚಿತ್ತಾನ್ವಯೋ ನಿರೋಧ-ಪರಿಣಾಮಃ ॥ "**

" ಚಿತ್ತಕ್ಕೆ ವಿಕ್ಷೇಪವನ್ನು ಉಂಟುಮಾಡತಕ್ಕಂಥ ಸಂಸ್ಕಾರಗಳ ಅಡಗುವಿಕೆಯಿಂದಲೂ, ನಿರೋಧವನ್ನುಂಟುಮಾಡತಕ್ಕ ಸಂಸ್ಕಾರಗಳ ಉದಯದಿಂದಲೂ ನಿರೋಧ ಸಮಯದಲ್ಲಿ ಉಳಿಯುವ ಚಿತ್ತವೃತ್ತಿಯೇ ನಿರುದ್ಧವೃತ್ತಿಯೆಂದು ಕರೆಯಲ್ಪಡುತ್ತದೆ. "

ಇಂದ್ರಿಯಗಳ ದ್ವಾರದಿಂದ ಹೊರಗೆ ನುಗ್ಗುವುದಕ್ಕೆ ಮನಸ್ಸನ್ನು ಪ್ರೇರಿಸುತ್ತಿರುವ ವೃತ್ತಿಯು ಚಿತ್ತದಲ್ಲಿದ್ದರೆ ಯೋಗಿಯು ಅದನ್ನು ನಿರೋಧಿಸುವುದಕ್ಕೆ ಪ್ರಯತ್ನಪಡುತ್ತಾನೆ. ಕ್ರಮೇಣ ಮನಸ್ಸನ್ನು ಹೊರಚೆಲ್ಲುವ ವೃತ್ತಿಗಳೆಲ್ಲಾ ಶಾಂತವಾಗಿ ನಿರೋಧಮಾಡುವ ವೃತ್ತಿಯೇ ಬಲಗೊಂಡು ನಿರುದ್ಧವೃತ್ತಿಯೇ

ನಿಲ್ಲುತ್ತದೆ. ಒಂದು ಬಗೆಯ ವೃತ್ತಿಗಳನ್ನು ಇನ್ನೊಂದು ಬಗೆಯ ವೃತ್ತಿಯು ತಡೆಗಟ್ಟಿರುವುದೇ ಹೊರತು ಅದು ನಿಜವಾದ ಸಮಾಧಿಯಲ್ಲ. ಆದರೂ ವೃತ್ತಿ ಶೂನ್ಯವಾದ ನೈಜಸಮಾಧಿಗೆ ಇದು ಅತ್ಯಂತ ಸಮೀಪ ಸಾಧನವು.

ಮೂಲಾಧಾರಾದಿ ಸಹಸ್ರಾರಾಂತವಾದ ಯಾವುದೊಂದು ಚಕ್ರದಲ್ಲಿ ಮನಸ್ಸು ಬಹಳ ಹೊತ್ತು ನಿಲ್ಲಬೇಕಾದರೆ ಅದಕ್ಕೆ ಒಂದು ಅವಲಂಬನವು ಬೇಕು. ಆ ಅವಲಂಬನವು ಮೂರು ವಿಧಗಳಾಗಿವೆ. ಸ್ಥೂಲಾವಲಂಬನ, ಸೂಕ್ಷ್ಮಾವಲಂಬನ, ಸ್ವಾವಲಂಬನ ಎಂದು ಮೂರು ಬಗೆ. ಹಿಂದೆಯೇ ವಿಚಾರಮಾಡಿರುವಂತೆ ನಮಗೆ ಯಾವುದೊಂದು ವಿಷಯಜ್ಞಾನವಾಗಬೇಕಾದರೂ ಹೊರಗೆ ಸಂವೇದನೆಗೆ ಕಾರಣವಾದ ಒಂದು ಭೌತಿಕ ವಸ್ತುವು ಬೇಕು. ಆ ಬಾಹ್ಯ ವಿಷಯಗಳಿಂದ ಜ್ಞಾನೇಂದ್ರಿಯಗಳ ಸಂವೇದನೆಯೂ ಅದರಿಂದ ನರಗಳ ಮೂಲಕವಾದ (ಮೆದುಳಿದಲ್ಲಿರುವ) ಇಂದ್ರಿಯ ಕೇಂದ್ರಗಳ ಸಂವೇದನೆಯೂ ಮನಸ್ಸಿನ ಪ್ರತಿಕ್ರಿಯೆಯೂ ಮೂರೂ ಬೇಕು. ನಾವು ಒಂದು ಶಬ್ದವನ್ನು ಕೇಳುತ್ತೇವೆ. ನಮಗಾಗುವ ಈ ಶಬ್ದಾನುಭವವನ್ನು ವಿಭಜನೆ ಮಾಡಿದರೆ, ಮೊದಲು ವಾತಾವರಣದಲ್ಲಿ ಒಂದು ವಸ್ತುವಿನ ಸಂಚಲನೆಯಿಂದುಂಟಾಗುವ ಸ್ಪಂದನವಿದೆ. ಎರಡನೆಯದಾಗಿ ಜ್ಞಾನವಾಹೀ ನರಗಳ ಮೂಲಕ ಮನಸ್ಸಿಗೆ ಮುಟ್ಟಿಸುವ ಇಂದ್ರಿಯ ಸಂವೇದನೆಯಿದೆ. ಮೂರನೆಯದಾಗಿ ಮನಸ್ಸಿನ ಪ್ರತಿಕ್ರಿಯೆಯಿದೆ. ಯಾವ ವಿಷಯವು ಬಾಹ್ಯಸ್ಪಂದನದಿಂದ ಇಂದ್ರಿಯ ಸಂವೇದನೆಯ ಮೂಲಕ ಮನಸ್ಸಿನ ಪ್ರತಿಕ್ರಿಯೆಗೆ ಕಾರಣವಾಯಿತೋ ಆ ವಿಷಯದ ಜ್ಞಾನವು ಮೂರನೆಯ ಸ್ಥಿತಿಯಾದ ಅಂತಃಕರಣದ ಪ್ರತಿಕ್ರಿಯೆಯ ಮೂಲಕ ಭಾಸವಾಗುತ್ತದೆ. ಇದಕ್ಕೆ ವೃತ್ತಿಜ್ಞಾನವೆಂದೂ ಹೆಸರು. ಆದರೆ ನೇತ್ರೇಂದ್ರಿಯದ ಮೂಲಕ ರೂಪವನ್ನು ಗ್ರಹಿಸುವಾಗ ಚೇತನಾತ್ಮಕವಾದ ನಮ್ಮ ಮನಸ್ಸೇ ನೇತ್ರಗಳ ದ್ವಾರದಿಂದ ತಾನೇ ಹರಿದುಹೋಗಿ ವಸ್ತುಗಳನ್ನು ಆವರಿಸಿ, ಉಂಟಾದ ವೃತ್ತಿಯಿಂದ ನಮಗೆ ವಸ್ತುಜ್ಞಾನವನ್ನು ಮಾಡಿಕೊಡುತ್ತಿರುವಂತೆ ಅನುಭವ ಬರುತ್ತದೆ.

ಯೌಗಿಕ ಪ್ರಕ್ರಿಯೆಯಲ್ಲಿ ಶಬ್ದಾರ್ಥಜ್ಞಾನವೆಂಬುದಿದೆ. " **ತತ್ರ ಶಬ್ದಾರ್ಥಜ್ಞಾನ ವಿಕಲ್ಪೈಃ ಸಂಕೀರ್ಣಾ ಸವಿತರ್ಕಾ ಸಮಾಪತ್ತಿಃ ||** "

"ಶಬ್ದ, ಅರ್ಥ ಮತ್ತು ಫಲರೂಪವಾದ ಜ್ಞಾನ ಇವು ಮೂರೂ ಸಮ್ಮಿಶ್ರವಾಗಿ ಉಂಟಾಗುವ ಅನುಭವವು ಸವಿತರ್ಕ ಅಥವಾ ಸವಿಕಲ್ಪವಾದುದು (ಪ್ರಶ್ನಾರ್ಥಕವಾದುದು)" ಇಲ್ಲಿ ಶಬ್ದವೆಂದರೆ ಹೊರಗೆ ವಾತಾವರಣದಲ್ಲಿ ಆಗುವ ಸ್ಪಂದನವು; ಅರ್ಥವೆಂದರೆ ನರಗಳಲ್ಲಿಯೂ ಮಿದುಳಿನಲ್ಲಿಯೂ ಆಗುವ ಇಂದ್ರಿಯಸಂವೇದನೆ; ಜ್ಞಾನವೆಂದರೆ ಮಾನಸಿಕ ಪ್ರತಿಕ್ರಿಯೆ. ನಮ್ಮ ಪ್ರತಿಯೊಂದು ಅನುಭವದಲ್ಲಿಯೂ ಪ್ರತ್ಯೇಕವಾದ ಈ ಮೂರೂ ಕ್ರಮಗಳಿದ್ದರೂ, ಈ ಮೂರು ವಿಶಿಷ್ಟವಾದ ಗತಿಗಳ ಮಿಶ್ರವಾದ ಒಂದೇ ಸ್ಥಿತಿಯು ಮಾತ್ರ ನಮ್ಮ ಅನುಭವಕ್ಕೆ ಬರುತ್ತದೆ. ಈ ಬಗೆಯ ಧ್ಯಾನಗಳಲ್ಲಿ ಜ್ಞಾತೃ–ಜ್ಞಾನ–ಜ್ಞೇಯ ಎಂಬ ತ್ರಿಪುಟಿಯಿದೆ, ಅಥವಾ ಚಿತ್ತದ ಮೂರು ಕವಲುಗಳಿವೆ.

ಪ್ರತ್ಯಾಹಾರಾದಿ ಪೂರ್ವಸಿದ್ಧತೆಗಳಿಂದ ಚಿತ್ತವು ಸಂಯಮಿತವೂ, ಸಶಕ್ತವೂ, ಸೂಕ್ಷ್ಮವೂ ಆದೊಡನೆ ಅದನ್ನು ಧ್ಯಾನಕ್ಕೆ ಹಚ್ಚಬೇಕು. ಈ ಧ್ಯಾನವು ಮೊದಲು ಸ್ಥೂಲವಾದ ಬಾಹ್ಯವಸ್ತುಗಳಿಂದ ಪ್ರಾರಂಭವಾಗಿ ಮೆಲ್ಲ ಮೆಲ್ಲಗೆ ಹೆಚ್ಚು ಹೆಚ್ಚು ಸೂಕ್ಷ್ಮವಾದ ಲಕ್ಷ್ಯಗಳಿಗೆ ಏರುತ್ತಾ ಹೋಗಿ ಕೊನೆಗೆ ವಿಷಯಶೂನ್ಯವಾಗಬೇಕು.

**"ಸೂಕ್ಷ್ಮ ವಿಷಯತ್ವಂ ಚಾಲಿಂಗ–ಪರ್ಯವಸಾನಂ ॥"**

"ಸೂಕ್ಷ್ಮ ವಿಷಯಗಳು ಪ್ರಧಾನದಲ್ಲಿ ಕೊನೆಗಾಣುತ್ತವೆ." ಪಂಚಭೂತಗಳೂ, ಭೌತಿಕವಾದ ಸಮಸ್ತ ವಸ್ತುಗಳೂ ಸ್ಥೂಲವಾದವುಗಳು. ಸೂಕ್ಷ್ಮ ವಸ್ತುಗಳು ತನ್ಮಾತ್ರೆಗಳಿಂದ ಪ್ರಾರಂಭವಾಗುತ್ತವೆ. ಇಂದ್ರಿಯಗಳೂ, ಮನಸ್ಸೂ, ಅಹಂಕಾರವೂ, ಚಿತ್ತವೂ, ಸತ್ವರಜಸ್ತಮೋಗುಣಗಳ ಸಮತಾರೂಪವಾದ ಪ್ರಧಾನವೂ ಅಥವಾ ಪ್ರಕೃತಿಯೂ ಅವ್ಯಕ್ತವೂ ಸೂಕ್ಷ್ಮಸೃಷ್ಟಿಯಲ್ಲಿಯೇ ಸೇರಿವೆ. ಪುರುಷನು ಅಥವಾ ಆತ್ಮನೊಬ್ಬನೇ ಸ್ಥೂಲಸೂಕ್ಷ್ಮ ಸೃಷ್ಟಿಗೆ ಹೊರತಾದವನು, ನಿರ್ವಿಷಯನಾದವನು.

ಅಂತಃಕರಣವು ಮೊದಲು ಸಂವೇದನೆಯ ಬಾಹ್ಯ ಕಾರಣ (ವಸ್ತು) ಗಳನ್ನೂ ಅನಂತರ ಆಂತರಿಕವಾದ ಸಂವೇದನೆಗಳನ್ನೂ ಅಂತ್ಯದಲ್ಲಿ ತನ್ನದೇ ಆದ ವೃತ್ತಿರೂಪ ಪ್ರತಿಕ್ರಿಯೆಯನ್ನೂ ನಿರೀಕ್ಷಿಸಬೇಕು. ಈ ಮೂರು ಕ್ರಮಗಳಲ್ಲಿ ಮೊದಲನೆಯದೇ ಸ್ಥೂಲಾವಲಂಬಿಯಾದ ಧ್ಯಾನವೆಂದೂ, ಎರಡನೆ

ಯದೇ ಸೂಕ್ಷ್ಮಾವಲಂಬಿಯಾದ ಧ್ಯಾನವೆಂದೂ, ಮೂರನೆಯದೇ ಸ್ವಾವಲಂಬಿಯಾದ ಧ್ಯಾನವೆಂದೂ ಹೇಳಬಹುದು. ಮನಸ್ಸು ಸಂವೇದನೆಯ ಕೇವಲ ಬಾಹ್ಯ ಕಾರಣಗಳನ್ನಷ್ಟೇ ನಿರೀಕ್ಷಿಸುವುದರಲ್ಲಿ ಯಶಸ್ವಿಯಾದರೆ, ಅದು ಎಲ್ಲಾ ಭೌತಿಕ ವಸ್ತುಗಳ ಸೂಕ್ಷ್ಮರೂಪಗಳನ್ನೂ, ಸೂಕ್ಷ್ಮ ಸ್ಥಿತಿಗಳನ್ನೂ ಅಪೇಕ್ಷಿಸುವ ಶಕ್ತಿಯನ್ನು ಪಡೆಯುತ್ತದೆ. ದೇಹದೊಳಗಾಗುವ ಕೇವಲ ಸಂವೇದನೆಗಳನ್ನಷ್ಟೇ ಮನಸ್ಸು ನಿರೀಕ್ಷಿಸುವ ಶಕ್ತಿಯನ್ನು ಪಡೆದರೆ ಅದು ತನ್ನ ಅಥವಾ ಪರರ ಸಮಸ್ತ ಭಾವನಾತರಂಗಗಳ ಮೇಲೆ ನಿಯಂತ್ರಣವನ್ನು ಪಡೆಯುತ್ತದೆ. ಕೇವಲ ಮಾನಸಿಕ ಪ್ರತಿಕ್ರಿಯೆಗಳನ್ನಷ್ಟೇ (ವೃತ್ತಿಗಳನ್ನು ಮಾತ್ರ) ಯೋಗಿಯು ನೋಡಬಲ್ಲನಾದರೆ, ಇಂದ್ರಿಯಗೋಚರವಾದ ಪ್ರತಿಯೊಂದು ವಿಷಯವೂ, ಪ್ರತಿಯೊಂದು ಭಾವನೆಯೂ ಮಾನಸಿಕ ಪ್ರತಿಕ್ರಿಯೆಯ ಪರಿಣಾಮವೇ ಆದುದರಿಂದ ಸಮಸ್ತ ವಿಷಯಗಳ ಜ್ಞಾನವನ್ನೂ ಪಡೆಯುತ್ತಾನೆ. ಆಗ ಯೋಗಿಯು ಮನಸ್ಸಿನ ಅಸ್ತಿವಾರವನ್ನೆಲ್ಲಾ ಶೋಧಿಸಿದವನಾಗುವುದರಿಂದ ಅದನ್ನು ಪೂರ್ಣ ಸ್ವಾಧೀನಮಾಡಿಕೊಳ್ಳುತ್ತಾನೆ. ಆಗ ಯೋಗಿಗೆ ಅನೇಕ ಸಿದ್ಧಿಗಳು ಪ್ರಾಪ್ತವಾಗುತ್ತವೆ. ಇವು ಲೌಕಿಕವಾಗಿ ಸಿದ್ಧಿಗಳಾದರೂ ಸಮಾಧಿಗೆ ವಿಘ್ನಗಳು. ಯಾವುದೊಂದು ಸಿದ್ಧಿಯ ಚಮತ್ಕಾರಕ್ಕೆ ಯೋಗಿಯು ಮರುಳಾದರೆ ಆಧ್ಯಾತ್ಮಿಕ ಲಕ್ಷ್ಯದಿಂದ ಜಾರಿದವನಾಗುತ್ತಾನೆ. ಸಿದ್ಧಿಗಳಿಗೆ ಬಾಯಿಸೀರು ಕರೆಯದೇ ಚಿತ್ತಸಾಗರದ ಸಮಸ್ತ ತರಂಗಗಳನ್ನೂ ಅಡಗಿಸಿದರೆ ಸಮಾಧಿಸ್ಥಿತಿಯು ದೊರೆತು ಸಚ್ಚಿದಾನಂದ ಸ್ವರೂಪನಾದ ಆತ್ಮನ ಸಾಕ್ಷಾತ್ಕಾರವಾಗುತ್ತದೆ.

ಮೊದಲು ಬಾಹ್ಯಾವಲಂಬಿಯಾದ ಸ್ಥೂಲರೂಪದ ಧ್ಯಾನವನ್ನು ವಿಚಾರಿಸೋಣ. ಅಕ್ಷರಾಭ್ಯಾಸವನ್ನು ಪ್ರಾರಂಭಿಸಿರುವ ಬಾಲಕನು ಮೊದಮೊದಲು ದೊಡ್ಡ ಗಾತ್ರದ ಅಕ್ಷರಗಳ ಮೇಲೆ ತಿದ್ದುವಂತೆ ಧ್ಯಾನಾಭ್ಯಾಸಿಯಾದ ಮನಸ್ಸು ಮೊದಲು ಸ್ಥೂಲವಾದ ಅತಿ ದೊಡ್ಡ ವಸ್ತುವನ್ನು ಚಿಂತಿಸುವುದು ಸುಲಭ. ಧನುರ್ವಿದ್ಯೆಯನ್ನು ಅಭ್ಯಾಸಮಾಡತಕ್ಕವನೂ ಸೂಕ್ಷ್ಮಲಕ್ಷ್ಯವನ್ನು ಭೇದಿಸುವುದಕ್ಕೆ ಮೊದಲು ಸ್ಥೂಲವಾದ ಲಕ್ಷ್ಯವನ್ನು ಸಾಧಿಸುತ್ತಾನೆ. ಮರದ ತುದಿಯ ಸಣ್ಣ ಹಣ್ಣನ್ನು ಕಲ್ಲಿನಿಂದ ಹೊಡೆಯುವುದಕ್ಕೆ ಹಣ್ಣಿರುವ ರೆಂಬೆಯನ್ನು ದೂರದಿಂದ ಹೊಡೆಯುವುದನ್ನು ಕಲಿಯಬೇಕು. ಅದೂ ಕಷ್ಟವಾದರೆ ದೂರ ನಿಂತು ಕಲ್ಲಿನಿಂದ ಮರವನ್ನಾದರೂ ಹೊಡೆಯುವ ಅಭ್ಯಾಸಮಾಡಬೇಕು. ಮರಕ್ಕೇ

ಗುರಿಯಿಟ್ಟು ಹೊಡೆದರೆ ಬಹಳಮಟ್ಟಿಗೆ ಗುರಿಯು ತಪ್ಪುವುದಿಲ್ಲ. ಯಾವ ಗುರಿಯನ್ನೂ ಹೊಡೆಯಲಾರದ ಅಶಿಕ್ಷಿತವಾದ ಕೈಯು ಮೊದಲು ಒಂದು ದೊಡ್ಡ ಗುರಿಯನ್ನಾದರೂ ಇಟ್ಟುಕೊಂಡು ಹೊಡೆಯುವುದನ್ನು ಕಲಿತರೆ, ಕೈಗೆ ಒಂದು ಶಿಕ್ಷಣವೂ ಸಾಧನವೂ ಆಗಿ ಶಕ್ತಿ ಪಡೆಯುತ್ತದೆ. ಅನಂತರ ಮೊದಲನೆಯ ಆ ದೊಡ್ಡ ಗುರಿಗಿಂತಲೂ ಸ್ವಲ್ಪ ಸಣ್ಣದಾದ ಗುರಿಯನ್ನೂ, ಅದೂ ಅಭ್ಯಾಸವಾದ ನಂತರ ಇನ್ನೂ ಸಣ್ಣ ಗುರಿಯನ್ನೂ ಸಾಧಿಸುತ್ತಾ ಬರಬೇಕು. ಹಾಗೆಯೇ ಒಂದು ಎತ್ತರವಾದ ಮರದ ತುದಿಯಲ್ಲಿರುವ ಸಣ್ಣದೊಂದು ಹಣ್ಣನ್ನು ಕಲ್ಲಿನಿಂದ ಹೊಡೆಯಬೇಕೆನ್ನುವವನು ಮೊದಲು ದೂರದಿಂದ ಆ ಮರವನ್ನು ಹೊಡೆಯುವುದಕ್ಕೆ ಕಲಿಯಬೇಕು. ಹತ್ತು ಕಲ್ಲುಗಳನ್ನೆಸೆದರೆ ಹತ್ತು ಕಲ್ಲೂ ಮರಕ್ಕೇ ಬೀಳುವುದು ಅಭ್ಯಾಸವಾದ ಮೇಲೆ ನಮಗೆ ಬೇಕಾದ ಆ ಒಂದು ಹಣ್ಣಿರುವ ದೊಡ್ಡ ಕೊಂಬೆಯನ್ನು ಕಲ್ಲಿನಿಂದ ಹೊಡೆಯುವುದಕ್ಕೆ ಅಭ್ಯಾಸಮಾಡಬೇಕು. ಅದೂ ಚೆನ್ನಾಗಿ ಅಭ್ಯಾಸವಾದ ನಂತರ ಆ ಕೊಂಬೆಯಲ್ಲಿ ಹಣ್ಣು ಬಿಟ್ಟಿರುವ ಪುಟ್ಟ ರೆಂಬೆಯನ್ನೂ, ಅನಂತರ ಹಣ್ಣಿನ ಗೊಂಚಲನ್ನೂ ಕೊನೆಯಲ್ಲಿ ಆ ಹಣ್ಣನ್ನೂ ಹೊಡೆಯಬೇಕು. ಈ ಕ್ರಮದಿಂದ ಸಾಧಿಸಿದರೆ ಫಲವು ದೊರೆಯುವುದೇ ಹೊರತು, ಅಭ್ಯಾಸವಿಲ್ಲದಿದ್ದರೂ ಫಲವು ದೊರಕಬೇಕೆಂಬ ಉತ್ಸಾಹಮಾತ್ರದಿಂದ ಮುರ್ಪವರಿಯುದೇ. ಆ ಫಲವನ್ನೇ ಗುರಿಯಿಟ್ಟು ಸಾವಿರ ಕಲ್ಲುಗಳಿಂದ ಹೊಡೆದರೂ ಒಂದು ಕಲ್ಲೂ ಆ ಫಲಕ್ಕೆ ತಾಕದಿರಬಹುದು. ಫಲಕ್ಕಂತೂ ಇರಲಿ, ಕ್ರಮಾಭ್ಯಾಸವಿಲ್ಲದಿದ್ದರೆ ಆ ಕೊಂಬೆಗೂ ಕಲ್ಲು ತಾಕದಿರಬಹುದು. ಆದ್ದರಿಂದ ಕ್ರಮಾಭ್ಯಾಸದಲ್ಲಿ ಬಹಳ ಮಹತ್ವವೂ ವಿಶ್ವಾಸವರ್ಧನವೂ ನಿಶ್ಚಿತ ಸಿದ್ಧಿಯೂ ಇವೆ.

ಹಾಗೆಯೇ ಶಿವಲಿಂಗವನ್ನು ಧ್ಯಾನಮಾಡಬೇಕೆಂಬ ಇಚ್ಛೆಯುಳ್ಳವನು ಹೃದಯದಲ್ಲಿಯೋ ಭ್ರೂಮಧ್ಯದಲ್ಲಿಯೋ ಲಕ್ಷ್ಯವನ್ನು ನಿಲ್ಲಿಸಿ ಸಣ್ಣದಾದ ಲಿಂಗವನ್ನೇ ಚಿಂತಿಸುವುದಕ್ಕೆ ಹೋದರೆ ಅನಭ್ಯಾಸಿಯಾದ ಸ್ಥೂಲಮನಸ್ಸಿಗೆ ಕಠಿಣವಾಗಬಹುದು; ಅಥವಾ ಸಾಧ್ಯವಾಗದಿರಬಹುದು. ಆದರೆ ಮಲ್ಲಿಕಾರ್ಜುನ ಲಿಂಗವನ್ನು ಧ್ಯಾನಿಸುವುದಕ್ಕೆ ಮೊದಲು ಮಲ್ಲಿಕಾರ್ಜುನ ದೇವಾಲಯವನ್ನು ಚಿಂತಿಸುವುದು ಸುಲಭ. ಅದಕ್ಕಿಂತಲೂ ಮೊದಲು ಶ್ರೀಶೈಲ ಪರ್ವತವನ್ನೇ ಧ್ಯಾನಿಸುವುದು ಮನಸ್ಸಿಗೆ ಬಹಳ ಸುಲಭವಾಗುತ್ತದೆ. ಆದ್ದರಿಂದ ಮೊದಲು

ಪುಣ್ಯತೀರ್ಥಗಳಿಂದಲೂ, ರಮ್ಯವಾದ ಅರಣ್ಯಗಳಿಂದಲೂ, ಮನೋಹರವಾದ ಮೃಗಪಕ್ಷಿಗಳಿಂದಲೂ ಶೋಭಿಸುವ ಶ್ರೀಶೈಲ ಪರ್ವತವನ್ನು ವಿಧವಿಧವಾಗಿ ಬಹಳ ಹೊತ್ತು ಮನಸ್ಸಿನಲ್ಲಿ ಭಾವಿಸಬೇಕು. ಅಂತು ಹರಿದಾಡುವ ಸ್ವಭಾವದ ಮನಸ್ಸಿಗೆ ಹರಿದಾಟಕ್ಕೆ ಯಥೇಚ್ಛವಾಗಿ ಅವಕಾಶ ಕೊಟ್ಟರೂ ಅದು ಧ್ಯೇಯ ವಸ್ತುವಿಗೆ ಸಂಬಂಧಪಟ್ಟೇ ಇರುವಂತೆ ಯೋಜನಮಾಡಬೇಕು. ಮೊದಲೇ ಸಣ್ಣದೊಂದು ಲಿಂಗದಲ್ಲಿ ಮನಸ್ಸನ್ನು ಬಂಧಿಸುವುದಕ್ಕೆ ಹೋದರೆ ಅದರ ಕಲ್ಪನಾತ್ಮಕವಾದ ಅಭಿರುಚಿಗೆ ಅವಕಾಶವೇ ಇಲ್ಲದೇ ಅದು ಬೇಸರಪಟ್ಟು ಕೊಂಡು ಬೇರೆ ವಸ್ತುಗಳಿಗೆ ತಿರುಗಬಹುದು. ಆದ್ದರಿಂದ ಮೊದಲು ಮೊದಲು ಮನಸ್ಸಿನ ಅಪರಿಹಾರ್ಯವಾದ ಕಲ್ಪನಾಭಿರುಚಿಗೆ ಕೇವಲ ಒಂದು ಶಿವಲಿಂಗದ ಕಲ್ಪನೆಗಿಂತಲೂ ವಿಚಿತ್ರ ಶಿಲ್ಪ ಕಲಾಕೌಶಲದಿಂದ ವಿರಚಿತವಾದ ಸುಂದರ ಶಿವ ದೇವಾಲಯದ ಕಲ್ಪನೆಯೇ ರಮ್ಯವೂ ವಿಶಾಲವೂ ಆದ ಕ್ಷೇತ್ರವಾಗುತ್ತದೆ. ಇವಕ್ಕಿಂತಲೂ ಪವಿತ್ರ ಶಿವಸಂಬಂಧ ಭಾವನೆಯನ್ನು ಬೆಳೆಸುತ್ತಾ ಮನಸ್ಸು ವಿಶೇಷ ವಿಹಾರ ಮಾಡುವುದಕ್ಕಾಗಿ ಮನೋಹರವಾದ ಶ್ರೀಶೈಲ ಪರ್ವತದ ಕಲ್ಪನೆಯೇ ಹೆಚ್ಚು ವಿಶಾಲಕ್ಷೇತ್ರವಾಗುತ್ತದೆ.

ಮೊದಲು, ಶ್ರೀಶೈಲ ಪರ್ವತದ ಭಾವನೆಯನ್ನು ಮಾಡುತ್ತಿರುವಾಗ ಬಹಳ ಹೊತ್ತು ನಡುವೆ ಬೇರೆ ಯಾವುದೊಂದು ಭಾವನೆಯೂ ಬರಬಾರದು. ಹೀಗೆ ಕೆಲವು ದಿನಗಳು ಚೆನ್ನಾಗಿ ಅಭ್ಯಾಸವಾದ ನಂತರ ಶ್ರೀಶೈಲ ಶಿಖರ ದಲ್ಲಿರುವ ಭವ್ಯವಾದ ಮಲ್ಲಿಕಾರ್ಜುನ ದೇವಾಲಯವನ್ನು ಭಾವಿಸಬೇಕು. ಆ ದೇವಾಲಯದಲ್ಲಿ ರಮಣೀಯವಾದ ಬೇರೆ ಬೇರೆ ಭಾಗಗಳನ್ನೂ ದ್ವಾರಗಳನ್ನೂ ಶಿಖರವನ್ನೂ, ಕಲಶವನ್ನೂ, ಸಮಗ್ರ ಶಿಲಾಮಂದಿರವನ್ನೂ, ಅದರ ಶಿಲ್ಪ ಚಾತುರ್ಯ-ಸೌಂದರ್ಯಗಳನ್ನೂ, ಕ್ಷೇತ್ರಮಹಿಮೆಯನ್ನೂ, ಪುರಾಣವಿಚಾರ ಗಳನ್ನೂ ಮನಸ್ಸಿಗೆ ತಂದುಕೊಳ್ಳಬೇಕು. ಇದೂ ಕೆಲವು ದಿನಗಳು ಅಭ್ಯಾಸ ವಾದ ನಂತರ ಮನಸ್ಸಿನಿಂದಲೇ ಆ ದೇವಾಲಯದ ಒಳಗೆ ಪ್ರವೇಶಮಾಡಿ ಬೇರೆ ಬೇರೆ ಭಾಗಗಳನ್ನು ನೋಡುತ್ತಾ ಗರ್ಭಾಲಯಕ್ಕೆ ಹೋಗಬೇಕು. ಈ ಗರ್ಭಾಲ ಯದ ಮಧ್ಯದಲ್ಲಿರುವ ದಿವ್ಯವಾದ ಮಲ್ಲಿಕಾರ್ಜುನ ಲಿಂಗವನ್ನೂ, ಅದರ ಪೂಜಾ ಲಂಕಾರಗಳನ್ನೂ, ಸುತ್ತಲಿರುವ ಜ್ಯೋತಿಗಳನ್ನೂ, ಶಿವಮಹಿಮೆಯನ್ನೂ, ಲೀಲೆ ಗಳನ್ನೂ, ಸತ್ಯಸ್ವರೂಪವನ್ನೂ ಚಿಂತಿಸಬೇಕು. ಹೀಗೆ ಕೆಲವು ಕಾಲ ಅಭ್ಯಾಸ

ಮಾಡುತ್ತಾ ಬಂದರೆ ಕೊನೆಗೆ ಆ ಲಿಂಗದಲ್ಲಿಯೇ ಮನಸ್ಸನ್ನು ಬಹಳ ಹೊತ್ತು ನಿಲ್ಲಿಸುವ ಶಕ್ತಿಯು ಬರುತ್ತದೆ. ಭ್ರೂಮಧ್ಯದಲ್ಲಿ ಆ ಉಜ್ಜ್ವಲವಾದ ಲಿಂಗವು ಅಚಲವಾಗಿ ಹನ್ನೆರಡು ಸೆಕೆಂಡುಗಳು ನಿಂತರೆ ಶಿವಲಿಂಗದ ಧಾರಣೆಯಾಗುತ್ತದೆ. ಮೂರು ನಿಮಿಷಗಳಾದರೂ ಆ ಸ್ಥಿತಿಯು ಸ್ಥಿರವಾಗಿದ್ದರೆ ಒಂದು ಧ್ಯಾನನಾಗುತ್ತದೆ. ಈ ಧ್ಯಾನವು ಅಖಂಡವಾಗಿ ಅರ್ಧಘಂಟೆಯಾದರೂ ಆದರೆ ಒಂದು ಸಮಾಧಿಯೆನಿಸುತ್ತದೆ. ಮೂರೂಮುಕ್ಕಾಲು ಘಳಿಗೆಗಳ ಕಾಲ ಅಥವಾ ಒಂದೂವರೆ ಘಂಟೆಗಳ ಹೊತ್ತು ಸಮಾಧಿಸ್ಥಿತಿಯಿದ್ದರೆ ಆ ಸಮಾಧಿಯು ದೃಢವೂ ಭದ್ರವೂ ಆಗುತ್ತದೆ; ಮತ್ತು ಶರೀರವು ಪರವಶವಾಗುತ್ತದೆ. ಎಲ್ಲಾ ಇಷ್ಟದೇವತಾ ಮೂರ್ತಿಗಳ ಧ್ಯಾನವೂ ಇದರಂತೆಯೇ ಇದೆ.

ಧ್ಯಾನಾಭ್ಯಾಸಿಯು ತನ್ನ ಸಾಧನಾರಂಭ ಮಾಡುವುದಕ್ಕೆ ಈ ಜಗತ್ತಿನಲ್ಲಿ ಬಹಳ ದೊಡ್ಡ ವಸ್ತುವೆಂವರೆ ಈ ವಿಶ್ವವೇ ಆಗಿದೆ. ಈ ವಿಶ್ವಕ್ಕೇ ಪುರುಷಾಕಾರವನ್ನು ಕೊಟ್ಟು ಧ್ಯಾನಿಸಬೇಕು. ಇದಕ್ಕೆ ವಿಶ್ವರೂಪಧ್ಯಾನ ಅಥವಾ ವಿರಾಟ್ ಪುರುಷಧ್ಯಾನವೆಂದು ಹೆಸರು.

**ಭೂಃ ಪಾದೌ ಯಸ್ಯ ನಾಭಿರ್ವಿಯದಸುರನಿಲಶ್ಚಂದ್ರ**
**ಸೂರ್ಯೌ ಚ ನೇತ್ರೇ ।**
**ಕರ್ಣಾವಾಶಾಶ್ಶಿರೋದ್ಯೌರ್ಮುಖಮಪಿ ದಹನೋ**
**ಯಸ್ಯ ವಾಸೋಯಮಬ್ಧಿಃ ॥**
**ಅಂತಸ್ಸ್ಥಂ ಯಸ್ಯ ವಿಶ್ವಂ ಸುರ ನರ ಖಗ ಗೋ**
**ಭೋಗಿ ಗಂಧರ್ವ ದೈತ್ಯೈಃ ।**
**ಶ್ಚಿತ್ರಂ ರಂ ರಮ್ಯತೇ ತಂ ತ್ರಿಭುವನ ವಪುಷಂ**
**ವಿಷ್ಣುಮೀಶಂ ನಮಾಮಿ ॥**

" ಭೂಮಿಯು ಯಾವನ ಪಾದವೋ, ಆಕಾಶವು ನಾಭಿಯೋ, ವಾಯುವು ಪ್ರಾಣವೋ, ಚಂದ್ರಸೂರ್ಯರು ಕಣ್ಣುಗಳೋ, ದಿಕ್ಕುಗಳೇ ಕಿವಿಗಳೋ, ಸ್ವರ್ಗವೇ ಮಸ್ತಕವೋ, ಅಗ್ನಿಯೇ ಮುಖವೋ, ಸಮುದ್ರವೇ ವಾಸಸ್ಥಾನವೋ, ದೇವತೆಗಳಿಂದಲೂ, ಮಾನವರಿಂದಲೂ, ಪಕ್ಷಿಗಳಿಂದಲೂ, ಗೋವುಗಳಿಂದಲೂ, ಸರ್ಪಗಳಿಂದಲೂ, ಗಂಧರ್ವರಿಂದಲೂ, ದೈತ್ಯರಿಂದಲೂ ವಿಚಿತ್ರವಾಗಿ ರಂಜಿ

ಸುವ ವಿಶ್ವವು ಯಾರ ಅಂಗರಂಗದಲ್ಲಿದೆಯೋ, ಮೂರು ಲೋಕವೇ ದೇಹವಾಗಿ ಉಳ್ಳ ಆ ಸರ್ವೇಶ್ವರನಾದ ವಿಷ್ಣುವನ್ನು ನಮಸ್ಕರಿಸುತ್ತೇನೆ. ”

ವಿಷ್ಣುಸಹಸ್ರನಾಮದ ಆದಿಯಲ್ಲಿರುವ ಈ ಧ್ಯಾನಶ್ಲೋಕವು ವಿರಾಟ್ ಪುರುಷನ ಧ್ಯಾನಕ್ರಮವೇ ಆಗಿದೆ. ನಿತ್ಯವೂ ಅರ್ಧಘಂಟೆಯಾದರೂ ಎರಡು ಮೂರು ತಿಂಗಳು ಈ ಧ್ಯಾನವನ್ನು ಮಾಡಬೇಕು. ಈ ವಿರಾಟ್ ಧ್ಯಾನವು ಬಹಳ ಸ್ಥೂಲವಾದ ಧ್ಯಾನವು. ಆದಿಯಲ್ಲಿ ಇದು ಅಗತ್ಯ. ಇದರ ತತ್ತ್ವವಾದರೋ ಸರ್ವದಾ ಅಗತ್ಯ. ಇದರಿಂದ ಮನೋಭಾವವು ಇಡೀ ವಿಶ್ವದಷ್ಟೇ ವಿಶಾಲವಾಗುತ್ತದೆ. ಮನಸ್ಸು ಸೂಕ್ಷ್ಮವೂ ತೀಕ್ಷ್ಣವೂ ಏಕಾಗ್ರವೂ ಆಗಬೇಕಾಗಿರುವಂತೆಯೇ ವಿಶಾಲವೂ ಗಂಭೀರವೂ ಆಗಬೇಕು.

ಮನಸ್ಸು ವಿಶಾಲವಾಗುವುದಕ್ಕಾಗಿ ರಾತ್ರಿ ನಿರ್ಜನವಾದ ಸ್ಥಳದಲ್ಲಿ ಕುಳಿತು ಮೇಲೆ ಅನಂತವಾಗಿರುವ ಆಕಾಶದ ಕಡೆ ನೋಡಬೇಕು. ಆಕಾಶದಲ್ಲಿ ಥಳಥಳಿಸುತ್ತ ಮೂಡಿರುವ ಲೆಕ್ಕವಿಲ್ಲದಷ್ಟು ನಕ್ಷತ್ರಗಳನ್ನು ನೋಡಬೇಕು. ದೇಶ–ಕಾಲ–ವಸ್ತುರೂಪವಾದ ಜಗತ್ತಿನಲ್ಲಿ ದೇಶದ ಅಪಾರವಾದ ವೈಶಾಲ್ಯವನ್ನೂ, ಕಾಲದ ಅನಾದ್ಯನಂತತೆಯ ವೈಭವವನ್ನೂ, ವಸ್ತುಗಳ ಅಸಂಖ್ಯಾತತೆಯ ವೈಚಿತ್ರ್ಯವನ್ನೂ ಭಾವಿಸಿದರೆ, ಮನಸ್ಸೂ ವಿಕಾಸವಾಗಿ ವಿಶಾಲವಾಗುತ್ತದೆ. ದೇಶದ ಅಪಾರತೆಯ ಕಲ್ಪನೆಯು ಮನಸ್ಸಿಗೆ ಬರುವುದಕ್ಕಾಗಿ ಒಂದೊಂದು ನಕ್ಷತ್ರದ ದೂರವನ್ನು ಪರಿಭಾವಿಸಿದರೆ ಸಾಕಾಗಿದೆ. ಖಗೋಳಶಾಸ್ತ್ರವು ಹೇಳುವಂತೆ ಹಲವು ನಕ್ಷತ್ರಗಳು ಇಲ್ಲಿಂದ ಕೋಟ್ಯಂತರ ಪ್ರಕಾಶವರ್ಷ (Light years) ಗಳಷ್ಟು ಮೈಲಿಗಳ ದೂರದಲ್ಲಿವೆ. ಒಂದು ಪ್ರಕಾಶವರ್ಷ ದೂರವೆಂದರೆ 2586971360000 ಮೈಲಿಗಳು. ಏಕೆಂದರೆ ಪ್ರಕಾಶ ಕಿರಣದ ವೇಗವು 1 ಸೆಕೆಂಡಿಗೆ 186000 ಮೈಲಿಗಳು. ಆದ್ದರಿಂದ 1 ನಿಮಿಷಕ್ಕೆ $186000 \times 60$; 1 ಗಂಟೆಗೆ $186000 \times 60 \times 60$ ಮೈಲಿ; 1 ದಿನಕ್ಕೆ $186000 \times 60 \times 60 \times 24$ ಮೈಲಿ; 1 ವರ್ಷಕ್ಕೆ $186000 \times 60 \times 60 \times 24 \times 365\frac{1}{4} = 2586971360000$ ಮೈಲಿಗಳು. ಇದು ಖಗೋಳಶಾಸ್ತ್ರದಲ್ಲಿ ಒಂದು ಪ್ರಕಾಶವರ್ಷ ದೂರವಾಗುತ್ತದೆ. ಈ “ಇಪ್ಪತ್ತೈದು ಲಕ್ಷ ಎಂಭತ್ತಾರು ಸಾವಿರದ ಒಂಭೈನೂರ ಎಪ್ಪತ್ತೊಂದು” ಕೋಟಿ ಮೂವತ್ತಾರು ಲಕ್ಷ ವರ್ಷಗಳನ್ನು ಪುನಃ ಕೋಟ್ಯಂತರಗಳಿಂದ ಗುಣಿಸಿದರೆ ಎಷ್ಟು ಅದ್ಭುತ

ಸಂಖ್ಯೆಯಾಗುವುದೋ ಅಷ್ಟು ಮೈಲಿಗಳ ದೂರದಲ್ಲಿ ಒಂದೊಂದು ನಕ್ಷತ್ರಗಳಿವೆ. ಆ ಒಂದೊಂದು ನಕ್ಷತ್ರಗಳೂ ನಮ್ಮ ಸೂರ್ಯನಿಗಿಂತಲೂ ಎಷ್ಟೋ ಲಕ್ಷಪಾಲು ದೊಡ್ಡದಾದ ಸೂರ್ಯರು. ಈ ನಮ್ಮ ಸೂರ್ಯನೂ ಇವನ ಸುತ್ತಲೂ ಸುತ್ತುವ ಗ್ರಹೋಪಗ್ರಹಗಳೂ ಭೂಮಿಯೂ ಸೇರಿ ಈ ಸೌರವ್ಯೂಹವು ಒಂದು ಬ್ರಹ್ಮಾಂಡವಾದರೆ ಮೇಲೆ ಹೇಳಿರುವಂತೆ ಅತಿ ದೂರದಲ್ಲಿರುವ ಒಂದೊಂದು ಅದ್ಭುತಾಕಾರದ ನಕ್ಷತ್ರಗಳೂ ನಮ್ಮ ಸೌರವ್ಯೂಹಕ್ಕಿಂತಲೂ ಅತಿ ಬೃಹತ್ತಾದ ಸೌರವ್ಯೂಹಗಳನ್ನೂ ಬ್ರಹ್ಮಾಂಡಗಳನ್ನೂ ರಚಿಸಿಕೊಂಡಿವೆ. ಈ ಅನೇಕ ಕೋಟಿ ಬ್ರಹ್ಮಾಂಡಗಳಿಗೂ ತನ್ನದೊಂದು ಪುಟ್ಟ ಮೂಲೆಯಲ್ಲಿ ಇಂಬುಮಾಡಿಕೊಟ್ಟಿರುವ ಈ ಅನಂತಾಕಾಶವು (Space) ಇನ್ನೆಷ್ಟು ದೊಡ್ಡದು? ಇಷ್ಟನ್ನೆಲ್ಲಾ ಸೃಷ್ಟಿ ಮಾಡಿ ಸುವ್ಯವಸ್ಥಿತವಾಗಿ ರಕ್ಷಣಮಾಡುತ್ತಿರುವ ಹಾಗೂ ಲಯವನ್ನೂ ಮಾಡಬಲ್ಲ ಆ ಮಹಾ ಪ್ರಚಂಡ ಶಕ್ತಿಯು ಎಷ್ಟು ಅದ್ಭುತವಾದುದು? ಇಂಥಾ ಶಕ್ತಿಯುಳ್ಳವನೂ ಅನೇಕ ಕೋಟಿ ಬ್ರಹ್ಮಾಂಡಗಳ ನಾಯಕನೂ, ಗಗನಾತೀತನೂ ಆದ ಜಗದೀಶ್ವರನು ಇನ್ನೆಷ್ಟು ದೊಡ್ಡವನು?

ಇದುವರೆಗೆ ನಾವು ವಿಚಾರಿಸಿರುವುದು ಕೇವಲ ಸ್ಥೂಲವಾದ ಒಂದು ಭೂಲೋಕದ ವಿಷಯವಾಯಿತು. ಅದೂ ದೇಶ-ಕಾಲ-ವಸ್ತುರೂಪವಾದ ಜಗತ್ತಿನಲ್ಲಿ ಕೇವಲ ದೇಶಗಳ ಮತ್ತು ವಸ್ತುಗಳ ವಿಚಾರವಾಯಿತು. ಇನ್ನು ಕಾಲದ ವಿಚಾರವನ್ನು ಸ್ವಲ್ಪ ನೋಡೋಣ. ಕಾಲವನ್ನು ದೊಡ್ಡದಾಗಿ ನಾಲ್ಕು ಭಾಗ ಮಾಡಿದೆ. ಇವಕ್ಕೇ ನಾಲ್ಕು ಯುಗಗಳೆಂದು ಹೆಸರು.

| | | |
|---|---|---|
| ಕೃತಯುಗದ ಪ್ರಮಾಣ | 1728000 | ವರ್ಷಗಳು. |
| ತ್ರೇತಾಯುಗದ ಪ್ರಮಾಣ | 1296000 | ವರ್ಷಗಳು. |
| ದ್ವಾಪರಯುಗದ ಪ್ರಮಾಣ | 864000 | ವರ್ಷಗಳು. |
| ಕಲಿಯುಗದ ಪ್ರಮಾಣ | 432000 | ವರ್ಷಗಳು. |
| ಒಂದು ಮಹಾಯುಗದ ಪ್ರಮಾಣ | 4320000 | ವರ್ಷಗಳು. |

71 ಮಹಾಯುಗಗಳಿಗೆ ಒಂದು ಮನ್ವಂತರ. ಅಂದರೆ 306720000 ವರ್ಷಗಳು. ಹದಿನಾಲ್ಕು ಮನ್ವಂತರಗಳಿಗೆ ಒಂದು ಕಲ್ಪ. ಕಲ್ಪದ ಉದಯ ಕಾಲ ಸಂಧ್ಯಾಕಾಲಗಳು ಕೂಡಿ ಒಂದು ಕಲ್ಪಕ್ಕೆ 4320000000 ವರ್ಷ

ಗಳು. ಇದು ಕಲಿಯುಗದ ಕಾಲಮಾನಕ್ಕೆ ಹತ್ತು ಸಹಸ್ರದಷ್ಟು ಹೆಚ್ಚು, ಮಹಾಯುಗದ ಒಂದು ಸಹಸ್ರದಷ್ಟು ಹೆಚ್ಚು ಆಗುತ್ತದೆ. ಅಂದರೆ ಒಂದು ಸಾವಿರ ಮಹಾಯುಗಗಳಿಗೆ ಒಂದು ಕಲ್ಪ. **" ಚತುರ್ಯುಗ ಸಹಸ್ರಾಣಿ ಬ್ರಹ್ಮಣೋದಿವಮುಚ್ಯತೇ ॥ "** (ಗೀತಾ) ಇದು ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮದೇವನ ಒಂದು ಹಗಲುಮಾತ್ರವಾಗಿದೆ. ಆದ್ದರಿಂದ ಎರಡು ಕಲ್ಪಗಳು ಅಥವಾ 8640000000 ಸೌರಮಾನ ವರ್ಷಗಳು ಬ್ರಹ್ಮ ದೇವನಿಗೆ ಒಂದು ದಿನ. ಪ್ರತಿವರ್ಷಕ್ಕೆ ಇಂಥಾ 360 ದಿನಗಳುಳ್ಳ 100 ವರ್ಷಗಳು ಬ್ರಹ್ಮದೇವನ ಆಯುಷ್ಯ. ಅಂದರೆ 311,040,00.00,00,000 " ಮೂರು ಕೋಟಿ ಹನ್ನೊಂದು ಲಕ್ಷದ ನಾಲ್ಕು ಸಾವಿರ " ಕೋಟಿ ವರ್ಷಗಳು ಬ್ರಹ್ಮನ ಆಯುಷ್ಯವು. ಇದರಲ್ಲಿ ಈಗಾಗಲೇ ಬ್ರಹ್ಮದೇವನಿಗೆ ಅರ್ಧ ಆಯು ಷ್ಯವು ಕಳೆದಿದೆ. ಉತ್ತರಾರ್ಧದಲ್ಲಿ ಈಗ ಮೊದಲನೇ ಕಲ್ಪದಲ್ಲಿ ಆರು ಮನ್ವಂತರ ಗಳು ಕಳೆದು, ಏಳನೆಯ ಮನ್ವಂತರದಲ್ಲಿ ಇಪ್ಪತ್ತೇಳು ಮಹಾ ಯುಗಗಳೂ ಕಳೆದು, ಇಪ್ಪತ್ತೆಂಟನೇ ಮಹಾಯುಗದ ಕೃತ-ತ್ರೇತ-ದ್ವಾಪರಗಳೂ ಕಳೆದು, ಕಲಿಯುಗದಲ್ಲಿ ಈ ನಂದನ ಸಂವತ್ಸರಕ್ಕೆ 5053 ಸೌರಮಾನ ವರ್ಷಗಳೂ ಕಳೆದಿವೆ. ಅಂದರೆ ಸೃಷ್ಟಿಯ ಆದಿಯಿಂದ ಇದುವರೆಗೆ 155521960853053 ("ಒಂದು ಕೋಟಿ ಐವತ್ತೈದು ಲಕ್ಷದ ಐವತ್ತೆರಡು ಸಾವಿರದ ನೂರತೊಂಭ ತ್ತಾರು" ಕೋಟಿ ಎಂಟು ಲಕ್ಷದ ಐವತ್ತಮೂರು ಸಾವಿರದ ಐವತ್ತಮೂರು) ವರ್ಷಗಳಾಗಿವೆ. ಬ್ರಹ್ಮದೇವನ ಹಗಲು ಆರಂಭವಾದ ಕೂಡಲೇ ಸೃಷ್ಟಿಯು ಆರಂಭವಾಗಿ ಪೂರ್ವಸೃಷ್ಟಿಯ ಜೀವರ ಕರ್ಮಾನುಸಾರವಾಗಿ ಪಶು, ಪಕ್ಷಿ, ಮನುಷ್ಯ, ಪಿತರು, ದೇವತೆಗಳು ಮೊದಲಾದ ಸರ್ವರ ಉತ್ಪತ್ತಿಯಾಗುವುದು.

ಹಗಲು ಕಳೆದ ಕೂಡಲೇ ಬ್ರಹ್ಮದೇವನು ತಮೋಗುಣವನ್ನು ಸ್ವೀಕಾರ ಮಾಡಿ ತನ್ನ ಸೃಷ್ಟಿಕ್ರಮವನ್ನು ಉಪಸಂಹರಿಸಿ ಸ್ವಸ್ಥವಾಗಿ ಮಲಗಿಕೊಳ್ಳು ವನು. ಕೂಡಲೇ ಕಾಲಯೋಗದಿಂದ ಸರ್ವವಸ್ತುಗಳೂ ಆತನಲ್ಲಿ ಪ್ರವೇ ಶಿಸುವುವು.

ಬ್ರಹ್ಮದೇವರ ವಿಷಯದ ಹೊರತು, ಇದುವರೆಗೆ ವಿಚಾರಮಾಡಿದುದು ಬಹಳ ಮಟ್ಟಿಗೆ ನಮ್ಮೀ ಭೂಲೋಕದ ವಿಷಯವಾಗಿದೆ. ಆದರೆ ಭುವರ್ಲೋಕ,

ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಎಂಬ ಆರು ಲೋಕಗಳೂ, ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಳಗಳೆಂಬ ಕೆಳಗಿನ ಏಳು ಲೋಕಗಳೂ ಒಟ್ಟು ಹದಿನಾಲ್ಕು ಲೋಕಗಳಿವೆಯೆಂದು ದಿವ್ಯಜ್ಞಾನವುಳ್ಳ ಮಹರ್ಷಿಗಳು ಹೇಳಿದ್ದಾರೆ. ಈ ಲೋಕಗಳು ಒಂದಕ್ಕಿಂತಲೂ ಒಂದು ಸೂಕ್ಷ್ಮವಾದವುಗಳೆಂದೂ, ಒಂದರೊಳಗೊಂದು ವ್ಯಾಪಕವಾದವುಗಳೆಂದೂ, ಸಮಾನ ಕೇಂದ್ರವುಳ್ಳ (concentric circle) ಭಿನ್ನಭಿನ್ನ ವೃತ್ತಗಳೆಂದೂ ಹೇಳಬಹುದು. ಆದರೆ ಭೂಲೋಕ, ಭುವರ್ಲೋಕ, ಸುವರ್ಲೋಕ ಮೊದಲಾದ ಮೇಲಿನ ಏಳು ಲೋಕಗಳೇ ಮುಖ್ಯವಾದವುಗಳು.

ಮಾನವರ ಶುಕ್ಲಪಕ್ಷವು ಪಿತೃಲೋಕದಲ್ಲಿರುವ ಪಿತೃಗಳಿಗೆ ಹಗಲೂ, ಕೃಷ್ಣಪಕ್ಷವು ಅವರ ರಾತ್ರಿಯೂ ಆಗಿವೆ. ಆದ್ದರಿಂದ ಮಾನವರ ಒಂದು ಮಾಸವು ಪಿತೃಗಳ ಒಂದು ದಿನ. ಪ್ರತಿವರ್ಷಕ್ಕೆ ಇಂಥಾ 360 ದಿನಗಳುಳ್ಳ 100 ವರ್ಷಗಳು ಪಿತೃಗಳ ಆಯುಷ್ಯವು. ಮಾನವರ ಉತ್ತರಾಯಣವು ಸ್ವರ್ಗಲೋಕದಲ್ಲಿರುವ ದೇವತೆಗಳ ಒಂದು ಹಗಲು, ದಕ್ಷಿಣಾಯನವು ದೇವತೆಗಳ ರಾತ್ರಿ. ಆದ್ದರಿಂದ ಮಾನವರ ಒಂದು ವರ್ಷವು ದೇವತೆಗಳಿಗೆ ಒಂದು ದಿನ. ವರ್ಷಕ್ಕೆ ಇಂಥಾ 360 ದಿನಗಳುಳ್ಳ 100 ವರ್ಷಗಳು ಸ್ವರ್ಲೋಕವಾಸಿಗಳಾದ ದೇವತೆಗಳ ಆಯುರ್ಮಾನವು. ಮಾನವರ ಒಂದು ಮಹಾಯುಗವು ದೇವತೆಗಳ 12000 ವರ್ಷಗಳು.

ಬ್ರಹ್ಮದೇವನ ರಾತ್ರಿಯಲ್ಲಿ ಭೂಲೋಕ, ಭುವರ್ಲೋಕ, ಸ್ವರ್ಲೋಕಗಳು ಮಾತ್ರ ಅದೃಶ್ಯವಾಗುವುವೆಂದು ಭಾಗವತದಲ್ಲಿ ಹೇಳಿದೆ. ಭೂಲೋಕ, ಭುವರ್ಲೋಕ, ಸುವರ್ಲೋಕಗಳೆಂಬ ತ್ರಿಲೋಕಗಳೂ ಕಾಮ್ಯಕರ್ಮದ ಫಲಗಳು. ಪ್ರತಿ ಕಲ್ಪದಲ್ಲಿಯೂ ಇವುಗಳಿಗೆ ನಾಶವುಂಟು. ಸ್ವರ್ಗಲೋಕದ ಮೇಲಿರುವ ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕಗಳು ನಿಷ್ಕಾಮಕರ್ಮಿಗಳಿಗೆ ದೊರಕತಕ್ಕವುಗಳು. ಅವು ಬ್ರಹ್ಮದೇವನ ಎರಡು ಪರಾರ್ಧಗಳು ಅಥವಾ 100 ವರ್ಷಗಳು ಇದ್ದು ನಾಶವಾಗುತ್ತವೆ. ಈ ಬ್ರಹ್ಮನ ಅಧಿಕಾರಾವಧಿಯು ಮುಗಿದ ನಂತರ ಲೆಕ್ಕವಿಲ್ಲದಷ್ಟು ಬ್ರಹ್ಮರು ಅಧಿಕಾರ ನಡೆಸುತ್ತಾರೆ.

ಬ್ರಹ್ಮದೇವನ ನೂರು ವರ್ಷಗಳು (2 ಪರಾರ್ಧಗಳು) ಅನಾದ್ಯನಂತ ನಿರ್ವಿಕಾರ ಪರಮೇಶ್ವರನ ಒಂದು ನಿಮಿಷವು (ಅಂದರೆ ಕಣ್ಣು ರೆಪ್ಪೆ ಹೊಡೆಯುವುದು) ಎಂದು ಭಾಗವತವು ಹೇಳುತ್ತದೆ. ಒಂದಕ್ಕಿಂತ ಹತ್ತುಪಟ್ಟು ಹೆಚ್ಚು ವಿಸ್ತಾರವಾದ ಪೃಥ್ವೀ, ಜಲ, ತೇಜ, ವಾಯು, ಆಕಾಶ, ಅಹಂಕಾರ, ಮಹತ್ತತ್ತ್ವ ಎಂಬ ಹೊರಗಿನ ಏಳು ಹೊದಿಕೆಗಳಿಂದ ಹೊದಿಸಲ್ಪಟ್ಟ ಬ್ರಹ್ಮಾಂಡ ಕೋಶವು ಪರಮಾತ್ಮನ ಅನಂತವಾದ ಈಶ್ವರ ದೇಹದಲ್ಲಿ ಒಂದು ಪರಮಾಣು ಮಾತ್ರವಾಗಿದೆ. ಹಿಂದಿನ ಸೃಷ್ಟಿಯು ಪ್ರಳಯವಾಗಿ ನೂತನ ಸೃಷ್ಟಿಯಾಗುವುದಕ್ಕೆ ಮೊದಲು ವಿರಾಟ್‌ಪುರುಷನು ಸೃಷ್ಟಿಕಾರಣವಾದ ಅವ್ಯಕ್ತ, ಮಹತ್ತತ್ತ್ವ, ಅಹಂಕಾರ, ಸೂಕ್ಷ್ಮಭೂತಾದಿಗಳನ್ನು, ಕಾಷ್ಠವು ತನ್ನೊಳಗೆ ಅಗ್ನಿಯನ್ನಿಟ್ಟು ಕೊಂಡಂತೆಯೂ, ವಟಬೀಜವು ತನ್ನೊಳಗೆ ಮಹಾವಟವೃಕ್ಷವನ್ನಿಟ್ಟುಕೊಂಡಂತೆಯೂ ಅಡಗಿಸಿಟ್ಟುಕೊಂಡು, ತನ್ನ ಚಿಚ್ಛಕ್ತಿಯೊಡನೆ ಮಹಾಪ್ರಳಯಜಲದಲ್ಲಿ ಯೋಗನಿದ್ರೆಯಿಂದ ವಿಶ್ವಕುಂಡಲಿನೀ ಶಕ್ತಿಯಾದ ಶೇಷನ ಮೇಲೆ ಶಯನ ಮಾಡಿದ್ದನು. ಆ ಸ್ಥಿತಿಯಲ್ಲಿ ಚತುರ್ಯುಗಗಳ ಸಹಸ್ರ ಚೌಕಳಿಗಳು ಕಳೆದ ಮೇಲೆ, ಮುಂದೆ, ಕಾಲರೂಪ ಶಕ್ತಿಯು, ಸೃಷ್ಟಿಮಾಡುವುದಕ್ಕಾಗಿ ವಿರಾಟ್ ಪುರುಷನ ಚೈತನ್ಯಶಕ್ತಿಯನ್ನು ಜಾಗ್ರತಗೊಳಿಸಿತು. ಆಗ ಆ ವಿರಾಟ್‌ಪುರುಷನಾದ ನಾರಾಯಣನು ಸೃಷ್ಟಿಯನ್ನು ಮಾಡುವ ಹೇತುವಿನಿಂದ ತನ್ನಲ್ಲಿ ಬೀಜರೂಪವಾಗಿ ಅಡಗಿದ್ದ ಲೋಕಗಳನ್ನೂ ಸೂಕ್ಷ್ಮಭೂತಗಳನ್ನೂ ನೋಡಿದನು. ಕಾಲಶಕ್ತಿಯಿಂದ ಪ್ರೇರಿತವಾದ ತ್ರಿಗುಣಾತ್ಮಕ ಪ್ರಕೃತಿಯು ಪ್ರಕ್ಷುಬ್ಧವಾಗಿ ಮಹತ್ತತ್ತ್ವದ ಉದಯವಾಯಿತು ಮುಂದೆ ಮಹತ್‌ತತ್ತ್ವವು ಸಂಚಲನವಾಗಿ ತ್ರಿಗುಣಾತ್ಮಕ ಅಹಂಕಾರವೂ, ಪಂಚತನ್ಮಾತ್ರೆ ಮೊದಲಾದವುಗಳೂ ಉತ್ಪನ್ನವಾದವು. ಈ ವಿಧವಾದ ಆಧಿಭೌತಿಕ, ಆಧಿದೈವಿಕ, ಆಧ್ಯಾತ್ಮಿಕವೆಂಬ ಮೂರು ವಿಧವಾದ ಸೃಷ್ಟಿಯು ವಿರಾಟ್‌ಪುರುಷನಿಂದ ಆಯಿತು.

**"ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ।"** ಎಂದು ಪುರುಷಸೂಕ್ತದಲ್ಲಿ ಹೇಳಿರುವಂತೆ ಇದುವರೆಗೆ ವಿಚಾರಮಾಡಿರುವ ಅಗಾಧವಾದ ಕಾಲದೇಶವಸ್ತುರೂಪವಾದ ಈ ಸೃಷ್ಟಿಯೆಲ್ಲಾ ಆ ಪರಮೇಶ್ವರನ ಒಂದಂಶವು ಮಾತ್ರವಾಗಿದೆ. ಮಿಕ್ಕ ಮೂರಂಶವು ಅಮೃತವೂ ದಿವ್ಯವೂ ಆಗಿದೆ. ಇದುವರೆಗಿನ ಈ ವಿಚಾರದಿಂದ ಪರಮಾತ್ಮನ ಸ್ವರೂಪವು ಎಷ್ಟು

ವ್ಯಾಪಕವಾಗಿಯೂ, ಮಹತ್ತಾಗಿಯೂ, ಬೃಹತ್ತಾಗಿಯೂ, ಅನಂತವಾಗಿಯೂ, ದೇಶಕಾಲಾತೀತವಾಗಿಯೂ, ಮಾಯಾತೀತವಾಗಿಯೂ ಇರುವುದೆಂಬ ಭಾವವು ಧ್ಯಾನದಲ್ಲಿ ಬಂದು ಆನಂದವಾಗುವುದು.

ಮನಸ್ಸು ಭಾವನಾಮಯವಾದುದು. ಭಾವನೆಯೇ ಮನಸ್ಸು. ಭಾವನೆಯು ವಿಷಯಗಳನ್ನು ಅವಲಂಬಿಸಿಕೊಂಡಿರುವುದು. ಬಿಡಿಬಿಡಿಯಾದ ಸಣ್ಣ ಸಣ್ಣ ವಿಷಯಗಳನ್ನೇ ಭಾವಿಸುತ್ತಿರುವುದರಿಂದ ಭಾವನೆಯೂ ತುಂಡುತುಂಡಾಗಿ ಸಣ್ಣದಾಗುತ್ತದೆ. ಸಣ್ಣಗೆ ಸಂಕುಚಿತವಾದ ವ್ಯಷ್ಟಿಭಾವವಿರುವುದೇ ಜೀವ ಲಕ್ಷಣವು. ಮಹದ್ವಿಶಾಲವಾದ ಸಮಷ್ಟಿಭಾವವು ಬರುವುದೇ ಈಶ್ವರಲಕ್ಷಣವು. ವಿಶ್ವರೂಪದ ಅಥವಾ ವಿರಾಟನ ಭಾವನೆಯಿಂದ ಸಮಷ್ಟಿಭಾವನೆಯೂ ಈಶ್ವರ ಭಾವವೂ ಸಿದ್ಧವಾಗುತ್ತವೆ.

ಪತಂಜಲ ಮಹರ್ಷಿಗಳು ತಮ್ಮ ಯೋಗಸೂತ್ರದ 2ನೇ ಸೂತ್ರದಲ್ಲಿ **“ ಯೋಗಶ್ಚಿತ್ತವೃತ್ತಿ ನಿರೋಧಃ ”** “ ಚಿತ್ತವೃತ್ತಿಗಳನ್ನು ಅಡಗಿಸುವುದೇ ಯೋಗವು ” ಎಂದು ಹೇಳಿ, 3ನೇ ಸೂತ್ರದಲ್ಲಿ **“ ತದಾ ದ್ರಷ್ಟುಃ ಸ್ವರೂಪೇಽವಸ್ಥಾನಂ ”** “ ಮನೋವೃತ್ತಿಗಳು ಅಡಗಿದ ಸಮಯದಲ್ಲಿ ಅವನ್ನು ನೋಡುತ್ತಿರುವ ಯೋಗಿಯು ನಿರ್ವಿಕಲ್ಪವಾದ ತನ್ನ ನಿಜಸ್ವರೂಪ ದಲ್ಲಿರುತ್ತಾನೆ ” ಎಂದು ಹೇಳಿದ್ದಾರೆ. ಮುಂದೆ ಅವರು 4ನೇ ಸೂತ್ರದಲ್ಲಿ **“ ವೃತ್ತಿಸಾರೂಪ್ಯಮಿತರತ್ರ ”** ಮನೋವೃತ್ತಿಗಳಡಗದಿರುವ ಮಿಕ್ಕ ಸಮಯ ಗಳಲ್ಲಿ ಯೋಗಿಯು (ತಾದಾತ್ಮ್ಯ ಭಾವದಿಂದ) ಆಯಾ ವೃತ್ತಿರೂಪವೇ ಆಗಿ ಬಿಡುತ್ತಾನೆ. ಇದು ಆತ್ಮನನ್ನು ಮರೆಮಾಡುತ್ತದೆ.

ದೇಶ–ಕಾಲ–ವಸ್ತುರೂಪವಾದ ಸಮಸ್ತ ಸ್ಥೂಲ ಜಗತ್ತೇ ಪರಮೇಶ್ವರನ ಸ್ಥೂಲ ದೇಹವು. ಇದೇ ಅವನ ವಿರಾಟ್ ಸ್ವರೂಪ. ಸ್ಥೂಲವಾದ ಈ ಸಮಷ್ಟಿ ದೇಹದ ಸಂಬಂಧದಿಂದ ಪರಮೇಶ್ವರನಿಗೆ ವೈಶ್ವಾನರನೆಂದೂ ವಿರಾಟ್‌ಪುರುಷ ನೆಂದೂ ಹೆಸರು. ಸಮಸ್ತ ಜಗತ್ತಿನ ಸೂಕ್ಷ್ಮ ದೇಹಗಳ ಸಮಷ್ಟಿಯೇ (ಒಟ್ಟೇ) ಪರಮೇಶ್ವರನ ಸೂಕ್ಷ್ಮ ಶರೀರವು. ಸಮಷ್ಟಿ ಸೂಕ್ಷ್ಮ ಶರೀರದ ಸಂಬಂಧದಿಂದ ಪರಮೇಶ್ವರನೇ ಹಿರಣ್ಯಗರ್ಭನೆಂದೂ ಸೂತ್ರಾತ್ಮನೆಂದೂ ಕರೆಯಲ್ಪಡುತ್ತಾನೆ. ಜಗತ್ತಿನ ಸಮಸ್ತ ಕಾರಣ ಶರೀರಗಳ ಸಮಷ್ಟಿಯೇ ಪರಮೇಶ್ವರನ ಕಾರಣ

ಶರೀರವು. ಸಮುಷ್ಟಿ ಕಾರಣ ದೇಹದ ಸಂಬಂಧದಿಂದ ಪರಮೇಶ್ವರನಿಗೆ ಅವ್ಯಾಕೃತನೆಂದೂ ಈಶ್ವರನೆಂದೂ ಹೆಸರು.

ಹಿಂದೆ ಇದುವರೆಗೆ ವಿಚಾರಮಾಡಿರುವ ಪರಮೇಶ್ವರನ ವಿರಾಟ್ ಸ್ವರೂಪದ ಭಾವನೆಮಾಡುತ್ತಾ ತನ್ನನ್ನು ತಾನು (ಬೇರೆಯೆಂಬುದನ್ನು) ಮರೆತಾಗ **"ವೃತ್ತಿಸಾರೂಪ್ಯಮಿತರತ್ರ"** ಎಂಬ ಯೋಗಸೂತ್ರದ ನ್ಯಾಯದಂತೆ ಚಿತ್ತದಲ್ಲಿ ಉದಿಸಿರುವ ವಿರಾಡಾಕಾರ ವೃತ್ತಿಯಿಂದ ಯೋಗಿಯು ತಾನೇ ವಿರಾಟ್ ಪುರುಷನಾಗುತ್ತಾನೆ.

ಬಾಹ್ಯಾವಲಂಬಿಯಾದ ಸ್ಥೂಲರೂಪದ ಬ್ರಹ್ಮಧ್ಯಾನದಲ್ಲಿ ವಿರಾಟ್ ಸ್ವರೂಪದ ಧ್ಯಾನಕ್ಕಿಂತಲೂ, ಶ್ರೇಷ್ಠವಾದುದೂ, ಮಹತ್ತಾದುದೂ ಸ್ವೈಜವಾದುದೂ ಇನ್ನೊಂದಿಲ್ಲ. ಈ ಸಾಧನವು ಸ್ಥೂಲರೂಪವನ್ನು ಆಲಂಬಿಸಿರುವುದರಿಂದ ಸುಲಭವೆನ್ನಬಹುದೇ ಹೊರತು ಇದು ಸುಲಭವೋ ಅಥವಾ ಕಠಿಣವೋ ಎನ್ನುವುದು ಯೋಗಿಯ ಸಂಸ್ಕಾರದ ಮೇಲೂ ಅಭ್ಯಾಸಬಲದ ಮೇಲೂ ಅವಲಂಬಿಸಿದೆ.

ಈ ವಿರಾಟ್‌ಸ್ವರೂಪದ ಕಲ್ಪನೆಯನ್ನೇ ಇನ್ನೂ ಹೆಚ್ಚು ಮುಂದುವರಿಸಿ—ಇನ್ನಿಲ್ಲವೆನ್ನುವಷ್ಟು—ಕೊನೆಮುಟ್ಟಿಸಿದರೆ (ಸಹಜವೂ ಸತ್ಯವೂ ಆದರೆ) ಆಶ್ಚರ್ಯಕರವಾದ ತತ್ತ್ವವೂ ಹೊರಬೀಳುತ್ತದೆ. ದೇಶ-ಕಾಲ-ದ್ರವ್ಯಗಳೂ ವಿರಾಟ್, ಹಿರಣ್ಯಗರ್ಭ, ಈಶ್ವರ ಮೊದಲಾದ ಭಾವನೆಗಳೂ ಎಲ್ಲಾ ನಮ್ಮ ಮನಸ್ಸಿನಿಂದಲೇ ಕಲ್ಪಿತವಾದವುಗಳು. ಇವು ನಮ್ಮ ಒಂದು ಜಾಗ್ರದವಸ್ಥೆಗೆ ಸಂಬಂಧಪಟ್ಟ ಕಲ್ಪನೆಗಳು. ಕಲ್ಪಿತವಾದ ವಸ್ತುಗಳೆಲ್ಲಾ ಕಲ್ಪನೆ ಮಾಡತಕ್ಕವನ ಕಲ್ಪನೆಗೆ ಅಧೀನವಾದುದರಿಂದ ಕಲ್ಪಿತಗಳಿಗಿಂತಲೂ ಕಲ್ಪಕನೇ ಶ್ರೇಷ್ಠನೆಂಬುದು ನಿರ್ವಿವಾದವಾದುದು. ಒಂದು ಕಾಲದಲ್ಲಿ ಮಾತ್ರವೇ ತೋರಿ ಇನ್ನೊಂದು ಕಾಲದಲ್ಲಿ ತೋರದಿರತಕ್ಕವುಗಳು, ಅನಿತ್ಯಗಳೂ, ಅಸತ್ಯಗಳೂ ಆಗಿರುವವೆಂಬುದು ವೇದಾಂತದ ನಿರ್ಣಯವು. ಬಿಡಿಬಿಡಿ ಬೇರೆಬೇರೆಯಾದ ಸಮಸ್ತ ವಸ್ತುಗಳ ಅನುಭವವನ್ನು ಹೊಂದುವ ಒಂದು ಚೈತನ್ಯ ಯಾವುದೋ ಅದು ಸರ್ವಕಾಲದಲ್ಲಿಯೂ ಇರತಕ್ಕುದಾದುದರಿಂದ ನಿತ್ಯವೂ ಸತ್ಯವೂ ಆದುದು.

ಎಚ್ಚರದಲ್ಲಿ ತೋರುವ ಸ್ಥೂಲ ಜಗತ್ತು ಕನಸಿನಲ್ಲಿ ತೋರುವುದಿಲ್ಲ. ಕನಸಿನಲ್ಲಿ ತೋರುವ ಸೂಕ್ಷ್ಮ ಜಗತ್ತು ಎಚ್ಚರದಲ್ಲಿ ತೋರುವುದಿಲ್ಲ. ಗಾಢ

ನಿದ್ರೆಯಲ್ಲಿ ಯಾವ ಜಗತ್ತೂ ಇಲ್ಲ, ಯಾವ ಲೋಕವೂ ಇಲ್ಲ. ಮನಸ್ಸು ಬಂದೊಡನೆ ಜಗತ್ತೂ ಬರುತ್ತದೆ. ಮನಸ್ಸೇ ಜಗತ್ತಾಗಿದೆ. ದೇಶಕಾಲ ಗಳಾಗಿರುವುದೂ ಮನಸ್ಸೇ. ತೋರುತ್ತಿರುವ ವಸ್ತುಗಳ ಇರುವಿಕೆಗೆ ಅವಕಾಶ ಕೊಡುವುದಕ್ಕಾಗಿ ದೇಶವು ಅಗತ್ಯವೆಂದು ಮನಸ್ಸು ಕಲ್ಪಿಸಿಕೊಳ್ಳುತ್ತದೆ ಘಟನೆಗಳ ಪರಂಪರೆಯನ್ನು ಮನಸ್ಸಿನಲ್ಲಿ ಭಾವಿಸಿಕೊಂಡು, ಹಿಂದುಮುಂದೆಂದು ಜೋಡಿಸಿಕೊಳ್ಳುವಾಗ, ಕಾಲವು ಅಗತ್ಯವೆಂದು ಮನಸ್ಸು ಕಲ್ಪಿಸಿಕೊಳ್ಳುತ್ತದೆ. ಪ್ರಪಂಚವನ್ನು ಸೃಷ್ಟಿಮಾಡುವುದಕ್ಕಾಗಿ ಪರಮಾತ್ಮ ಚೈತನ್ಯವನ್ನು ಸೃಷ್ಟಿಗೆ ಮೊದಲು ಪ್ರೇರಣೆಮಾಡುವ ಮಹಾಕಾಲವು ಕೋಟಿಸುಳ್ಳಾದರೆ, ಸೃಷ್ಟಿಯೊಳಗೆ ವ್ಯಕ್ತವಾಗುವ ಕಾಲವು ಮೂಲ ಕಾಲದ ಮರಿಯೇ ಆದುದರಿಂದ ಶತಕೋಟಿ ಸುಳ್ಳು. **"ಬ್ರಹ್ಮ ಸತ್ಯಂ ಜಗನ್ಮಿಥ್ಯಾ"** ಎನ್ನುವ ದೃಷ್ಟಿಯಲ್ಲಿ 'ಸತ್ಯ ಜ್ಞಾನಾನಂತ' ಸ್ವರೂಪ ಬ್ರಹ್ಮದ ಹೊರತು ಮಿಕ್ಕ ಎಲ್ಲವೂ ಸುಳ್ಳೇ ಆಗಿವೆ.

ಗಾಢನಿದ್ರೆಯಲ್ಲಿ ಎಚ್ಚರ ಕನಸುಗಳಲ್ಲಿರುವಂತೆ ನೋಡುವವನೂ ಇಲ್ಲ. ತೋರಿಕೆಗಳೂ ಇಲ್ಲ. ಏನನ್ನೂ ಕಾಣುತ್ತಿಲ್ಲ. **"ಅಭಾವ-ಪ್ರತ್ಯಯಾ-ಲಂಬನಾವೃತ್ತಿರ್ನಿದ್ರಾ"** ಎಂಬ ಯೋಗಸೂತ್ರದಂತೆ ಶೂನ್ಯಭಾವವನ್ನು (ಯಾವ ತೋರಿಕೆಯೂ ಇಲ್ಲದಿರುವುದನ್ನು) ಅವಲಂಬಿಸಿರುವ ಮನೋ ವೃತ್ತಿಯೇ ನಿದ್ರೆಯು. ಆ ನಿದ್ರೆಯನ್ನೂ ಬೆಳಗುವ ಚೈತನ್ಯವಾವುದೋ ಅದೇ ಎಚ್ಚರ ಕನಸುಗಳನ್ನೂ ಬೆಳಗುತ್ತಿರುವುದರಿಂದ ಆ ಚೈತನ್ಯವೇ ತ್ರಿಕಾಲ ದಲ್ಲಿಯೂ ಅಬಾಧಿತವಾದ ಸತ್ಯವಾಗಿದೆ. ಎಚ್ಚರ ಕನಸುಗಳ ಬಗೆಬಗೆಯಾದ ಸ್ಥೂಲ ಸೂಕ್ಷ್ಮ ಮನೋವೃತ್ತಿಗಳನ್ನೂ ಸುಷುಪ್ತಿಯ 'ಅಭಾವ' ವೃತ್ತಿಯನ್ನೂ ಅರಿಯುತ್ತಿರುವ ಚೈತನ್ಯವಾದ ಆತ್ಮನೇ ತಾನು; "ಈ ಆತ್ಮನೇ ಸರ್ವ ಜಗತ್ತಿಗೂ ಅಧಿಷ್ಠಾನ ಚೈತನ್ಯವಾದ ಬ್ರಹ್ಮವು" ಎಂದು ತಿಳಿಯುವುದೇ ಯೋಗಿಗೆ ಅತ್ಯಂತ ಶ್ರೇಷ್ಠವಾದ ಧ್ಯಾನವು. ಇದು ವಿರಾಡ್ರೂಪದ ಕಲ್ಪನೆ ಗಿಂತಲೂ ಶ್ರೇಷ್ಠವಾದುದೂ, ಮಹತ್ತಾದುದೂ, ಸೀಮಾಂತವಾದುದೂ, ಸತ್ಯ ವಾದುದೂ ಆಗಿದೆ. ಈ ಧ್ಯಾನವು ಜ್ಞಾನಯೋಗದ ಬ್ರಹ್ಮಾನುಭೂತಿಗೆ ಅತ್ಯಂತ ಸಮೀಪ (ಸಾಕ್ಷಾತ್) ಸಾಧನವಾದ ನಿದಿಧ್ಯಾಸನರೂಪವೇ ಆಗಿದೆ. ಈ ಧ್ಯಾನದಲ್ಲಿ ವಿರಾಡಾದಿ ಕಲ್ಪನಾವೃತ್ತಿಗಳಡಗಿ ಚೈತನ್ಯಾಕಾರವೃತ್ತಿಯಿರು ವುದರಿಂದ **"ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಂ"** ಎಂಬ ಯೋಗ

ಸೂತ್ರದಂತೆ ಯೋಗಿಯು ಆತ್ಮಸ್ವರೂಪದಲ್ಲಿ ನೆಲೆಗೊಳ್ಳುತ್ತಾನೆ. ಇದೇ ಸ್ವಾವಲಂಬಿಯಾದ ಧ್ಯಾನವೆನ್ನಬಹುದು. ಇದರಲ್ಲಿ ಯೋಗಿಯು ಮನೋವೃತ್ತಿಗಳಿಗೂ ಸಾಕ್ಷಿಯಾಗುವುದರಿಂದ ವೃತ್ತಿಗಳಿಗೆ ಸ್ವಾಮಿಯಾಗುತ್ತಾನೆ.

ವಿಜ್ಞಾನಶಾಸ್ತ್ರ ಹಾಗೂ ರೇಖಾಶಾಸ್ತ್ರಗಳ ಪ್ರಕಾರ ಈ ಜಗತ್ತಿನಲ್ಲಿ ಸರಳರೇಖೆಯೆಂಬುದೇ ಇಲ್ಲ. ರೇಖೆಯು ಸಣ್ಣದಾಗಿರುವಾಗ ನಮ್ಮ ಸ್ಥೂಲ ದೃಷ್ಟಿಗೆ ಸರಳವಾಗಿರುವಂತೆ ತೋರುತ್ತದೆ. ಸರಳರೇಖೆಯನ್ನೇ ಅಪರಿಮಿತವಾಗಿಯೂ ಅನಂತವಾಗಿಯೂ ಎಳೆದು ಬೆಳೆಸಿದರೆ ಅದೊಂದು ವೃತ್ತವೇ ಆಗುತ್ತದೆ. ಏಕೆಂದರೆ ನಾವು ಎಲ್ಲಿ ರೇಖೆಯನ್ನೆಳೆಯುವುದಕ್ಕಾದರೂ ದೇಶವೇ (space) ಆಧಾರ. ದೇಶಕಾಲಗಳಲ್ಲಿ ರೇಖೆಯನ್ನೆಳೆಯಬಹುದೇ ಹೊರತು, ದೇಶಕಾಲಗಳಿಲ್ಲದಲ್ಲಿ ರೇಖೆಯೇ ಇಲ್ಲ. ಆದರೆ ದೇಶಕಾಲಗಳೇ ವೃತ್ತಾಕಾರ ಅಥವಾ ವರ್ತುಲಾಕಾರ (Time–Space curvature) ಆಗಿವೆ. ಶಾಸ್ತ್ರಗಳಲ್ಲಿ ಸೃಷ್ಟಿಚಕ್ರವೆಂದೂ, ಜಗಚ್ಚಕ್ರವೆಂದೂ, ಕಾಲಚಕ್ರವೆಂದೂ, ಬ್ರಹ್ಮಾಂಡವೆಂದೂ ಉಪಯೋಗಿಸಿರುವುದು ಪ್ರಸಿದ್ಧವಾಗಿದೆ. ಆದ್ದರಿಂದ ವರ್ತುಲವಾಗಿರುವ ದೇಶಕಾಲಗಳಲ್ಲೆಳೆಯುವ ಎಲ್ಲಾ ಸರಳರೇಖೆಗಳೂ ವೃತ್ತಗಳೇ ಆಗುತ್ತವೆ. ಸಮಸ್ತ ಗ್ರಹಗಳೂ (ದೀರ್ಘ) ವೃತ್ತಾಕಾರವಾದ ಪಥಗಳಲ್ಲಿಯೇ ಸಂಚಾರಮಾಡುತ್ತಿವೆ. ವೃತ್ತದಲ್ಲಿ ಯಾವುದೊಂದು ಬಿಂದುವಿನಿಂದ ಹೊರಟು ಮುಂದುವರಿಯುತ್ತಾ ಮುಂದುವರಿಯುತ್ತಾ ಕಟ್ಟಕಡೆಗೆ ಹೊರಟ ಬಿಂದುವಿಗೇ ಬಂದು ಸೇರುವುದು ಅನಿವಾರ್ಯವೂ ಸಹಜವೂ ಆಗಿದೆ. ಸ್ಥೂಲವಾದ ಭೌತಿಕ ಜಗತ್ತಿನ ನೇಮವೇ ಸೂಕ್ಷ್ಮವಾದ ಅಂತಃಕರಣ ವೃತ್ತಿಗೂ ಅನ್ವಯಿಸುತ್ತದೆ ವೃತ್ತಿಯೆನ್ನುವುದೇ ವೃತ್ತರೂಪವನ್ನು ಸೂಚಿಸುತ್ತದೆ. ಹಾಗೆಯೇ ನಮ್ಮ ಬೌದ್ಧಿಕವಾದ ತರ್ಕಸರಣಿಯೂ ಚಕ್ರಾಕಾರವಾಗಿಯೇ ಇದೆ. ಭೌತಿಕಶಾಸ್ತ್ರದ ಶಕ್ತಿಶಾಖೆಯಲ್ಲಿ ಶಕ್ತಿಯೊಂದು ಇದೆಯೆಂದು ಮೊದಲೇ ಕಲ್ಪಿಸಿಕೊಂಡು ವಿವೇಚನೆ ಮಾಡುತ್ತಾ ಶೋಧನಮಾಡುತ್ತಾ ನಿರೀಕ್ಷಣ ಪರೀಕ್ಷಣ ಪ್ರಯೋಗಾದಿಗಳಿಂದ ಮುಂದುವರಿದು ಆರಂಭದಲ್ಲಿ ಊಹಿಸಿದ್ದ ಶಕ್ತಿಯನ್ನೇ ಸತ್ಯವೆಂದು ಸಿದ್ಧಾಂತಮಾಡುತ್ತೇವೆ. ಅಧ್ಯಾತ್ಮಶಾಸ್ತ್ರದಲ್ಲಿಯೂ ಹಾಗೆಯೇ ಆತ್ಮವೊಂದು ಇದೆಯೆಂದು ಮೊದಲೇ ಕಲ್ಪಿಸಿಕೊಂಡು ವಿವೇಚನೆ ಮಾಡುತ್ತಾ ತರ್ಕ ಮಾಡುತ್ತಾ ಕೊನೆಕೊನೆಗೆ ವಿಚಾರತರ್ಕಗಳನ್ನೂ ಮೀರಿ ಸತ್ಯಾತ್ಮನ ಅನುಭವ

ಪಡೆಯುತ್ತೇವೆ. ಹೀಗೆ ಜಗತ್ತಿನಲ್ಲಿ ಯಾವ ಕ್ಷೇತ್ರದಲ್ಲಿಯಾದರೂ ಸರಳಗತಿಯಲ್ಲಿ ಅಪರಿಮಿತವಾಗಿ ಮುಂದುವರಿದರೆ ಹೊರಟಲ್ಲಿಗೇ ಬಂದು ಸೇರುವುದು ಅನಿವಾರ್ಯವಾಗಿರುವಂತೆ ಧ್ಯಾನಯೋಗದಲ್ಲಿಯೂ ಆಗಿದೆ. ನಮ್ಮಲ್ಲಿ ನಾವೇ ಯಾವುದಾದರೊಂದು ಭಾವವನ್ನು ಪವಿತ್ರವಾಗಿಯೂ, ದಿವ್ಯವಾಗಿಯೂ, ಸರ್ವೋತ್ಕೃಷ್ಟವಾಗಿಯೂ ಕಲ್ಪಿಸಿಕೊಂಡು ಪರಮ ಪ್ರೇಮದಿಂದ ಅಖಂಡವಾಗಿ ಅದನ್ನೇ ಚಿಂತಿಸುತ್ತಾ ಪರಮಾವಧಿಯಾಗಿ ಬೆಳೆಸಿದರೆ ಕಲ್ಪಿತಭಾವವನ್ನು ಮೀರಿ ಆರಂಭಕೇಂದ್ರವಾದ ನಮ್ಮ ಸ್ವರೂಪಕ್ಕೇ ನಾವು ಬಂದು ಸೇರುವುದು ಅನಿವಾರ್ಯವೂ, ಸಹಜವೂ ಆಗಿದೆ. ಆದರೆ ಆರಂಭಸ್ಥಾನಕ್ಕೇ ಸಾಧನಾಂತ್ಯದಲ್ಲಿ ಬಂದು ಸೇರಿದರೂ ಕೂಡ ಆರಂಭಸ್ಥಿತಿಗೂ ಅಂತಿಮಸ್ಥಿತಿಗೂ ಮಾಯೆಗೂ ಬ್ರಹ್ಮಕ್ಕೂ ಇರುವಷ್ಟು ಮಹದಂತರವಿದೆ. ಸಾಧನಾರಂಭಕ್ಕೆ ಮೊದಲೂ ಯೋಗಿಯು ಆತ್ಮಚೈತನ್ಯವೇ ಇದ್ದನು; ಸಾಧನಾಂತ್ಯದಲ್ಲಿಯೂ ಅವನು ತಾನು ಆತ್ಮಚೈತನ್ಯವೆಂದೇ ತಿಳಿದನು. ಆದರೆ ಮೊದಲಿನ ಸ್ಥಿತಿಯಲ್ಲಿ ಮನಸ್ಸು ಅಜ್ಞವೂ, ಅಪಕ್ವವೂ, ಅಶುದ್ಧವೂ, ಅಸ್ಥಿರವೂ, ಅವಿಕಾಸಿತವೂ ಆಗಿದೆ. ಸಾಧನಾಂತ್ಯದ ಸ್ಥಿತಿಯಲ್ಲಿ ಯೋಗಿಯ ಮನಸ್ಸು ಪ್ರಾಜ್ಞವೂ, ಸುಪಕ್ವವೂ, ಪರಿಶುದ್ಧವೂ, ಸುಸ್ಥಿರವೂ, ಪೂರ್ಣ ವಿಕಸಿತವೂ ಆಗಿದೆ. ಸಾಧನಾರಂಭದಲ್ಲಿ ಯೋಗಿಯ ಆತ್ಮವು ಸ್ವಯಂಸಿದ್ಧವಾದರೂ ಅನುಭವಸಿದ್ಧವಾದುದಲ್ಲ. ಆದರೆ ಸಾಧನಾಂತ್ಯದಲ್ಲಿ ಯೋಗಿಗೆ ಆತ್ಮವು ಅನುಭವಸಿದ್ಧವಾಗುತ್ತದೆ. ಬಂಧದ ಬಾಧೆಯೂ ದುಃಖವೂ ಅನುಭವರೂಪವಾಗಿಯೇ ಇರುವುದರಿಂದ ಮೋಕ್ಷದ ಬೋಧೆಯೂ ಸುಖವೂ ಅನುಭವದಿಂದಲೇ ಸಿದ್ಧವಾಗಬೇಕು. ಅನುಭವಕ್ಕೆ ಅಭ್ಯಾಸ ಅಥವಾ ಸಾಧನವು ಬೇಕು. ಆದ್ದರಿಂದ ಸ್ವಾವಲಂಬಿಯಾದ ಆತ್ಮ ಧ್ಯಾನಾಭ್ಯಾಸದಿಂದಲೇ ಯೋಗಿಗೆ ಆತ್ಮಾನುಭವವಾಗುತ್ತದೆ.

## ಸಗುಣ-ಸಾಕಾರ ಧ್ಯಾನ

ಯಾವುದಾದರೊಂದು ವಸ್ತುವಿನ ರೂಪವನ್ನು ಧ್ಯಾನಮಾಡುವುದೇ ಸಾಕಾರ ಧ್ಯಾನವು. ಆ ವಸ್ತುವಿನ ಗುಣಗಳನ್ನು ಧ್ಯಾನಮಾಡುವುದೇ ಸಗುಣ ಧ್ಯಾನವು. ಗುಣಗಳನ್ನೂ ರೂಪವನ್ನೂ ಕೂಡ ಧ್ಯಾನಮಾಡುವುದೇ ಸಗುಣ-ಸಾಕಾರ ಧ್ಯಾನವು. ನಮ್ಮ ಜನ್ಮಾಂತರ ಸಂಸ್ಕಾರಗಳಿಗೂ, ವರ್ತಮಾನದ

ಅಭಿರುಚಿಗಳಿಗೂ ಅನುಗುಣವಾಗಿ ನಮಗೆ ಪರಮಪ್ರೇಮಾಸ್ಪದವಾದ ಶಿವ ಮೂರ್ತಿಯನ್ನೋ ವಿಷ್ಣುಮೂರ್ತಿಯನ್ನೋ ರಾಮಮೂರ್ತಿಯನ್ನೋ ಕೃಷ್ಣ ಮೂರ್ತಿಯನ್ನೋ ಗಾಯತ್ರೀ ಮೂರ್ತಿಯನ್ನೋ ದತ್ತಮೂರ್ತಿಯನ್ನೋ ನಮ್ಮ ಧ್ಯಾನಕ್ಕೆ ಇಷ್ಟದೇವತೆಯಾಗಿ ಆರಿಸಿಕೊಳ್ಳಬಹುದು. ಅಥವಾ ಬ್ರಹ್ಮ ನಿಷ್ಠ ಸದ್ಗುರುವಿನ ಮೂರ್ತಿಯೋ, ಅವನ ನಿರ್ದೇಶದಂತೆ ಅನ್ಯಮೂರ್ತಿಯೋ ಧ್ಯಾನಕ್ಕೆ ಸಗುಣ ಸಾಕಾರವಾಗಬಹುದು.

ಇಷ್ಟಮೂರ್ತಿಯ ಮೇಲೆ ಅಥವಾ ಇಷ್ಟಮೂರ್ತಿಯ ಭಾವಚಿತ್ರದ ಮೇಲೆ ಮೂರು ನಾಲ್ಕು ತಿಂಗಳು ತ್ರಾಟಕವನ್ನು ಅಭ್ಯಾಸಮಾಡಬೇಕು. ಇಷ್ಟ ಮೂರ್ತಿಯ ನಖಶಿಖಾಂತವಾಗಿ ಒಂದೊಂದೇ ಅವಯವದ ಮೇಲೆ ಮೊದಲು ತ್ರಾಟಕ ಮಾಡಬೇಕು. ಅನಂತರ ಹೆಚ್ಚು ಕಾಲ ಮುಖದ ಮೇಲೂ, ಇಡೀ ಮೂರ್ತಿಯ ಮೇಲೂ ತ್ರಾಟಕ ಮಾಡಬೇಕು.

ಹೀಗೆ ಮೂರು ನಾಲ್ಕು ತಿಂಗಳು ಬಾಹ್ಯತ್ರಾಟಕವು ಅಭ್ಯಾಸವಾದ ನಂತರ ಕಣ್ಣುಮುಚ್ಚಿಕೊಂಡು ಭ್ರೂಮಧ್ಯದಲ್ಲಿ ಒಂದು ಗಂಟೆಯಿಂದ ಎರಡು ಗಂಟೆಗಳವರೆಗೆ ಇಷ್ಟಮೂರ್ತಿಯ ಮಾನಸಿಕ ಚಿತ್ರವನ್ನು ಧ್ಯಾನಮಾಡಬೇಕು. ಧ್ಯಾನಮಾಡುತ್ತಿರುವಾಗ ಇಷ್ಟದೇವತಾ ಮಂತ್ರವನ್ನು ಉಪಾಂಶುವಿನಲ್ಲಿ (ತನಗೆ ಮಾತ್ರ ಕೇಳುವಂತೆ) ಅಥವಾ ಮಾನಸಿಕವಾಗಿ ಜಪಮಾಡಬೇಕು. ಮೂರ್ತಿಯ ಬೇರೆ ಬೇರೆ ಅವಯವಗಳಲ್ಲಿ ಮನಸ್ಸನ್ನು ಹರಿಸಬೇಕು. ಅಥವಾ ಮೂರ್ತಿಯ ಬೇರೆ ಬೇರೆ ಅಂಗಗಳನ್ನು ಮನಸ್ಸಿಗೆ ತಂದುಕೊಳ್ಳಬೇಕು. ಈ ಅಭ್ಯಾಸಬಲ ದಿಂದ ಪೂರ್ಣ ಮೂರ್ತಿಯನ್ನು ಮನೋನೇತ್ರದ ಎದುರಿಗೆ ನಿಲ್ಲಿಸಿಕೊಳ್ಳ ಬೇಕು. ತ್ರಿಕೂಟದಲ್ಲಿ (ಭ್ರೂಮಧ್ಯದಲ್ಲಿ) ಚೆನ್ನಾಗಿ ಲಕ್ಷ್ಯವನ್ನು ನಿಲ್ಲಿಸಿದ ಕೂಡಲೇ ಮಂಡಲಾಕಾರವಾದ ಪ್ರಕಾಶವು ಕಾಣುತ್ತದೆ. ಈ ಪ್ರಭಾಮಂಡಲ ದಲ್ಲಿ ಮನಸ್ಸು ಇಷ್ಟಮೂರ್ತಿಯ ಆಕಾರವನ್ನು ಹೊಂದಿ ಉಜ್ಜ್ವಲವಾಗಿ ಬೆಳ ಗುತ್ತದೆ. ಉದಾಹರಣೆಗಾಗಿ ಶ್ರೀಮನ್ನಾರಾಯಣ ಮೂರ್ತಿಯ ಧ್ಯಾನವನ್ನು ತೆಗೆದುಕೊಳ್ಳೋಣ. ಇದಕ್ಕೆ ಸಹಾಯಕವಾದ ಧ್ಯಾನಶ್ಲೋಕವೇನೆಂದರೆ,

“ ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತಿ ನಾರಾಯಣ ಸ್ಸರಸಿಜಾಸನ ಸನ್ನಿವಿಷ್ಟಃ, ಕೇಯೂರವಾನ್ ಮಕರ ಕುಂಡಲವಾನ್

**ಕಿರೀಟೀ ಹಾರೀ, ಹಿರಣ್ಮಯವಪುಃ ಧೃತಶಂಖಚಕ್ರಃ, ಶಂಖ ಚಕ್ರ ಗದಾ ಪದ್ಮ ದ್ವಾರಕಾ ನಿಲಯಾಚ್ಯುತ "**

" ಕೇಯೂರ ಮಕರ ಕುಂಡಲ ಕಿರೀಟ ಹಾರಾದಿ ಧಾರಿಯೂ, ಶಂಖ ಚಕ್ರ ಗದಾ ಪದ್ಮ ಧಾರಿಯೂ, ಬಂಗಾರಬಣ್ಣದ ದೇಹರುಚಿಯುಳ್ಳವನೂ, ಹೃದಯ ಕಮಲದಲ್ಲಿ ಅಥವಾ ಆಜ್ಞಾಚಕ್ರ ಕಮಲದಲ್ಲಿ ಸೂರ್ಯಮಂಡಲ ಮಧ್ಯದಲ್ಲಿ ಶೋಭಿಸುವವನೂ, ದ್ವಾರಕಾನಿವಾಸಿಯೂ, ಅಚ್ಯುತನೂ ಆದ ನಾರಾಯಣ ನನ್ನು ಯಾವಾಗಲೂ ಧ್ಯಾನಿಸಬೇಕು. "

ಧ್ಯಾನಮಾಡುವಾಗ ಮೊದಲು ಮನಸ್ಸಿನಿಂದ ನಾರಾಯಣಮೂರ್ತಿಯ ಚರಣವನ್ನೂ, ಅನಂತರ ಅವನು ಉಟ್ಟಿರುವ ಪೀತಾಂಬರವನ್ನೂ, ಅನಂತರ ಅವನ ವಜ್ರಖಚಿತವಾದ ಸ್ವರ್ಣಹಾರವನ್ನೂ, ವಕ್ಷಸ್ಥಲದ ಮೇಲೆ ವಿರಾಜಿಸುವ ಕೌಸ್ತುಭ ರತ್ನವನ್ನೂ, ಶ್ರೀವತ್ಸ ಲಾಂಛನವನ್ನೂ, ಕರ್ಣಕುಂಡಲಗಳನ್ನೂ, ಮಂದಹಾಸ ಮನೋಹರವಾದ ಮುಖಕಮಲವನ್ನೂ ಅನಂತರ ಮಸ್ತಕದ ಮೇಲಿರುವ ರತ್ನಕಿರೀಟವನ್ನೂ, ಬಲಗೈಯಲ್ಲಿ ಚಕ್ರವನ್ನೂ, ಎಡಗೈಯಲ್ಲಿ ಶಂಖವನ್ನೂ ಬಲಗಡೆಯ ಕೆಳಕೈಯಲ್ಲಿ ಗದೆಯನ್ನೂ ಎಡಗಡೆಯ ಕೆಳಕೈಯಲ್ಲಿ ಲೀಲಾಕಮಲವನ್ನೂ ಒಂದೊಂದಾಗಿ ಭಾವಿಸಬೇಕು. ಪುನಃ ಕಿರೀಟದಿಂದ ಚರಣದವರೆಗೂ, ಚರಣದಿಂದ ಕಿರೀಟದವರೆಗೂ, ಒಂದೊಂದೇ ಅವಯವ ವನ್ನು ಧ್ಯಾನಿಸಿ ಮುಖದಲ್ಲಿ ಹೆಚ್ಚು ಕಾಲ ಮನಸ್ಸನ್ನು ಇಡಬೇಕು ಕೇವಲ ನಿರ್ಜೀವವಾದ ರೂಪವನ್ನಷ್ಟೇ ಭಾವಿಸದೇ ಸಚೇತನವಾದ ಮೂರ್ತಿಯನ್ನೂ, ನಗುತ್ತಿರುವ ಮೂರ್ತಿಯನ್ನೂ, ಪ್ರಸನ್ನವಾಗಿ ತನ್ನೊಡನೆ ಮಾತಾಡುತ್ತಿರುವ ಮೂರ್ತಿಯನ್ನೂ, ವರಪ್ರದವಾದ ಭಾವವನ್ನೂ ಚಿಂತಿಸಬೇಕು. ಆ ಮೂರ್ತಿ ಯಲ್ಲಿ ಸರ್ವಜ್ಞತ್ವವನ್ನೂ, ಸರ್ವಶಕ್ತಿಯನ್ನೂ, ಸರ್ವವ್ಯಾಪಿತ್ವ-ಸರ್ವ ಪ್ರೇರಕತ್ವ-ಸರ್ವೇಶ್ವರತ್ವ ಮೊದಲಾದ ಮಹಾ ದಿವ್ಯಗುಣಗಳನ್ನೂ ಭಾವಿಸ ಬೇಕು. ಇದೇ ಸಗುಣ-ಸಾಕಾರ ಧ್ಯಾನವು.

ಮೊದಲು ಮೊದಲು ಧ್ಯಾತೃವಾದ ನಾನು ನನ್ನ ಧ್ಯೇಯಮೂರ್ತಿ ಯನ್ನು ಧ್ಯಾನಮಾಡುತ್ತಿದ್ದೇನೆಂಬ ಮೂರು ಕವಲುಗಳುಳ್ಳ ಕಲ್ಪನೆಗಳಿರು ತ್ತವೆ. ಧ್ಯಾನವು ಬೆಳೆಯುತ್ತಾ ಬಲಿಯುತ್ತಾ,

**ಧ್ಯಾತೃ ಧ್ಯಾನೇ ಪರಿತ್ಯಜ್ಯ ಕ್ರಮಾತ್ ಧ್ಯೇಯೈಕಗೋಚರಂ ।**
**ನಿವಾತ ದೀಪವಚ್ಚಿತ್ತಂ ಸಮಾಧಿರಭಿಧೀಯತೇ ॥**

"ಧ್ಯಾತೃವಾದ ನಾನು ಧ್ಯಾನಕರ್ಮವನ್ನು ನಡೆಸುತ್ತಿದ್ದೇನೆ ಎಂಬ ಭಾವನೆಗಳೆಲ್ಲಾ ಅಡಗಿ ಮೆಲ್ಲಮೆಲ್ಲಗೆ ಧ್ಯೇಯಮೂರ್ತಿಯೊಂದೇ ಗೋಚರವಾಗಿ ಚಿತ್ತವು ಧ್ಯೇಯಾಕಾರವಾಗಿ ಗಾಳಿಯಿಲ್ಲದ ಸ್ಥಳದಲ್ಲಿರುವ ದೀಪದಂತೆ ನಿಶ್ಚಲವಾಗಿಯೂ, ಉಜ್ಜ್ವಲವಾಗಿಯೂ ಪ್ರಜ್ಞೆಯು ನಿಂತರೆ (ಸವಿಕಲ್ಪ) ಸಮಾಧಿಯೆನಿಸುತ್ತದೆ. ಪಾತಂಜಲ ಯೋಗಸೂತ್ರಗಳಲ್ಲಿ, "**ತದೇವಾರ್ಥಮಾತ್ರನಿರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ ।**" ಎಂದು ಹೇಳಿದೆ. ಧ್ಯಾನಮಾಡುತ್ತಾ ಮಾಡುತ್ತಾ ಚಿತ್ತವು ಧ್ಯೇಯಾಕಾರವಾಗಿ, ತಾನು ಅದರಿಂದ ಭಿನ್ನನಾಗಿ ಉಳಿಯದೇ ಧ್ಯೇಯದಲ್ಲಿ ತನ್ಮಯನಾಗಿ ಉಳಿಯುವುದೇ ಸಮಾಧಿಯು. "ಧ್ಯೇಯವು ಮಾತ್ರವೇ ತೋರಿ ತಾನು ಇಲ್ಲದಂತಾಗುವುದೇ ಸಮಾಧಿಯು." ಧರ್ಮಾಮೃತವನ್ನೇ ವರ್ಷಿಸುವುದರಿಂದ ಈ ಸಮಾಧಿಯನ್ನು ಧರ್ಮ–ಮೇಘವೆಂದು ಕರೆಯುತ್ತಾರೆ. ಅಂದರೆ ಸಮಾಧಿಸಿದ್ಧಿಯನ್ನು ಪಡೆದ ಯೋಗಿಯು ಧರ್ಮಜ್ಞನೂ, ಧರ್ಮನಿಷ್ಠನೂ, ಧರ್ಮಾತ್ಮನೂ, ಧರ್ಮಬೋಧಕನೂ, ಧರ್ಮಪ್ರಚಾರಕನೂ, ಧರ್ಮೋದ್ಧಾರಕನೂ, ಧರ್ಮಸ್ಥಾಪಕನೂ, ಧರ್ಮಾವತಾರಿಯೂ ಆಗುತ್ತಾನೆ. ಸಮಾಧಿಯನ್ನು ಸಾಧಿಸಿರುವ ಯೋಗಿಯ ಆನಂದಕ್ಕೆ ಪಾರವೇ ಇಲ್ಲ.

ಹೀಗೆ ಮೊದಲು ವಿರಾಟ್‌ಪುರುಷನ ಧ್ಯಾನವನ್ನು ಅಭ್ಯಾಸಮಾಡಿ ಅನಂತರ ಸಗುಣ ಸಾಕಾರದ ಧ್ಯಾನವನ್ನು ಸಾಧಿಸಬೇಕು. ಹಿಂದೆ ಹೇಳಿದಂತೆ ಶಬ್ದಾರ್ಥಜ್ಞಾನವೆಂಬ ವಿವೇಚನೆಯಲ್ಲಿ, ಹೊರಗಿರುವ ಇಷ್ಟಮೂರ್ತಿಯ ಮೇಲೆ ತ್ರಾಟಕಮಾಡುವುದು ಇಂದ್ರಿಯಸಂವೇದನೆಗೆ ಕಾರಣವಾದ ಬಾಹ್ಯ ಸ್ಪಂದನಗಳನ್ನು ಅವಲಂಬಿಸುವುದೆಂಬ ಶಬ್ದವೆಂಬ ಸಾಧನವೂ, ಅನಂತರ ಇಷ್ಟಮೂರ್ತಿಯ ಕೇವಲ ಮಾನಸಿಕ ಚಿತ್ರವನ್ನು ಚಿಂತನ ಮಾಡುವುದು ಅಂತರಂಗ ಸಂವೇದನಾಲಂಬನರೂಪ ಅರ್ಥವೆಂಬ ಸಾಧನವೂ, ಕೊನೆಯಲ್ಲಿ ಧ್ಯಾತೃ ಮೊದಲಾದ ತ್ರಿಪುಟಿಗಳಳಿದು ಧ್ಯೇಯಮೂರ್ತಿಯು ಮಾತ್ರ ಪ್ರತೀತಿಯಾಗುವ ಸವಿಕಲ್ಪ ಸಮಾಧಿಸ್ಥಿತಿಯು ಕೇವಲ ಮಾನಸಿಕ ಪ್ರತಿಕ್ರಿಯಾತ್ಮಕ

ವಾದ ಜ್ಞಾನವೆಂಬ ಫಲಸಾಧನವೂ ಆಗಿವೆ. ಧ್ಯಾನಕ್ಕಾಗಿ ಈಗ ಶರೀರದಿಂದ ಹೊರಗಿರುವ 'ಶಬ್ದ' ಸಾಧನದ ಅವಲಂಬನವನ್ನು ಬಿಟ್ಟು ಒಳಗಿರುವ ಕೇವಲ ಸಂವೇದನಾತ್ಮಕ 'ಅರ್ಥ' ಸಾಧನದ ವಿಚಾರವನ್ನು ನೋಡೋಣ. ಇದನ್ನೇ ಲಯಯೋಗವೆಂದೂ, ತಾರಕಯೋಗವೆಂದೂ ಕರೆಯುತ್ತಾರೆ.

## ಲಯಯೋಗ

ನಾದಬಿಂದೂಪನಿಷತ್ತಿನಲ್ಲಿ,

**ಸಿದ್ಧಾಸನೇ ಸ್ಥಿತೋ ಯೋಗೀ ಮುದ್ರಾಂ ಸಂಧಾಯ ವೈಷ್ಣವೀಂ।**
**ಶೃಣುಯಾದ್ದಕ್ಷಿಣೇ ಕರ್ಣೇ ನಾದಮಂತರ್ಗತಂ ಸದಾ ॥**

"ಸಿದ್ಧಾಸನದಲ್ಲಿ ಕುಳಿತಿರುವ ಯೋಗಿಯು ಅರ್ಧೋನ್ಮೀಲಿತ ನೇತ್ರಗಳಿಂದ ದೃಷ್ಟಿಯನ್ನು ಒಳಮುಖ ಮಾಡಿ ಬಲಗಿವಿಯಿಂದ ಒಳಗಿರುವ ನಾದವನ್ನು ಸರ್ವದಾ ಕೇಳುತ್ತಿರಬೇಕು" ಎಂದು ಹೇಳಿದೆ. ಯೋಗಿಯು ಸಿದ್ಧಾಸನದಲ್ಲಿ ಕುಳಿತು ಎರಡು ಹೆಬ್ಬೆರಳುಗಳಿಂದ ಎರಡು ಕಿವಿಗಳನ್ನೂ, ಎರಡು ಮಧ್ಯದ ಬೆರಳುಗಳಿಂದ ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು. ಎರಡು ಅನಾಮಿಕ ಬೆರಳುಗಳಿಂದ ಮೂಗಿನ ಎರಡು ರಂಧ್ರಗಳನ್ನೂ ಒತ್ತಿ ಹಿಡಿಯಬೇಕು. ಇದಕ್ಕೆ ಷಣ್ಮುಖೀ ಮುದ್ರೆಯೆಂದೂ, ಯೋನಿಮುದ್ರೆಯೆಂದೂ ಹೆಸರು. ಈ ಮುದ್ರೆಯಿಂದ ಮನಸ್ಸಿಗೆ ಬಾಹ್ಯಜಗತ್ತಿನ ಸಂಬಂಧವೇ ತಪ್ಪಿ, ಕಣ್ಣುಗಳಲ್ಲಿ ಮಿಂಚಿನಂತೆ ಪ್ರಕಾಶವೂ, ಕಿವಿಗಳಲ್ಲಿ ಬಗೆಬಗೆಯಾದ ಅನಾಹತ ನಾದವೂ ಸ್ಫುರಿಸುತ್ತವೆ. ಹಾರಾಡುವ ಹೋರಿಗೆ ಬಲವಾದ ಮೂಗುದಾರವನ್ನು ಹಾಕಿ ಜಗ್ಗಿ ಹಿಡಿದಂತೆ ಮನಸ್ಸಿಗೆ ಆಗುತ್ತದೆ. ಕುಣಿದಾಡುವ ಕುದುರೆಯ ಕಡಿವಾಣವನ್ನು ರಾವುತನು ಝಾಡಿಸೆಳೆದು ಹಿಡಿದಂತೆ ಈ ಮುದ್ರೆಯಿಂದ ಮನಸ್ಸಿಗಾಗುತ್ತದೆ. ಕಿವಿಗಳಲ್ಲಿ ನಾದವು ಕೇಳಿಬರುತ್ತದೆ. ಹಲವು ದೊಡ್ಡ ಸಣ್ಣ ಚಕ್ರಗಳು ವೇಗವಾಗಿ ಗಿರ್ರನೆ ತಿರುಗುತ್ತಿರುವ ಒಂದು ಯಂತ್ರಾಲಯದಲ್ಲಿ ಬಗೆಬಗೆಯ ನಾದಗಳು ಕೇಳಿಬರುವಂತೆ ಶ್ವಾಸೋಚ್ಛ್ವಾಸ, ರಕ್ತಪ್ರಸರಣ, ಆಹಾರ ಪಚನ ಮೊದಲಾದ ಅನೇಕ ಕ್ರಿಯೆಗಳು ನಡೆಯುತ್ತಿರುವ ಈ ದೇಹವೆಂಬುವ ಯಂತ್ರಾಲಯದಲ್ಲಿಯೂ ಸಂಚಲನಜನ್ಯವಾದ ಬಗೆಬಗೆಯ ನಾದಗಳು ಸಹಜವಾಗಿ

ಕೇಳಿಬರುತ್ತವೆ. ಎಲ್ಲರಲ್ಲಿಯೂ ಈ ನಾದಗಳು ಗೂಢವಾಗಿದ್ದರೂ ಚಿತ್ತವು ಬಹಿರ್ಮುಖವಾಗಿ ವಿಷಯಾಸಕ್ತವಾಗುವುದರಿಂದ ತನ್ನೊಳಗೇ ನಡೆಯುತ್ತಿರುವ ಸೂಕ್ಷ್ಮವಾದ ಚಮತ್ಕಾರಗಳು ಲಕ್ಷ್ಯಕ್ಕೆ ಬರುವುದಿಲ್ಲ. ಮನಸ್ಸನ್ನು ಒಳತಿರುಗಿಸಿದ ಯೋಗಿಗೆ ಇವು ಸುಲಭವಾಗಿ ವೇದ್ಯವಾಗುತ್ತವೆ. ಈ ಒಳನಾದಗಳನ್ನು ಕೇಳುತ್ತಾ ಕೇಳುತ್ತಾ ಕಿವಿಯು ಹೊರಶಬ್ದಗಳಿಗೆ ಪೂರಾ ಕಿವುಡಾಗುತ್ತದೆ. ಮೊದಲು ಪ್ರಾರಂಭದಲ್ಲಿ ಹಲವು ದೊಡ್ಡ ಶಬ್ದಗಳು ಕೇಳುತ್ತವೆ. ಬರುಬರುತ್ತಾ ಅವು ಬಹಳ ಉಚ್ಚವಾಗುತ್ತಾ ತಾರಕಕ್ಕೇರುವಂತೆ ತೋರುತ್ತವೆ. ಆದರೆ ಅಭ್ಯಾಸಮಾಡುತ್ತಾ ನಾದಗಳು ಹೆಚ್ಚು ಹೆಚ್ಚು ಸೂಕ್ಷ್ಮವಾಗುತ್ತಾ ಬರುತ್ತವೆ. ಸೂಕ್ಷ್ಮ ನಾದಗಳನ್ನು ಸ್ಥೂಲದಿಂದ ಬಿಡಿಸಿ ತಿಳಿಯಬೇಕು. ಸ್ಥೂಲದಿಂದ ಸೂಕ್ಷ್ಮಕ್ಕೂ, ಸೂಕ್ಷ್ಮದಿಂದ ಸ್ಥೂಲಕ್ಕೂ ನಾದಗಳಲ್ಲಿಯೇ ಮನಸ್ಸು ಹರಿದಾಡಬೇಕೇ ಹೊರತು ಬೇರೆ ವಿಷಯಗಳ ಕಡೆ ಹರಿಯಬಾರದು. ಚಿತ್ತವು ನಾದದಲ್ಲಿ ಸಂಯಮವಾಗುತ್ತಾ ನಾದದಲ್ಲಿಯೇ ಲೀನವಾಗುತ್ತದೆ. ವೃತ್ತಿಗೆ ಯಾವ ಹೊರಗಿನ ಎಚ್ಚರವೂ ಇಲ್ಲದೆ (ಬಾಹ್ಯ ಸಂವೇದನಾ ಶೂನ್ಯವಾಗಿ) ನೀರು ಹಾಲಿನಲ್ಲಿ ಸೇರಿದಂತೆ ನಾದದಲ್ಲಿ ಬೆರೆತು ಚಿದಾಕಾಶದಲ್ಲಿ ಲಯವಾಗುತ್ತದೆ. ಇದೇ ಲಯಯೋಗವು. ಇದರಿಂದ ಶೀಘ್ರವಾಗಿ ತುರ್ಯಸ್ಥಿತಿಯು ಪ್ರಾಪ್ತಿಯಾಗುತ್ತದೆ. ಯೋಗಿಯು ಕಾಮವನ್ನೂ ಕರ್ಮವನ್ನೂ ತ್ಯಜಿಸಿ ಮನೋನಾಶ ಮಾಡುವ ನಾದದಲ್ಲಿಯೇ ಚಿತ್ತವನ್ನು ಲಯಮಾಡಬೇಕು. ಮಧುಪಾನ ಮಾಡುತ್ತಿರುವ ಭ್ರಮರವು ಅದರ ಮಾಧುರ್ಯಸೇವನೆಯಲ್ಲಿಯೇ ಮೈಮರೆತು ಆ ಜೇನಿನ ಗಂಧ ಮೊದಲಾದುವುಗಳನ್ನೂ ಹೇಗೆ ಅರಿಯದೋ ಹಾಗೆಯೇ ನಾದಸುಖದಲ್ಲಿಯೇ ಲೀನವಾದ ಚಿತ್ತವು ವಿಷಯಸುಖವನ್ನು ಮರೆತು ತನ್ನ ಸಹಜ ಚಾಪಲ್ಯವನ್ನು ತೊರೆಯುತ್ತದೆ. ಹಾವಾಡಿಗನ ಪುಂಗಿಯ ಇಂಪಾದ ನಾಗಸ್ವರವನ್ನು ಕೇಳಿದ ಸರ್ಪವು ಹೆಡೆ ಬಿಚ್ಚಿ ಆನಂದದಿಂದ ತೂಗಾಡುತ್ತಾ ಮೆಲ್ಲಮೆಲ್ಲನೆ ಮೇಲೆದ್ದು ನಾದಾವೇಶದಿಂದ ಬಾಲದ ತುದಿಯಲ್ಲಿ ನಿಂತು ಓಲಾಡುವಂತೆ ಅನಾಹತ ನಾದದ ಸೂಕ್ಷ್ಮವಾದ ವಿವಿಧ ವೈಖರಿಗಳ ಸೊಂಪನ್ನು ಚಿತ್ತವು ಸೇವಿಸುತ್ತಿದ್ದರೆ ಆ ಹುತ್ತದಲ್ಲಿ ಅಡಗಿರುವ ಕುಂಡಲಿನೀ ಶಕ್ತಿಯು ಜಾಗ್ರತವಾಗಿ ಮೂಲಾಧಾರದಿಂದ ಮೆಲ್ಲಮೆಲ್ಲನೆ ಮೇಲೆದ್ದು ಒಂದೊಂದೇ ಚಕ್ರಗಳನ್ನು ಭೇದಿಸುತ್ತಾ ಸಹಸ್ರಾರಕ್ಕೆ

ಸೇರಲು ಆ ನಾಗೇಂದ್ರನು ಹೆಡೆ ಬಿಚ್ಚಿ ಆನಂದದಿಂದ ಲಾಸ್ಯವಿಲಾಸದಲ್ಲಿ ಲೀನನಾಗುತ್ತಾನೆ.

ನಾದವು ಚಿತ್ತವೆಂಬುವ ಮದಗಜಕ್ಕೆ ಅಂಕುಶವೂ ಚಪಲ ಹರಿಣಕ್ಕೆ ಜಾಲವೂ, ಆಗಿದೆ ಅನಾಹತನಾದವು ದಶವಿಧವಾಗಿದೆ. ಮೊದಲನೆಯದು ಚಿಣಿ, ಎರಡನೆಯದು ಚಿಣಿಚಿಣಿ, ಮೂರನೆಯದು ಘಂಟಾನಾದ, ನಾಲ್ಕನೆಯದು ಶಂಖಧ್ವನಿ, ಐದನೆಯದು ವೀಣಾಗಾನ, ಆರನೆಯದು ತಾಳಸ್ವರ, ಏಳನೆಯದು ಮುರಳೀರವ, ಎಂಟನೆಯದು ಭೇರೀಧ್ವಾನ, ಒಂಬತ್ತನೆಯದು ಮೃದಂಗನಾದ, ಹತ್ತನೆಯದು ಮೇಘಗರ್ಜನ. ಅಭ್ಯಾಸವು ಬಲಿಯುತ್ತಾ ಹೋದರೆ ದಶವಿಧ ನಾದಗಳೂ ಸಂಯುಕ್ತವಾಗಿ ಅಖಂಡ ಪ್ರಣವ ನಾದವು ಒಂದೇ ಕೇಳುತ್ತದೆ. ನಾದವು ಕೇಳುವವರೆಗೂ ಚಿತ್ತವೂ ಇರುತ್ತದೆ. ಶಬ್ದ ವಡಗಿದರೆ ಚಿತ್ತವೂ ಲಯವಾಗಿ ತುರ್ಯವು ಲಭಿಸುತ್ತದೆ. “ **ನಿಶ್ಶಬ್ದಂ ಬ್ರಹ್ಮ ಉಚ್ಯತೇ** ” ಎಂಬಂತೆ ಶಬ್ದವಡಗಿದಾಗ (ಎಂದರೆ ವೃತ್ತಿಯಡಗಿದಾಗ) ಬ್ರಹ್ಮವು ಸ್ಫುರಿಸುತ್ತದೆ. ದೃಶ್ಯವಿಲ್ಲದೇ ದರ್ಶನವು ಸ್ಥಿರವಾದಾಗ. ಪ್ರಾಣಸ್ಪಂದನವು ಅನಾಯಾಸವಾಗಿ ಸ್ತಬ್ಧವಾದಾಗ ಚಿತ್ತವು ನಿರಾಲಂಬವಾದಾಗ ಯೋಗಿಯು ಬ್ರಹ್ಮವರಿಯುತ್ತಾನೆ. ಪುಣ್ಯಪಾಪಗಳೆಲ್ಲಾ ನಾಶವಾಗಿ ಮನೋಲಯವಾದಾಗ ಯೋಗಿಯು ಅಮೃತವೂ ನಿಷ್ಕಳಂಕವೂ ಆದ ಶುದ್ಧ ಬ್ರಹ್ಮದಲ್ಲಿ ಸೇರುತ್ತಾನೆ.

ಸೃಷ್ಟಿಗೆ ಮೊದಲು ಸ್ವಯಂಪ್ರಕಾಶವೂ, ಅಖಂಡವೂ, ಏಕರಸವೂ, ಅದ್ವಿತೀಯವೂ ಆದ ಪರಬ್ರಹ್ಮವಿತ್ತು. ಅದರ ಹೊರತು ಎರಡನೆಯದೇನೂ ಇರಲಿಲ್ಲ. ಸ್ಪಂದನ ಹಾಗೂ ಅಸ್ಪಂದನವೆಂಬ (ವ್ಯಕ್ತ ಮತ್ತು ಅವ್ಯಕ್ತವೆಂಬ) ಎರಡು ಶಕ್ತಿಗಳು ಶಿವರೂಪವಾದ ಬ್ರಹ್ಮದಲ್ಲಿ ನಿಗೂಢವಾಗಿದ್ದವು. ಪ್ರಾಣಿಗಳ ಕರ್ಮವಿಪಾಕಾನುಸಾರವಾಗಿ ಪ್ರಪಂಚ ಲಯವಾದ ಮೇಲೆ ಪುನಃ ಸೃಷ್ಟಿಯಾಗುತ್ತದೆ. ಪ್ರಳಯಕಾಲದಲ್ಲಿ ಬ್ರಹ್ಮದಲ್ಲಡಗಿದ್ದ ಪ್ರಾಣಿಗಳ ಕರ್ಮದ ಫಲವಾಗಿ “ **ಬಹು ಸ್ಯಾಂ ಪ್ರಜಾಯೇಯ** ” “ ನಾನೇ ಬಹುರೂಪಿಯಾಗಿ ಜನಿಸಬೇಕು ” ಎಂಬ ಸಂಕಲ್ಪವು ಬ್ರಹ್ಮದಲ್ಲಿ ಸ್ವಭಾವತಃ ಸ್ಫುರಣವಾಯಿತು. ಈ ಸಂಕಲ್ಪದ ಸ್ಫುರಣರೂಪ ಈಕ್ಷಣ ಮಾತ್ರದಿಂದಲೇ ಸ್ಪಂದನ ಮತ್ತು ಅಸ್ಪಂದನ ಶಕ್ತಿಗಳ ಸಂಯೋಗವಾಗಿ ಒಂದು ಮಹಾಶಕ್ತಿ ಉತ್ಪನ್ನವಾಯಿತು.

ಗುಣತ್ರಯುಗಳ ಸಾಮ್ಯಾವಸ್ಥೆಯ ಜಡಚೇತನಾತ್ಮಕ ಈ ಮಹಾಶಕ್ತಿಯೇ ಪ್ರಕೃತಿಯಾಗಿದೆ. ಪ್ರಕೃತಿಯ ಸ್ಪಂದನಾಂಶಕ್ಕೆ ಪರಾಪ್ರಕೃತಿ ಅಥವಾ ಪರ ಪ್ರಣವವೆಂದೂ ಅಸ್ಪಂದನಾಂಶಕ್ಕೆ ಅಪರಾಪ್ರಕೃತಿ ಅಥವಾ ಅಪರ ಪ್ರಣವ ವೆಂದೂ ಹೆಸರು. ಪರಾಪ್ರಕೃತಿಯ ಅಥವಾ ಪರಪ್ರಣವದ ಸತ್ತಾಮಾತ್ರದಿಂದ ಅಪರಾಪ್ರಕೃತಿಯಲ್ಲಿ ಅಥವಾ ಅಪರಪ್ರಣವದಲ್ಲಿ ಸೃಷ್ಟಿಗೆ ಪ್ರಾರಂಭವಾಗಿ ಅಕಾರ–ಉಕಾರ–ಮಕಾರವೆಂಬ ಮೂರು ರೂಪಗಳಾದವು. ಸೂರ್ಯನೊಬ್ಬ ನಾದರೂ ಅನೇಕ ಜಲಪಾತ್ರಗಳಲ್ಲಿ ಪ್ರತಿಬಿಂಬಿಸುವಂತೆ ಪರಬ್ರಹ್ಮವು ಅದ್ವಿತೀಯವಾದರೂ ಪ್ರಕೃತಿಜನ್ಯವಾದ ಭಿನ್ನ ಭಿನ್ನ ಉಪಾಧಿಗಳಲ್ಲಿ ಮೂರು ಮಹಾ ಶಕ್ತಿಗಳಾಗಿ ಭಾಸಮಾನವಾಯಿತು. ಬ್ರಾಹ್ಮೀ ವೈಷ್ಣವೀ ಮಾಹೇಶ್ವರೀ ರೂಪದಿಂದ ಈ ಮೂರು ಶಕ್ತಿಗಳು ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣವಾದುವು. ಬ್ರಹ್ಮ–ವಿಷ್ಣು–ಮಹೇಶ್ವರರೇ ಈ ಮೂರು ಶಕ್ತಿಗಳಿಗೂ ಅಧಿಷ್ಠಾನದೇವತೆಗಳು. ಪರಬ್ರಹ್ಮದ ಈಕ್ಷಣ ಶಕ್ತಿಯ ಪ್ರಭಾವದಿಂದ ಬ್ರಾಹ್ಮೀ ಮೊದಲಾದ ಒಂದೊಂದು ಶಕ್ತಿಯಲ್ಲಿಯೂ ಸಂಕ್ಷೋಭವಾಗಿ ಅಕಾರದಿಂದ ಸೂಕ್ಷ್ಮ ಶಬ್ದವೂ, ಉಕಾರದಿಂದ ಅದಕ್ಕಿಂತಲೂ ಸ್ಥೂಲವಾದ ಶಬ್ದವೂ, ಮಕಾರದಿಂದ ಅತ್ಯಂತ ಸ್ಥೂಲ ಶಬ್ದವೂ ಪ್ರಾದುರ್ಭಾವವಾದುವು. ಈ ಶಬ್ದಕ್ಕೇ ಯೌಗಿಕ ವಿಜ್ಞಾನದಲ್ಲಿ ನಾದವೆಂದು ಹೇಳುತ್ತಾರೆ.

ಅಕಾರದ ಸೂಕ್ಷ್ಮ ಶಬ್ದವು ಬ್ರಹ್ಮವಾಗಿದೆ. ಈ ಶಬ್ದದಲ್ಲಿರುವ ಸೂಕ್ಷ್ಮ ನಾದಶಕ್ತಿಯು ಬ್ರಾಹ್ಮೀಶಕ್ತಿಯಾಗಿದೆ. ಪರಬ್ರಹ್ಮದ ಈಕ್ಷಣ ಶಕ್ತಿಯಿಂದ ವಿಶ್ವಸೃಷ್ಟಿಗೆ ಕಾರಣವಾದ ಬ್ರಾಹ್ಮೀಶಕ್ತಿಯೇ ಸೂಕ್ಷ್ಮನಾದ ರೂಪದಿಂದ ಪ್ರಕಟವಾಗುತ್ತದೆ.

ಉಕಾರದ ಸ್ಥೂಲ ಶಬ್ದವೇ ವಿಷ್ಣುವಾಗಿದೆ. ಈ ಶಬ್ದದಲ್ಲಿರುವ ಸ್ಥೂಲ ನಾದ ಶಕ್ತಿಯು ವಿಶ್ವಸ್ಥಿತಿಗೆ ಕಾರಣವಾದ ವೈಷ್ಣವೀ ಶಕ್ತಿಯಾಗಿದೆ

ಮಕಾರದ ಅತ್ಯಂತ ಸ್ಥೂಲ ಶಬ್ದದಲ್ಲಿರುವ ಲಯಶಕ್ತಿಯ ಅಭಿಮಾನ ದೇವತೆಯೇ ಮಹೇಶ್ವರವಾಗಿದೆ. ಪರಬ್ರಹ್ಮದ ಈಕ್ಷಣಶಕ್ತಿಯ ಪ್ರಭಾವದಿಂದ ಪ್ರಕಟವಾಗುವ ಅತ್ಯಂತ ಸ್ಥೂಲ ನಾದವೇ ಮಾಹೇಶ್ವರೀ ಶಕ್ತಿಯಾಗಿದೆ. ಇದೇ ವಿಶ್ವಪ್ರಳಯದ ಮಹಾಕಾರಣವಾಗಿದೆ

ಜಗತ್ತಿನ ಸೃಷ್ಟ್ಯಾದಿಗಳಿಗೆ ಕಾರಣವಾದ ಮೂರು ಮಹಾ ಶಕ್ತಿಗಳಲ್ಲಿ ನಿಗೂಢವಾಗಿರುವ ನಿನಾದ ಶಕ್ತಿಗೇ ಯೌಗಿಕ ವಿಜ್ಞಾನದಲ್ಲಿ ಅ-ಉ-ಮ್ ಎಂಬ ಪಾರಭಾಷಿಕ ಸಂಕೇತಗಳಿವೆ ಈ ಕಾರಣದಿಂದಲೇ ಪರಬ್ರಹ್ಮದ ಸೃಷ್ಟಿಸಂಕಲ್ಪ ಶಕ್ತಿಗಳ ಸಮುಚ್ಚಯ ರೂಪವೇ ಓಂಕಾರವಾಗಿದೆ. ಪರಬ್ರಹ್ಮದ ತ್ರಿಮೂರ್ತಿರೂಪ ವಿಭೂತಿ ಶಕ್ತಿಗೇ ಈಶ್ವರನೆನ್ನುತ್ತಾರೆ. **“ ತಸ್ಯ ವಾಚಕಃ ಪ್ರಣವಃ ”** ಎಂಬ ಯೋಗಸೂತ್ರದಂತೆ ಓಂಕಾರವು ಈಶ್ವರವಾಚಕವಾಗಿದೆ. **“ ತಜ್ಜಪಸ್ತದರ್ಥ ಭಾವನಂ ”** ಎಂಬ ಯೋಗಸೂತ್ರದಂತೆ ಪ್ರಣವ ಜಪ ವನ್ನು ಅರ್ಥಾನುಸಂಧಾನಪೂರ್ವಕವಾಗಿಯೇ ಮಾಡಬೇಕು. ಈ ಭಾವನೆ ಯಿಂದ ಧ್ಯಾನಮಾಡುವುದಕ್ಕೆ ಏಕಾಗ್ರತೆಯು ಆಗತ್ಯವಿದೆ. ಈ ಏಕಾಗ್ರತೆಯು ನಾದಾನುಸಂಧಾನದಿಂದ ಸಹಜವಾಗಿ ಸಿದ್ಧವಾಗುತ್ತದೆ.

ಶಬ್ದವಿಲ್ಲದೇ ಸಂಕಲ್ಪವಿಲ್ಲ; ಸಂಕಲ್ಪವಿಲ್ಲದೇ ಕಾರ್ಯವಿಲ್ಲ ಅಥವಾ ಸೃಷ್ಟಿಯಿಲ್ಲ. ಆದ್ದರಿಂದ ಸೃಷ್ಟ್ಯಾದಿಗಳು ಸಂಕಲ್ಪರೂಪವಾಗಿಯೂ, ಸಂಕ ಲ್ಪವು ಶಬ್ದರೂಪವಾಗಿಯೂ ಇವೆ. ಸುವ್ಯವಸ್ಥಿತವೂ ಸುವಿಕಸಿತವೂ ಆದ ಶಬ್ದಜಾಲವೇ ಭಾಷೆಯಾಗಿದೆ. ಶಬ್ದವು ಅಕ್ಷರಾತ್ಮಕವಾಗಿದೆ. ಯಾವ ಭಾಷೆ ಯಾದರೂ ಆಗಲೀ, ಅಕ್ಷರಗಳ ಉತ್ಪತ್ತಿಸ್ಥಾನಗಳಲ್ಲಿ ಮೂಲಸ್ಥಾನದಲ್ಲಿ ಉದಯವಾಗುವುದೇ ಅಕಾರವು. ಮಧ್ಯದಲ್ಲಿ ಉರುಳಿಬರುವುದೇ ಉಕಾರವು. ಕೊನೆಯಲ್ಲಿ ಮುಕ್ತಾಯವಾಗುವುದೇ ಮ್ ಎಂಬುದರಿಂದ. ಈ ಮೂರು ಅಕ್ಷರಗಳು ಸಂಯೋಗವಾದರೆ ಓಂ ಎಂದಾಗುತ್ತದೆ. ಜಗತ್ತಿನಲ್ಲಿ ಯಾವ ಭಾಷೆಯ ಯಾವ ಶಬ್ದವೇ ಆಗಲಿ ವಾಗಿಂದ್ರಿಯವನ್ನು ಬಿಟ್ಟು ಬೇರೆ ರೀತಿ ಯಿಂದ ವ್ಯಕ್ತವಾಗುವಂತಿಲ್ಲ. ಆದಿಮಧ್ಯಾಂತ್ಯ ಪೂರ್ವಕವಾದ ಅಕ್ಷರೋತ್ಪತ್ತಿ ಸ್ಥಾನಗಳನ್ನು ಬಿಟ್ಟು ವಾಗಿಂದ್ರಿಯವಿಲ್ಲ. ಆದ್ದರಿಂದ ಆ ಮೂರು ಸ್ಥಾನ ಗಳಿಂದ ಉದಿಸುವ ಅ-ಉ-ಮ್ ಎಂಬ ಮೂರು ಅಕ್ಷರಗಳಲ್ಲಿಯೂ ಅವುಗಳ ಸಮುಚ್ಚಯವಾದ ಓಂಕಾರದಲ್ಲಿಯೂ ಸರ್ವ ಭಾಷೆಗಳ ಸರ್ವ ಶಬ್ದಗಳೂ, ಅರ್ಥವಿಲ್ಲದ ಧ್ವನಿಗಳೂ, ಸರ್ವಶಾಸ್ತ್ರಗಳೂ, ಸಮಸ್ತ ವೇದಗಳೂ ಅಡಕ ವಾಗಿವೆ. ಗೀತೆಯಲ್ಲಿ **‘ ಪ್ರಣವಸ್ಸರ್ವ ವೇದೇಷು ’** “ ಸರ್ವ ವೇದಗಳಲ್ಲಿ ಶ್ರೇಷ್ಠವಾದ ಪ್ರಣವವೇ ನಾನು ” ಎಂದು ಭಗವಂತನು ಹೇಳಿದ್ದಾನೆ. ತೈತ್ತಿರೀಯದಲ್ಲಿ **“ ಓಮಿತಿ ಬ್ರಹ್ಮ, ಓಮಿತೀದಂ ಸರ್ವಂ....... ”**

"ಓಂ ಎಂದರೆ ಬ್ರಹ್ಮ, ಈ ಸರ್ವವೂ ಓಂಕಾರವೇ" ಎಂದು ಹೇಳಿದೆ. **"ಓಮಿತ್ಯೇಕಾಕ್ಷರಂ ಬ್ರಹ್ಮ", "ಓಂ ತತ್‌ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಸ್ಸ್ಮೃತಃ"** ಮೊದಲಾದ ವಾಕ್ಯಗಳಲ್ಲಿ ಓಂಕಾರವೇ ಬ್ರಹ್ಮವೆಂದು ಹೇಳಿದೆ. ಈ ಓಂಕಾರವೇ ನಮ್ಮಲ್ಲಿ ನಾದರೂಪದಿಂದ ಪ್ರಕಟವಾಗಿದೆ. ನಾದೋಪಾಸನೆಯೇ ಓಂಕಾರೋಪಾಸನೆಯು.

ನಿಸ್ಪಂದವಾದ ಬ್ರಹ್ಮವನ್ನು ಬಿಟ್ಟರೆ ಸರ್ವವೂ ಸ್ಪಂದಾತ್ಮಕವಾಗಿದೆ. ಸ್ಪಂದನದಿಂದಲೇ ಸೃಷ್ಟಿಯು. ಸ್ಪಂದನವು ಶಬ್ದರೂಪವೇ ಆಗಿದೆ. ಸಕಲ ಸ್ಪಂದನಗಳ ಸಮಷ್ಟಿರೂಪವೇ ಓಂಕಾರವಾಗಿದೆ. ಸಾವಿರಾರು ಜನರು ಸೇರಿರುವ ಸಂತೆಗೋ ಜಾತ್ರೆಗೋ ಹೋದರೆ ಒಬ್ಬೊಬ್ಬರು ಒಂದೊಂದು ಬಗೆಯ ಮಾತನ್ನಾಡುತ್ತಿರುವುದು ಕೇಳುತ್ತದೆ. ಆದರೆ ಸ್ವಲ್ಪ ದೂರದಲ್ಲಿರುವ ಗುಡ್ಡದ ಮೇಲೆ ನಿಂತು ಕೇಳಿದರೆ ಎಲ್ಲಾ ಜನರ ಎಲ್ಲಾ ಮಾತುಗಳ ಸಂಯುಕ್ತ ಸಮರಸವಾದ 'ಓ' ಎಂಬ ಒಂದೇ ಶಬ್ದವು ಕೇಳುತ್ತದೆ. 'ಓ' ಎಂಬ ಸ್ವರದ ದೀರ್ಘವಾದ ಉಚ್ಚಾರಣೆಯನ್ನು ಮುಗಿಸಬೇಕಾದರೆ 'ಮ್' ಎಂದೇ ಬಾಯಿಮುಚ್ಚದೇ ಬೇರೆ ಗತಿಯಿಲ್ಲ. ಇದರಿಂದ 'ಓಂ' ಎಂದಾಯಿತು. ನೂರಾರು ಚಕ್ರಗಳು ಸುತ್ತುತ್ತಾ ಬಗೆಬಗೆಯ ಸಾವಿರಾರು ಶಬ್ದಗಳನ್ನು ಮಾಡುತ್ತಿರುವ ಒಂದು ಯಂತ್ರಾಲಯದಿಂದ (ಫ್ಯಾಕ್ಟರಿಯಿಂದ) ಸ್ವಲ್ಪ ದೂರ ನಿಂತರೆ 'ಓಂ' ಎಂಬ ಒಂದೇ ಸಮಷ್ಟಿ ಶಬ್ದವು ಕೇಳುತ್ತದೆ. ಸಮುದ್ರದಲ್ಲಿ ಸಣ್ಣದೊಡ್ಡ ಕೋಟ್ಯಂತರ ತೆರೆಗಳು ಏಳುತ್ತಾ ಬೀಳುತ್ತಾ ಕುಪ್ಪಳಿಸುತ್ತಾ ಅಪ್ಪಳಿಸುತ್ತಾ ಕೋಟ್ಯಂತರ ನಿನಾದಗಳನ್ನು ಮಾಡುತ್ತವೆ. ಆದರೆ ದೂರದಲ್ಲಿ ನಿಂತು ಕೇಳಿದರೆ ಭಿನ್ನಭಿನ್ನವಾದ ಅನಂತ ಶಬ್ದಗಳು ಒಟ್ಟು ಸೇರಿ ಏಕರಸವಾದ 'ಓ' ಎಂಬ ಒಂದೇ ನಾದವು ಕೇಳುತ್ತದೆ. ನಿತ್ಯನಿರಂತರವೂ ಅತಿಶಯ ವೇಗದಿಂದ ಸಂಚರಿಸುತ್ತಿರುವ ಸಮಸ್ತ ಗ್ರಹೋಪಗ್ರಹಗಳ ಮತ್ತು ಸೌರವ್ಯೂಹಗಳ ಸಂಚಲನ ಶಬ್ದವನ್ನು ನಾವು ಅವುಗಳಿಂದ ದೂರದಲ್ಲಿ ನಿಂತು ಕೇಳಬಹುದಾದರೆ ಅದೂ 'ಓಂ' ಎಂದೇ ಇರಬೇಕು. ಹೀಗೆ ನಿರಂತರ ಪರಿವರ್ತನೆಯಲ್ಲಿರುವ ಸೃಷ್ಟಿ ಚಕ್ರದ ನಾದವೇ 'ಓಂ'ಕಾರವಾಗಿದೆ. ಪ್ರಗಾಢವಾಗಿ ಬ್ರಹ್ಮಾಂಡದಲ್ಲಿರುವ ನಾದವೇ ಗೂಢವಾಗಿ ಪಿಂಡಾಂಡದಲ್ಲಿಯೂ ಇರುವುದನ್ನು ಯೋಗಿಯು ಅಂತರ್ಲಕ್ಷ್ಯದಿಂದ ಗುರ್ತಿಸಿ ದಿವ್ಯಜ್ಞಾನವನ್ನೂ ಮುಕ್ತಿಯನ್ನೂ ಪಡೆಯುತ್ತಾನೆ.

ಆಚಾರ್ಯ ಶಂಕರರು ತಮ್ಮ ಯೋಗತಾರಾವಳಿಯಲ್ಲಿ ಹೇಳಿರುವುದೇನೆಂದರೆ,

**ಸದಾಶಿವೋಕ್ತಾನಿ ಸಪಾದ ಲಕ್ಷ-**
**ಲಯಾವಧಾನಾನಿ ವಸಂತಿ ಲೋಕೇ ॥**
**ನಾದಾನುಸಂಧಾನ ಸಮಾಧಿಮೇಕಂ**
**ಮನ್ಯಾಮಹೇ ಮಾನ್ಯತಮಂ ಲಯಾನಾಂ ॥**
**ನಾದಾನುಸಂಧಾನ ನಮೋಽಸ್ತು ತುಭ್ಯಂ**
**ತ್ವಾಂ ಸಾಧನಂ ತತ್ತ್ವಪದಸ್ಯ ಜಾನೇ ॥**
**ಭವತ್ಪ್ರಸಾದಾತ್ಪವನೇನ ಸಾಕಂ**
**ವಿಲೀಯತೇ ವಿಷ್ಣುಪದೇ ಮನೋ ಮೇ ॥**

" ಚಿತ್ತವು ಲಯವಾಗುವುದಕ್ಕೆ (ಜಗದಾದಿ ಗುರುವಾದ) ಸದಾಶಿವನಿಂದ ಉಪದೇಶಿಸಲ್ಪಟ್ಟ ಒಂದು ಲಕ್ಷ ಇಪ್ಪತ್ತೈದು ಸಹಸ್ರ ಮಾರ್ಗಗಳು ಜಗತ್ತಿನಲ್ಲಿವೆ. ಆದರೆ ನಾದಾನುಸಂಧಾನದಿಂದ ಲಭಿಸುವ ಸಮಾಧಿಯೊಂದನ್ನೇ ಲಯಸಾಧನೆಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವೆಂದು ತಿಳಿಯುತ್ತೇವೆ." "ಹೇ ನಾದಾನುಸಂಧಾನವೇ! ನಿನಗೆ ನಮಸ್ಕಾರ! ನಿನ್ನನ್ನು ಪರತತ್ತ್ವಪದವನ್ನು ಪಡೆಯುವುದಕ್ಕೆ ಸಾಧನವನ್ನಾಗಿ ತಿಳಿಯುತ್ತೇನೆ. ನಿನ್ನ ಕೃಪಾಪ್ರಸಾದದಿಂದ ಪ್ರಾಣದೊಡನೆ ನನ್ನ ಮನಸ್ಸೂ ವಿಷ್ಣುಪದದಲ್ಲಿ ಲೀನವಾಗುತ್ತದೆ."

ನಾದಾನುಸಂಧಾನದಿಂದ ಚಿತ್ತವೃತ್ತಿಯು ನಿರೋಧವಾಗಿ "**ತದಾ ದ್ರಷ್ಟುಃ ಸ್ವರೂಪೇ ಅವಸ್ಥಾನಂ**" ಎಂಬಂತೆ ವೃತ್ತಿಲಯದ ಸಾಕ್ಷಿಯು ಸ್ವರೂಪಸ್ಥಿತಿಯನ್ನು ಪಡೆಯುತ್ತದೆ. ಈ ನಿರೋಧದ ವಿಷಯವಾಗಿ ಕಠೋಪನಿಷತ್ತಿನಲ್ಲಿ ಹೇಳಿರುವುದೇನೆಂದರೆ,

**ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।**
**ಬುದ್ಧಿಶ್ಚ ನ ವಿಚೇಷ್ಟತಿ ತಾಮಾಹುಃ ಪರಮಾಂ ಗತಿಮ್ ॥**
**ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಮ್ ।**
**ಅಪ್ರಮತ್ತಸ್ತದಾ ಭವತಿ ಯೋಗೋ ಹಿ ಪ್ರಭವಾಪ್ಯಯೌ ॥**

" ಯಾವ ಕಾಲದಲ್ಲಿ ಯೋಗಾಭ್ಯಾಸ ಬಲದಿಂದ ಪಂಚಜ್ಞಾನೇಂದ್ರಿಯಗಳೂ ಮನಸ್ಸಿನೊಡನೆ ನಿಶ್ಚಲವಾಗಿರುವುವೋ ಮತ್ತು ಬುದ್ಧಿಯೂ ಕೂಡ ನಿಶ್ಚೇಷ್ಟ ವಾಗುವುದೋ ಆ ಸ್ಥಿತಿಯನ್ನೇ ಅತ್ಯಂತ ಶ್ರೇಷ್ಠವಾದುದೆಂದು ಹೇಳುತ್ತಾರೆ. ಆ ಸ್ಥಿರವಾದ ಇಂದ್ರಿಯಧಾರಣ(ನಿಗ್ರಹ)ವನ್ನೇ ಯೋಗವೆನ್ನುತ್ತಾರೆ. ಹೊಂದಿದ ಯೋಗವನ್ನು ಕಳೆದುಕೊಳ್ಳಬಹುದೆಂದು ಆಗ ಆ ಯೋಗಿಯು ಬಹಳ ಎಚ್ಚರ ವುಳ್ಳವನಾಗುತ್ತಾನೆ. "

ಭಗವಾನ್ ಶಿವನು ಶಿವಸಂಹಿತೆಯಲ್ಲಿ ಹೇಳುವುದೇನೆಂದರೆ,

**ನಿರಾಲಂಬಂ ಮನಃಕೃತ್ವಾ ನ ಕಿಂಚದಪಿ ಚಿಂತಯೇತ್ |**
**ವೃತ್ತಿಹೀನಂ ಮನಃಕೃತ್ವಾ ಪೂರ್ಣರೂಪಂ ಸ್ವಯಂ ಭವೇತ್ ||**

" ಯಾವ ಕಾಲದಲ್ಲಿ ಸವಿಕಲ್ಪ ಸಮಾಧಿ ಸಾಧನದಿಂದ ನಿರ್ವಿಕಲ್ಪ ಸಮಾಧಿ ಸಿದ್ಧವಾಗುವುದೋ, ಮನಸ್ಸು ದೃಶ್ಯದ ಚಿಂತನೆಯನ್ನು ಬಿಟ್ಟು ವೃತ್ತಿರಹಿತ ವಾಗುವುದೋ ಆ ಕಾಲದಲ್ಲಿ ಯೋಗಿಯು ತಾನೇ ಪರಿಪೂರ್ಣ ಸ್ವರೂಪವನ್ನು ಪಡೆಯುತ್ತಾನೆ. "

ಈ ಪರಮಸ್ಥಿತಿಗೇ ' ಮೋಕ್ಷ, ಮುಕ್ತಿ, ಕೈವಲ್ಯ, ಬ್ರಾಹ್ಮೀಸ್ಥಿತಿ, ನಿರ್ವಾಣ, ಜೀವಬ್ರಹ್ಮೈಕ್ಯ, ಅಮನಸ್ಕ, ಅಪರೋಕ್ಷಾನುಭೂತಿ, ಸಾಕ್ಷಾತ್ಕಾರ" ಮುಂತಾದ ಹಲವು ದಿವ್ಯನಾಮಗಳಿವೆ.

ಇದೇ ರಾಜಯೋಗದ ನಿರ್ವಿಕಲ್ಪ ಸಮಾಧಿ ಅಥವಾ ಅಸಂಪ್ರಜ್ಞಾತ ಸಮಾಧಿಯು. ಈ ರಾಜಯೋಗದಿಂದ ಯೋಗಿಯು ಆತ್ಮಜ್ಞನಾಗುವುದಲ್ಲದೆ ಸರ್ವಸಿದ್ಧಿಗಳನ್ನೂ ಪಡೆಯುತ್ತಾನೆ.

ಇಲ್ಲಿಗೆ ರಾಜಯೋಗದ ವಿಚಾರವು ಮುಗಿದಿರುವುದರಿಂದ ಇದುವರೆಗೆ ಬಂದಿರುವ ಅಥವಾ ಬಾರದಿರುವ (ಈ ಯೋಗಸಂಬಂಧವಾದ ವಿಷಯಗಳನ್ನು) ಈ ಕೆಳಗೆ ಸೂಕ್ಷ್ಮವಾಗಿ ತಿಳಿಸಿರುವಂತೆ ಸಂಗ್ರಹಮಾಡಬಹುದು.

1. ರಾಜಯೋಗಕ್ಕೆ ಎಂಟು ಅಂಗಗಳಿವೆ :

ಅ) **ಯಮ :** ತಡೆಹಿಡಿಯುವುದು ; ಆ) **ನಿಯಮ :** ಸದಾಚಾರ ; ಇ) **ಆಸನ :** ಕೂತುಕೊಳ್ಳುವ ರೀತಿ ; ಈ) **ಪ್ರಾಣಾಯಾಮ :** ಉಸಿರನ್ನು

ಬಿಗಿಹಿಡಿಯುವುದು; ಉ) **ಪ್ರತ್ಯಾಹಾರ**: ಉಪಸಂಹಾರ, ಹಿಂದಕ್ಕೆ ಜಗ್ಗು; ಊ) **ಧಾರಣ**: ಏಕಾಗ್ರತೆ; ಋ) **ಧ್ಯಾನ**: ಚಿಂತನ, ಅನುಸಂಧಾನ; ೠ) **ಸಮಾಧಿ**: ವೃತ್ತಿಗಳು ಅಡಗಿ ಸ್ವರೂಪದ ಪ್ರಕಾಶನ.

2. ಯಮಗಳು ಐದು. ಅಹಿಂಸಾ: ನೋಯಿಸದಿರುವುದು; ಸತ್ಯ: ನಿಜವನ್ನು ತಿಳಿಯುವುದು, ನುಡಿಯುವುದು; ಅಸ್ತೇಯ: ಕದಿಯದಿರುವುದು; ಬ್ರಹ್ಮಚರ್ಯ: ವೀರ್ಯರಕ್ಷಣ; ಅಪರಿಗ್ರಹ: ಭೋಗವಸ್ತುಗಳ ದಾನವನ್ನು ತೆಗೆದುಕೊಳ್ಳದಿರುವುದು.

3. ನಿಯಮಗಳು ಐದು. ಶೌಚ: ಒಳಹೊರಗೆ ಶುಚಿಯಾಗಿರುವುದು; ಸಂತೋಷ: ತೃಪ್ತಿ, ಆನಂದ; ತಪಸ್ಸು: ಚಿತ್ತೇಂದ್ರಿಯಗಳನ್ನು ನಿಗ್ರಹಿಸುವುದು; ಇದು ಕಾಯಕ, ವಾಚಿಕ, ಮಾನಸಿಕ ಎಂದೂ, ಸಾತ್ವಿಕ, ರಾಜಸ, ತಾಮಸ ಎಂದೂ ಮೂರು ಮೂರು ಬಗೆಗಳಿವೆ. ಹಾಗೆಯೇ ಅಹಿಂಸೆಯಲ್ಲಿಯೂ ಕಾಯಕ, ವಾಚಿಕ, ಮಾನಸಿಕ ಎಂದು ಮೂರು ಬಗೆ ಇದೆ. ಸ್ವಾಧ್ಯಾಯ: ವೇದಶಾಸ್ತ್ರಗಳ ಪಠನ; ಈಶ್ವರಪ್ರಣಿಧಾನ: ಈಶ್ವರಪೂಜೆ, ಶರಣಾಗತಿ ಮುಂತಾದುವು.

4. ಪ್ರಾಣಾಯಾಮ. ಪೂರಕ: ಉಸಿರನ್ನು ತುಂಬಿಕೊಳ್ಳುವುದು; ಕುಂಭಕ: ಉಸಿರನ್ನು ಬಿಗಿಹಿಡಿದು ನಿಲ್ಲಿಸುವುದು; ರೇಚಕ: ಉಸಿರನ್ನು ಹೊರಬಿಡುವುದು ಎಂದು ಮೂರು ಬಗೆ.

5. ಕುಂಭಕವು ಎರಡು ಬಗೆ. ಸಹಿತ – ಉಸಿರನ್ನು ಎಳೆಯುವುದು; ಕೇವಲ – ಉಸಿರನ್ನು ಎಳೆದು ಬಿಡುವುದಿಲ್ಲದೆ; ಅಲ್ಲದೆ ಸೂರ್ಯಭೇದಿನಿ, ಶೀತಲಿ, ಶೀತ್ಕಾರಿ ಮುಂತಾದ ಎಂಟು ಭೇದಗಳಿವೆ.

6. ಧಾರಣ ಎರಡು ಬಗೆ. ಬಹಿರ್ಲಕ್ಷ್ಯ ಧಾರಣ: ಹೊರಗಿನ ವಸ್ತುವಿನಲ್ಲಿ ಏಕಾಗ್ರತೆ; ಅಂತರ್ಲಕ್ಷ್ಯ ಧಾರಣ: ಮನಸ್ಸಿನಿಂದ ಕಲ್ಪಿತವಾದ ವಸ್ತುವಿನಲ್ಲಿ ಏಕಾಗ್ರತೆ.

7. ಧ್ಯಾನವು ಎರಡು ಬಗೆ. ಸಗುಣಧ್ಯಾನ: ಸರ್ವಜ್ಞತ್ವ, ಸರ್ವಶಕ್ತಿತ್ವ ಮುಂತಾದ ಕಲ್ಯಾಣ ಗುಣಗಳಿಂದ ಕೂಡಿದ ಈಶ್ವರನ ಧ್ಯಾನ; ನಿರ್ಗುಣಧ್ಯಾನ: ಗುಣರಹಿತ ಪರಬ್ರಹ್ಮನ ಧ್ಯಾನ.

8. ಸಮಾಧಿ ಎರಡು ಬಗೆ. ಸಂಪ್ರಜ್ಞಾತ ಅಥವಾ ಸವಿಕಲ್ಪ : ಚಿತ್ತದಲ್ಲಿ ಅಖಂಡ ತೈಲಧಾರೆಯಂತೆ ಧ್ಯೇಯೈಕ ರೂಪವಾದ ಒಂದೇ ವೃತ್ತಿ ಕೊನೆಯ ಪಕ್ಷ ಅರ್ಧಘಂಟೆಯಾದರೂ ಉಳಿಯುವುದು ; ಅಸಂಪ್ರಜ್ಞಾತ ಸಮಾಧಿ : ಆ ಧ್ಯೇಯೈಕ ರೂಪವಾದ ಒಂದೇ ವೃತ್ತಿಯೂ ಅಡಗಿ ನಿಜರೂಪ–ಚೈತನ್ಯವೇ ಬೆಳಗುವುದು.

9. ಸವಿಕಲ್ಪ ಸಮಾಧಿಯು ಆರು ಬಗೆ. ಸವಿತರ್ಕ: ತರ್ಕ–ಯುಕ್ತಿಗಳಿಂದ ಕೂಡಿದ್ದು ; ನಿರ್ವಿತರ್ಕ : ತರ್ಕರಹಿತ ; ಸವಿಚಾರ : ಆತ್ಮವಿಚಾರದಿಂದ ಕೂಡಿದ್ದು : ನಿರ್ವಿಚಾರ : ವಿಚಾರವೂ ಅಡಗಿದ್ದು; ಸಾನಂದ : ಆನಂದಸಹಿತ ; ಸಸ್ಮಿತ : 'ನಾನು' ಎಂಬ ಅರಿವಿನಿಂದ ಕೂಡಿದ್ದು.

10. ಸಿದ್ಧಿಗಳು ಎಂಟು. ಅಣಿಮಾ : ಅತ್ಯಂತ ಸೂಕ್ಷ್ಮವಾಗುವುದು; ಮಹಿಮಾ : ಅತ್ಯಂತ ದೊಡ್ಡದಾಗುವುದು ; ಲಘಿಮಾ : ಹತ್ತಿಗಿಂತಲೂ ಹಗುರಾಗುವುದು ; ಗರಿಮಾ : ಅತ್ಯಂತ ಭಾರವಾಗುವುದು ; ಪ್ರಾಪ್ತಿ : ಯಾವ ಸ್ಥಳವನ್ನಾದರೂ ವಸ್ತುವನ್ನಾದರೂ ಹೊಂದುವ ಶಕ್ತಿ ; ಪ್ರಾಕಾಮ್ಯ : ಎಲ್ಲಾ ಬಗೆಯ ಕಾಮನೆಗಳೂ ಸಿದ್ಧಿಯಾಗುವುದು ; ಈಶತ್ವ : ವಿಶ್ವಕ್ಕೇ ಪ್ರಭುವಾಗುವುದು ; ವಶಿತ್ವ : ಸರ್ವವನ್ನೂ ವಶಪಡಿಸಿಕೊಳ್ಳುವ ಶಕ್ತಿ.

11. ವೈರಾಗ್ಯ ಮೂರು ಬಗೆ. ಮಂದ, ಮಧ್ಯ, ತೀವ್ರ.

12. ವೃತ್ತಿಗಳು ಐದು ಬಗೆ. ಪ್ರಮಾಣ : ಸರಿಯಾದ ತಿಳಿವಳಿಕೆ; ವಿಪರ್ಯಯ : ತಪ್ಪು ತಿಳಿವಳಿಕೆ; ವಿಕಲ್ಪ : ಸಂಶಯ ; ನಿದ್ರಾ : ಮರವೆಯ ಮುಸುಕು ; ಸ್ಮೃತಿ : ನೆನಪು.

13. ಪ್ರಮಾಣಗಳು ಮೂರು. ಪ್ರತ್ಯಕ್ಷ: ಇಂದ್ರಿಯಗಳಿಂದ ನೇರವಾಗಿ ನೋಡುವುದು ; ಅನುಮಾನ : ಊಹೆ; ಆಗಮ : ಶಾಸ್ತ್ರವಾಕ್ಯ.

14. ಕ್ಲೇಶಗಳು ಐದು. ಅವಿದ್ಯಾ: ಅನಿತ್ಯ, ಅಶುಚಿ, ದುಃಖ. ಅನಾತ್ಮಗಳಲ್ಲಿ ನಿತ್ಯ, ಶುಚಿ, ಸುಖ, ಆತ್ಮಭಾವನೆಗಳನ್ನು ಮಾಡುವುದೇ ಅವಿದ್ಯಾ ; ಅಸ್ಮಿತಾ : ಅಹಂಕಾರ; ರಾಗ : ಪ್ರೀತಿ ; ದ್ವೇಷ : ಹಗೆತನ; ಅಭಿನಿವೇಶ : ವಿಷಯಗಳಲ್ಲಿ ಮನಸ್ಸು ಸಿಕ್ಕಿಕೊಳ್ಳುವುದು, ಆಸಕ್ತಿ.

15. ಮನಸ್ಸಿನ ಅವಸ್ಥೆಗಳು ಐದು. ಕ್ಷಿಪ್ತ : ಚಪಲ; ವಿಕ್ಷಿಪ್ತ : ಚಂಚಲ: ಮೂಢ : ಮಂಕು, ದಡ್ಡ, ಜಡ; ಏಕಾಗ್ರ : ಸೂಕ್ಷ್ಮವಾದ ಗುರಿಯಲ್ಲಿ ನೆಲೆಸುವುದು; ನಿರುದ್ಧ : ಬಿಗಿಹಿಡಿದುದು, ತಡೆದುದು, ಅಡಗಿದುದು.

16. ನಿರೋಧಸಾಧನ ಎರಡು ಬಗೆ. ಅಭ್ಯಾಸ : ಮತ್ತೆ ಮತ್ತೆ ಸಾಧಿಸುವುದು; ವೈರಾಗ್ಯ : ವಿಷಯಗಳಲ್ಲಿ ಜುಗುಪ್ಸೆ.

17. ಯೋಗಕ್ಕೆ ಅಂತರಾಯಗಳು ಅಥವಾ ವಿಘ್ನಗಳು ಒಂಬತ್ತು. ವ್ಯಾಧಿ : ರೋಗ; ಸ್ತ್ಯಾನ : ಪ್ರಜ್ಞಾಮಾಂದ್ಯ; ಸಂಶಯ : ಮನಸ್ಸಿನ ನಿಶ್ಚಯವಿಲ್ಲದ ಹೊಯಿದಾಟ; ಪ್ರಮಾದ : ಮರೆವೆ, ತಪ್ಪು ನಡೆ, ಎಚ್ಚರ ತಪ್ಪುವಿಕೆ; ಆಲಸ್ಯ : ಸೋಮಾರಿತನ; ಅವಿರತಿ : ಭೋಗಲಾಲಸೆ; ಭ್ರಾಂತಿದರ್ಶನ : ಮರುಳು ತಿಳಿವು, ಒಂದನ್ನು ಇನ್ನೊಂದನ್ನಾಗಿ ತಿಳಿಯುವುದು; ಅಲಬ್ಧಭೂಮಿಕತ್ವ : ಏಕಾಗ್ರತೆಯನ್ನು ಪಡೆಯದಿರುವುದು; ಅನವಸ್ಥಿತತ್ವ : ಅಸ್ಥಿರತೆ.

18. ಚಿತ್ತದ ಚಾಂಚಲ್ಯಕ್ಕೆ ಕಾರಣಗಳು. ದುಃಖ : ಮಾನಸಿಕ, ದೈಹಿಕವಾದ ನೋವುಗಳು; ದೌರ್ಮನಸ್ಯ : ನೈರಾಶ್ಯ, ಕಂಗೆಡುವುದು, ಮುಂಗಾಣದಿರುವುದು; ಅಂಗಮೇಜಯತ್ವ : ನರದೌರ್ಬಲ್ಯ; ಶ್ವಾಸ : ಉಸಿರೆಳೆದುಕೊಳ್ಳುವುದರಲ್ಲಿ ದೋಷ; ಪ್ರಶ್ವಾಸ : ಉಸಿರು ಬಿಡುವುದರಲ್ಲಿ ದೋಷ.

19. ಮನಸ್ಸಮಾಧಾನಕ್ಕೆ ನಾಲ್ಕು ಸಾಧನಗಳು. ಮೈತ್ರಿ : ಸಂಪತ್ತಿನಿಂದಲೂ ಸಂಸ್ಕೃತಿಯಿಂದಲೂ ಉತ್ತಮರಾದವರಲ್ಲಿ ಗೆಳೆತನ; ಕರುಣಾ : ದೀನರಲ್ಲಿಯೂ ದುಃಖಿತರಲ್ಲಿಯೂ ಅನುಕಂಪ, ದಯೆ; ಮುದಿತ : ಇರುವುದರಲ್ಲಿಯೇ ತೃಪ್ತಿ, ತಾನಾಗಿಯೇ ದೊರೆತದ್ದರಲ್ಲಿ ತೃಪ್ತಿ, ಹೆಚ್ಚಿನ ಆಶೆಗಳಿಲ್ಲದಿರುವುದು, ಸಜ್ಜನರಲ್ಲಿ ಪ್ರೀತಿ; ಉಪೇಕ್ಷಾ : ದುರ್ಜನರಲ್ಲಿ.

20. ಸಂಯಮ : ಧಾರಣಾ–ಧ್ಯಾನ–ಸಮಾಧಿಗಳ ಸಮ್ಮಿಶ್ರಣ. ಇದು ಸರ್ವಸಿದ್ಧಿಗಳಿಗೂ ಸಾಧನವು.

21. ಯೋಗಿಗಳಲ್ಲಿ ಮೂರು ತರಗತಿಗಳು. ಆರುರುಕ್ಷು : ಯೋಗದ ಸೋಪಾನಗಳನ್ನು ಏರುವುದಕ್ಕೆ ಪ್ರಯತ್ನಶೀಲನಾದವನು ; ಯುಂಜಾನ : ಸಾಧನದಲ್ಲಿ ತೊಡಗಿರುವವನು ; ಯೋಗಾರೂಢ : ಯೋಗದಲ್ಲಿ ನೆಲೆಗೊಂಡವನು, ಯೋಗದಲ್ಲಿ ಸುಪ್ರತಿಷ್ಠನಾದವನು, ಯೋಗಸಿದ್ಧನು.

22. ವೈರಾಗ್ಯದಲ್ಲಿ ಎರಡು ನೆಲೆಗಳು ; ಅಪರವೈರಾಗ್ಯ, ಪರವೈರಾಗ್ಯ. ಅಪರವೈರಾಗ್ಯ ನಾಲ್ಕು ಬಗೆ. ಯತಮಾನಸಙ್ಜ್ಞಾ : ಭೋಗ್ಯವಸ್ತುಗಳಲ್ಲಿ ದೋಷವನ್ನೇ ನೋಡುವುದು ; ವ್ಯತಿರೇಕಸಙ್ಜ್ಞಾ : ಮನಸ್ಸಂಯಮವನ್ನು ಬೆಳೆಸುವ ಪ್ರಯತ್ನ ; ಏಕೇಂದ್ರಿಯಸಙ್ಜ್ಞಾ : ಪ್ರಧಾನವಾದ ಇಂದ್ರಿಯವನ್ನು ಅಂದರೆ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳುವುದಕ್ಕೆ ಪ್ರಯತ್ನ ; ವಶೀಕರಣಸಙ್ಜ್ಞಾ : ಇಂದ್ರಿಯಗಳ ಹಾಗೂ ಮನಸ್ಸಿನ ಪೂರ್ಣ ನಿಗ್ರಹ.

23. ಧ್ಯಾನಕಾಲದಲ್ಲಿ ಮನಸ್ಸು ಯಾವ ವಿಷಯದಲ್ಲಿ ಹರಿದು ಹೋದರೂ ಆಯಾ ವಿಷಯಗಳಿಂದ, ವಿಚಾರಬಲದಿಂದ ಹಿಂದಕ್ಕೆಗಿಸಿ ತಂದು ತನ್ನ ಗುರಿಯಲ್ಲಿಯೇ ಆತ್ಮನಲ್ಲಿಯೇ ನಿಲ್ಲಿಸಿಕೊಳ್ಳಬೇಕು. ಚಿತ್ತವು ಧ್ಯೇಯಾಕಾರವಾಗುವುದಕ್ಕೆ ನಾಲ್ಕು ಅಡ್ಡಿಗಳಿವೆ. ಮಲ, ವಿಕ್ಷೇಪ, ಕಷಾಯ, ರಸಾಸ್ವಾದ. ಮಲ : ಕಾಮಕ್ರೋಧಾದಿಗಳು ; ವಿಕ್ಷೇಪ : ಮನಸ್ಸು ಹೊರಚೆಲ್ಲುವುದಕ್ಕೆ ದೇಹವಾಸನಾ, ಲೋಕವಾಸನಾ, ಶಾಸ್ತ್ರವಾಸನೆಗಳೇ ಕಾರಣ ; ಕಷಾಯ : ಮನೋರಾಜ್ಯ ; ಇದನ್ನೆಲ್ಲಾ ಕಳೆದುಕೊಂಡು ಒಂದು ವೇಳೆ ಚಿತ್ತವು ಧ್ಯಾನಸ್ಥಿತಿಯನ್ನು ಪಡೆದರೂ, ರಸಾಸ್ವಾದ : ಧ್ಯೇಯಾಕಾರವನ್ನು ಬಿಟ್ಟು, ಧ್ಯಾನಸುಖವನ್ನು ಕಲ್ಪಿಸಿಕೊಂಡು ಸವಿಯುತ್ತಿರುವುದು. ವಿಚಾರ ವೈರಾಗ್ಯಗಳಿಂದಲೂ ಪುನಃ ಪುನಃ ಧ್ಯಾನವನ್ನು ಅಭ್ಯಾಸಮಾಡುವುದರಿಂದಲೂ ಈ ಅಡ್ಡಿಗಳು ಅಳಿಯುತ್ತವೆ.

**ಸಮಾಧಿನಿರ್ಧೂತಮಲಸ್ಯ ಚೇತಸೋ**
**ನಿವೇಶಿತಸ್ಯಾತ್ಮನಿ ಯತ್ಸುಖಂ ಭವೇತ್ ।**
**ನ ಶಕ್ಯತೇ ವರ್ಣಯಿತುಂ ಗಿರಾ ತದಾ**
**ಸ್ವಯಂ ತದಂತಃಕರಣೇನ ಗೃಹ್ಯತೇ ॥**

ಎಂಬ ಶ್ರುತಿಯಂತೆ ಸಮಾಧಿಸುಖವು ಅನುಭವೈಕ ವೈದ್ಯವೇ ಹೊರತು ಆಡಿ ತೋರಿಸುವುದಕ್ಕೆ ಬರುವುದಲ್ಲ. ಸಮಾಧಿಯಿಂದ ಪವಿತ್ರವಾದ ಚಿತ್ತವು ಆತ್ಮ ನಲ್ಲಿ ನೆಲೆಸುವುದರಿಂದ ಉಂಟಾಗುವ ಸುಖವು ಅಪಾರವಾದುದು. ಇದುವರೆಗೆ ಬುದ್ಧಿಶಕ್ತಿಗೆ ಸಂಬಂಧಪಟ್ಟ ಜ್ಞಾನಯೋಗವನ್ನೂ, ಅಹಂಕರಣಶಕ್ತಿಗೆ ಸಂಬಂಧ ಪಟ್ಟ ಕ್ರಿಯಾಯೋಗವನ್ನೂ, ಚಿತ್ತವೃತ್ತಿಗೆ ಸಂಬಂಧಪಟ್ಟ ರಾಜಯೋಗವನ್ನೂ ವಿಚಾರಮಾಡಿದೆವು. ಈಗ ಮನಶ್ಶಕ್ತಿಗೆ ಸಂಬಂಧಪಟ್ಟ "ಪ್ರೇಮಯೋಗ ವನ್ನೂ" ಅಥವಾ "ಭಕ್ತಿಯೋಗ" ವನ್ನು ವಿಚಾರಮಾಡೋಣ.

# ಪಂಚಮ ಪ್ರಕಾಶ

## ಭಕ್ತಿಯೋಗ

ನಿರ್ದಿಷ್ಟವಾದ ದೇಶ-ಕಾಲ-ನಿಮಿತ್ತಗಳ ನಿಯಮಕ್ಕೊಳಪಟ್ಟಿರುವ ಅಪಾರವಾದ ವಸ್ತುಗಳಿಂದಲೂ, ನಿಸ್ಸೃಷ್ಟವಾದ ಸ್ಥಿತಿಗತಿಗಳುಳ್ಳ ಅನಂತವಾದ ಗ್ರಹನಕ್ಷತ್ರಗಳಿಂದಲೂ, ನಿಶ್ಚಿತವಾದ ಕ್ರಿಯಾಕಾರಕ-ಫಲಭೋಗಗಳಿಂದ ಸುಖ ದುಃಖಗಳನ್ನನುಭವಿಸುವ ಅನೇಕ ಜೀವರುಗಳಿಂದಲೂ, ಪರಮಾಶ್ಚರ್ಯಕರ ವಾದ ರಚನಾವಿಶೇಷವುಳ್ಳ ಈ ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣ ನಾದವನೇ ಭಗವಂತನು. ಅವನು ಸರ್ವಜ್ಞನಾಗಿಯೂ, ಸರ್ವಶಕ್ತನಾಗಿಯೂ, ನಿತ್ಯನಾಗಿಯೂ, ಸತ್ಯಸ್ವರೂಪನಾಗಿಯೂ ಇದ್ದಾನೆಂದು ಸಕಲ ವೇದಶಾಸ್ತ್ರ ಗಳೂ, ಮಹರ್ಷಿಗಳೂ, ಮಹಾತ್ಮರೂ ಸ್ವಾನುಭವ ಸಾಮರ್ಥ್ಯದಿಂದ ಸಾರು ತ್ತಿದ್ದಾರೆ. ಅಂಥಾ ಸರ್ವೇಶ್ವರನೂ, ಸರ್ವಭರಿತನೂ, ಸರ್ವನಿಯಾಮಕನೂ, ಸರ್ವಪ್ರೇರಕನೂ, ಸರ್ವರಕ್ಷಕನೂ ಆದ ಭಗವಂತನನ್ನು ಬಿಟ್ಟು ಪ್ರಪಂಚದಲ್ಲಿ ಯಾವುದೂ ಸ್ವತಂತ್ರವಲ್ಲವೆಂದು ತಿಳಿಯುವುದರಿಂದ ನಮ್ಮ ಹೃದಯದಲ್ಲಿ ಉದಿಸುವ ಶ್ರದ್ಧಾದರಯುಕ್ತವೂ, ಗೌರವಪೂರ್ಣವೂ ಆದ ಭಗವತ್ಪ್ರೇಮವೇ ಭಕ್ತಿಯೆನಿಸುತ್ತದೆ.

ನಮಗೆ ಭಕ್ತಿಮೀಮಾಂಸೆಯೂ ಬೇಕು, ಭಕ್ತಿಯೋಗವೂ ಬೇಕು. ಭಕ್ತಿ ಸಂಬಂಧವಾದ ಸರ್ವವಿಷಯಗಳನ್ನೂ, ವಿಚಾರಿಸಿ ತಿಳಿಯುವುದರಿಂದ ಭಕ್ತಿ ಯನ್ನು ಸಾಧಿಸುವ ಪ್ರವೃತ್ತಿಯೂ, ಶ್ರದ್ಧೆಯಿಂದ ಸಾಧಿಸುವುದರಿಂದ ತತ್ತ್ವ ಸಾಕ್ಷಾತ್ಕಾರ-ರಸಾನುಭವಗಳೂ ಉಂಟಾಗುತ್ತವೆ. (**'ರಸೋ ವೈ ಸಃ'** ರಸವೆಂದರೆ ಪ್ರೇಮಾನಂದ ರಸರೂಪನಾದ ಪರಮಾತ್ಮ.)

ಆ ಸಾಧನಾನುಭವಗಳಿಂದ ನಾವು ವಿವೇಕಿಗಳೂ, ನಯ-ವಿನಯ- ದಯಾಸಂಪನ್ನರೂ, ಸುಸಂಸ್ಕೃತರೂ, ಪ್ರೇಮಸಾಗರರೂ, ದೈನ್ಯದುಃಖ

ರಹಿತರೂ, ಶಾಂತರೂ, ಸುಖಿಗಳೂ, ಕೃತಕೃತ್ಯರೂ, ಮುಕ್ತರೂ, ಮಹಾ ಯೋಗಿಗಳೂ, ಲೋಕೋಪಯೋಗಿಗಳೂ, ಲೋಕಕಲ್ಯಾಣ-ಕೈಂಕರ್ಯಸಾಧಕರೂ ಆಗುತ್ತೇವೆ.

ನಾರದರು **" ಸಾ ತು ಕರ್ಮಜ್ಞಾನಯೋಗೇಭ್ಯೋಽಪ್ಯಧಿಕತರಾ"** (ಭಕ್ತಿಸೂತ್ರ) ಕರ್ಮಯೋಗ, ಜ್ಞಾನಯೋಗ, ರಾಜಯೋಗಗಳಿಗಿಂತಲೂ ಭಕ್ತಿಯೋಗವೇ ಶ್ರೇಷ್ಠವೆಂದು ಹೇಳಿದ್ದಾರೆ. ಶ್ರೀ ಶಂಕರಾಚಾರ್ಯರೂ **"ಮೋಕ್ಷಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ।"** "ಮೋಕ್ಷಕ್ಕೆ ಕಾರಣವಾದ ಸಾಧನಗಳಲ್ಲಿ ಭಕ್ತಿಯೇ ಶ್ರೇಷ್ಠವಾಗಿದೆ" ಎಂದಿದ್ದಾರೆ.

ಜ್ಞಾನಯೋಗಕ್ಕೆ ಬುದ್ಧಿವಿಚಾರವೂ, ರಾಜಯೋಗಕ್ಕೆ ಚಿತ್ತನಿರೋಧವೂ ಮುಖ್ಯ ಸಾಧನೆಗಳಾದಂತೆ ಭಕ್ತಿಯೋಗಕ್ಕೆ ಮನೋಭಾವನೆಯೇ (ಅಥವಾ ರಸ್ಯವಾದ ಭಾವನಾಬಲವೇ) ಮುಖ್ಯ ಸಾಧನವಾಗಿದೆ. ಮದಗಜವನ್ನು ಬಂಧಿಸುವುದಕ್ಕೆ ಮೂರು ಹುರಿಗಳು ಕೂಡಿ ಬಲವಾಗಿರುವ ಒಂದು ಉಕ್ಕಿನ ಹಗ್ಗವು ಬೇಕಾಗಿರುವಂತೆ ಕರಣವೃತ್ತಿಯನ್ನು ಪಳಗಿಸಿ ಪ್ರಸನ್ನಮಾಡಿಕೊಳ್ಳುವುದಕ್ಕೂ ಪ್ರೇಮವೂ ಧ್ಯಾನವೂ ಜ್ಞಾನವೂ ಸಮ್ಮಿಳಿತವಾದ ಸಮಗ್ರ ಸಾಧನವು ಬೇಕು. ಆದ್ದರಿಂದ ಭವ್ಯಳಾದ ಭಕ್ತಿದೇವಿಯನ್ನು ದಿವ್ಯವಾದ ಜ್ಞಾನಪೀಠದ ಮೇಲೆ ಪ್ರತಿಷ್ಠಿಸಿ ನಿತ್ಯನವ್ಯವಾದ ಧ್ಯಾನಕಮಲಗಳಿಂದ ಪೂಜಿಸೋಣ.

ಭಕ್ತಿಯೆಂದರೆ ಪೂಜ್ಯಭಾವದಿಂದ ಒಡಗೂಡಿದ ಪ್ರೇಮ; ಗೌರವಯುಕ್ತವಾದ ಪ್ರೇಮ; ನಮ್ರತೆಯಿಂದಲೂ ಗಾಂಭೀರ್ಯದಿಂದಲೂ ಭರಿತವಾದ ಪ್ರೇಮ. " ಗುರುಹಿರಿಯರಲ್ಲಿಯೂ, ದೇವರಲ್ಲಿಯೂ ಭಯಭಕ್ತಿಯಿಂದ ನಡೆಯಬೇಕು" ಎನ್ನುವ ರೂಢಿಯಿದೆ. ಇಲ್ಲಿ 'ಭಯ' ಎನ್ನುವುದಕ್ಕೆ ಭೀತಿ ಎನ್ನುವ ವಾಚ್ಯಾರ್ಥ ಮಾಡಬಾರದು. ಏಕೆಂದರೆ, ಪ್ರಿಯ ಮತ್ತು ಭಯ ಎಂಬ ಈ ಎರಡು ಭಾವಗಳು ಒಂದೇ ವಿಷಯದಲ್ಲಿ ಇರಲು ಸಾಧ್ಯವಿಲ್ಲ. ಪ್ರಿಯವಿದ್ದಲ್ಲಿ ಭಯವಿಲ್ಲ, ಭಯವಿದ್ದಲ್ಲಿ ಪ್ರಿಯವಿಲ್ಲ. **" ಅಭಯಂ ಹಿ ವೈ ಬ್ರಹ್ಮ "** ಎಂಬ ಶ್ರುತಿಯಂತೆ ಬ್ರಹ್ಮ ಅಥವಾ ಭಗವಂತನು ಅಭಯಸ್ವರೂಪನು. ಆದ್ದರಿಂದ ಭಗವಂತನನ್ನು ಹೊಂದುವವನೂ, ಹೊಂದಿದವನೂ

**" .... .... ಅಭಯಂ ಪ್ರತಿಷ್ಠಾಂ ವಿಂದತೇ । ಅಥಸೋ ಅಭಯಂ ಗತೋ ಭವತಿ ।"** ಭಯರಹಿತನಾಗುತ್ತಾನೆಂದು ತೈತ್ತಿರೀಯವು ಹೇಳಿದೆ.

ಭಯವು ಭಯವನ್ನೂ ಪ್ರಿಯವು ಪ್ರಿಯವನ್ನೂ ಹುಟ್ಟಿಸುವುದು ಸ್ವಭಾವ ಸಿದ್ಧವೂ ಪ್ರಸಿದ್ಧವೂ ಆಗಿದೆ. ಆದರೆ ಭಯದುಃಖಗಳ ನಾಶಕ್ಕಾಗಿಯೇ ನಾವು ಭಗವಂತನನ್ನು ಭಜಿಸಬೇಕಾಗಿರುವುದರಿಂದ ಆನಂದಸ್ವರೂಪನಾದ ಅವನಲ್ಲಿ ಪ್ರೇಮವನ್ನು ಬೆಳೆಸಬೇಕಾಗಿದೆ. ಆದ್ದರಿಂದ 'ಭಯಭಕ್ತಿ' ಎಂಬ ರೂಢಿಯ ಮಾತಿನಲ್ಲಿರುವ ಭಾವವೇನೆಂದರೆ, "ಎಚ್ಚರಿಕೆಯಿಂದಲೂ ವಿನಯ ವಿಧೇಯತೆಗಳಿಂದಲೂ ಶ್ರದ್ಧಾಗಾಂಭೀರ್ಯಗಳಿಂದಲೂ ಪ್ರೇಮವನ್ನು ಮಾಡಬೇಕು" ಎಂದು. ಏಕೆಂದರೆ, ಅವಿಚಾರದಿಂದಲೂ ಅತಿ ಪರಿಚಯದಿಂದಲೂ ಪ್ರೇಮಾಸ್ಪದನಾದ ವಸ್ತುವಿನಲ್ಲಿ ಸಲ್ಲದ ಸಲಿಗೆಯೂ, ಹಗುರವಾದ ನಡೆವಳಿಕೆಯೂ ಉಂಟಾಗಿ ಅದಕ್ಕೆ ಅನಾದರವಾಗುವ ಸಂಭವವಿದೆ. ಇವರಿಂದ ಭಕ್ತಿಯ ಉದ್ದೇಶವೇ ವಿಫಲವಾಗುವುದಲ್ಲದೆ, ಆ ಅವಜ್ಞೆಯು ಅಸ್ಟಿಷ್ಟು, ಪ್ರಿಯವಸ್ತುವಿನ ಕ್ಷೋಭೆಗೂ ಕಾರಣವಾಗಬಹುದು. ಆದ್ದರಿಂದ ಎಚ್ಚರಿಕೆಯನ್ನು ಕೊಟ್ಟು, ಆ ಅಪಾಯವನ್ನು ತಪ್ಪಿಸುವುದಕ್ಕಾಗಿ 'ಭಯಭಕ್ತಿ' ಎಂಬ ಪ್ರಯೋಗವಿದೆ.

ಕುರುಕ್ಷೇತ್ರದ ಯುದ್ಧಾರಂಭದ ಸಮಯದಲ್ಲಿ ಅರ್ಜುನನ ಮೋಹಜನ್ಯವಾದ ಶೋಕವನ್ನು ಕಳೆಯುವುದಕ್ಕಾಗಿ ಶ್ರೀಕೃಷ್ಣ ಪರಮಾತ್ಮನು ತೋರಿಸಿದ ಅದ್ಭುತವಾದ ವಿಶ್ವರೂಪವನ್ನು ದರ್ಶನಮಾಡಿದ ಅರ್ಜುನನು, ಅವನ ಅಗಾಧವಾದ ಮಾಹಾತ್ಮ್ಯವನ್ನರಿತು, ಅಂಥ ಮಹಿಮಾವಂತ ಭಗವಂತನೊಡನೆ ಪಾಮರನಾದ ತಾನು ಸಖ್ಯನಿಮಿತ್ತದಿಂದ ನಡೆದುಕೊಳ್ಳುತ್ತಿರುವ ಸಲ್ಲದ ಸಲಿಗೆಯನ್ನು ನೆನೆಸಿಕೊಂಡು ಭೀತನಾಗಿ ಭಕ್ತಿಯಿಂದ ಹೇಳುವುದೇನೆಂದರೆ,

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ ।**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ॥**
**ಅಜಾನತಾ ಮಹಿಮಾನಂ ತವೇದಂ ।**
**ಮಯಾ ಪ್ರಮಾದಾತ್ಪ್ರಣಯೇನ ವಾಪಿ ॥**

(ಅ. ೧೧, ಶ್ಲೋ. ೪೧.)

ಯಚ್ಚಾವಹಾಸಾರ್ಥಮಸತ್ಕೃತೋಽಸಿ ।
ವಿಹಾರ ಶಯ್ಯಾಸನ ಭೋಜನೇಷು ॥
ಏಕೋಽಥವಾಪ್ಯಚ್ಯುತ ತತ್ಸಮಕ್ಷಂ ।
ತತ್ ಕ್ಷಾಮಯೇ ತ್ವಾಮಹಮಪ್ರಮೇಯಂ ॥

(ಅ. ೧೧, ಶ್ಲೋ. ೪೨.)

" ಭಗವಂತ! ನಿನ್ನ ಈ ಮಹಿಮೆಯನ್ನು ತಿಳಿಯದಿರುವ ನನ್ನಿಂದ, ನಿನ್ನನ್ನು ಸ್ನೇಹಿತನೆಂದು ತಿಳಿದಿರುವುದರಿಂದ ಪ್ರೇಮದಿಂದಾಗಲೀ, ಅವಿವೇಕದಿಂದಾಗಲೀ ಎಲೈ ಕೃಷ್ಣ, ಎಲೈ ಯಾದವನೆ, ಎಲೈ ಮಿತ್ರನೆ! ಎಂದು ಸಲಿಗೆಯಿಂದ ಏಕ ವಚನದಲ್ಲಿ ಆಡಿದ ಮಾತುಗಳಿಗೂ, ಅಚ್ಯುತನೆ! ಹಾಸ್ಯಕ್ಕಾಗಿಯೂ ವಿನೋದ ಕ್ಕಾಗಿಯೂ ಆಟವಾಡುವ, ಹಾಸಿಗೆಯ ಮೇಲಿರುವ, ಕುಳಿತುಕೊಳ್ಳುವ, ಊಟ ಮಾಡುವ ಕಾಲಗಳಲ್ಲಿಯಾಗಲೀ, ಏಕಾಂತದಲ್ಲಾಗಲೀ, ಸ್ನೇಹಿತರೆದುರಿಗೆ ಯಾಗಲೀ ನೀನು ಯಾವ ರೀತಿಯಿಂದ ಅವಮಾನಗೊಳಿಸಲ್ಪಟ್ಟಿದ್ದೀಯೋ ಅದೆಲ್ಲವನ್ನೂ (ಮರೆಯಬೇಕೆಂದು) ಊಹೆಗೆ ನಿಲುಕಲಾರದ ಪ್ರಭಾವಶಾಲಿ ಯಾದ ನಿನ್ನನ್ನು ಕ್ಷಮಾಪಣೆ ಬೇಡುತ್ತೇನೆ."

ಆದ್ದರಿಂದ ಭಯಭಕ್ತಿಯೆನ್ನುವಾಗ ಭಯವು ನಯ, ಗಾಂಭೀರ್ಯ, ವಿನಯಶೀಲತೆ, ಸಾವಧಾನತೆ ಮುಂತಾದ ಸಂಯಮಶೀಲ ಗುಣಗಳನ್ನು ಸೂಚಿಸುತ್ತದೆ. ಏಕೆಂದರೆ, ಭಕ್ತಿಯು ಭಾವತೀವ್ರತೆ(Emotion)ಯ ಸಂಬಂಧವಾದುದು; ಭಾವಾವೇಗದಲ್ಲಿ ಸಾಮಾನ್ಯವಾಗಿ ಆವೇಶದ ಅಮಲಿರು ವುದರಿಂದ ಔಚಿತ್ಯದ ಎಚ್ಚರವುಳಿಯದೆ ಒರಟುತನವೇ ನುಸುಳಿಕೊಳ್ಳುವುದು ಸ್ವಾಭಾವಿಕ. ಆದ್ದರಿಂದ ಆ ಭಾವತೀಕ್ಷ್ಣತೆಯ ಒರಟು ವಜ್ರವನ್ನು ಭಯದ ಸಾಣೆಗೆ ಕೊಟ್ಟು ಅದರಲ್ಲಿ ನಯಕೌಶಲದ ಮಧುರ ಕಾಂತಿಯು ಬೆಳಗಿ ಅದು ರಸರತ್ನವಾಗುವಂತೆ ಮಾಡಬೇಕು. ಭಗವಂತನ ಮಹಿಮಾಗುಣಗಳನ್ನು — ಪ್ರೀತಿಯ ಬಳಕೆಯಲ್ಲಿ — ಮರೆಯಬಾರದೆಂದು 'ಭಯ'ವು ಎಚ್ಚರಿಸು ತ್ತದೆ; ಅಷ್ಟೆ.

ವ್ರಜಗೋಪಿಯರು ತಮ್ಮ ಕೃಷ್ಣಪ್ರೇಮದಲ್ಲಿ ಆ ಪರಮಾತ್ಮನ ಮಹಿ ಮಾತಿಶಯಗಳನ್ನು ಮರೆತಿದ್ದರೆಂಬ ದೋಷವಿಲ್ಲ. " ನ ತತ್ರಾಪಿ

ಮಾಹಾತ್ಮ್ಯ ಜ್ಞಾನ ವಿಸ್ಮೃತ್ಯಪವಾದಃ " ಎಂದು ನಾರದರು ತಮ್ಮ ಭಕ್ತಿಸೂತ್ರದಲ್ಲಿ ಹೇಳಿದ್ದಾರೆ.

ಗೀತೆಯಲ್ಲಿ ಪರಮಾತ್ಮನು ದೈವೀಸಂಪತ್ತಿನ ಗುಣಗಳನ್ನು ಹೇಳುವಾಗ, 'ಅಭಯ' ಗುಣವನ್ನೇ ಮೊದಲು ಹೇಳಿರುವುದರಲ್ಲಿ ಬಹಳ ಮಹತ್ವವಿದೆ. " ದ್ವಿತೀಯಾ ದ್ವೈ ಭಯಂ ಭವತಿ " ಎಂಬ ಶ್ರುತಿಯಂತೆ ಎರಡನೆಯದೆಂಬ ಭಾವದಿಂದ ಭಯವುಂಟಾಗುವುದರಿಂದ ಭೇದಸೂಚಕವಾದ ಭಕ್ತಿಗಿಂತಲೂ ಐಕ್ಯಭಾವದ ಸಮರಸತೆಯನ್ನು ಸಾಧಿಸುವ ಪ್ರೇಮವು ಹೆಚ್ಚಿನದೆಂದು ಮುಂದೆ ಹೇಳುವ ಮಧುರಭಾವದ ರಾಗಾತ್ಮಿಕಾ ಭಕ್ತಿಯಲ್ಲಿಯೂ ಪರಾಭಕ್ತಿಯಲ್ಲಿಯೂ ತಿಳಿಯುತ್ತದೆ.

ಒಂದು ಪ್ರೇಮವೇ ಪಾತ್ರಭೇದದಿಂದಲೂ ವೃತ್ತಿಭೇದದಿಂದಲೂ ವ್ಯವಹಾರದಲ್ಲಿ ಬೇರೆ ಬೇರೆ ರೂಪಗಳನ್ನೂ ಹೆಸರುಗಳನ್ನೂ ಪಡೆದು ವಿಶ್ವರೂಪಿಯಾಗಿದೆ. ಇದು ಹೇಗೆಂದರೆ – ವಯಸ್ಸು, ವಿದ್ಯಾ, ತಪಸ್ಸು, ಜ್ಞಾನ, ಸಂಸ್ಕೃತಿ ಮೊದಲಾದ ಯೋಗ್ಯತೆಗಳಿಂದ ಕಿರಿಯರಾಗಿರುವವರಲ್ಲಿ ಉದಿಸುವ ಪ್ರೇಮವು ವಾತ್ಸಲ್ಯವೆನಿಸುತ್ತದೆ. ವಯಸ್ಸು, ವಿದ್ಯಾ, ಮೊದಲಾದುವುಗಳಿಂದ ಸಮಾನರಾದವರಲ್ಲಿ ಹುಟ್ಟುವ ಪ್ರೇಮವು ಸ್ನೇಹ. ಸಖ್ಯ, ಮೈತ್ರಿ, ಕೆಳೆತನ ಎನ್ನಿಸಿಕೊಳ್ಳುತ್ತದೆ. ದೀನರಲ್ಲಿಯೂ, ದುಃಖಿತರಲ್ಲಿಯೂ, ಆರ್ತರಲ್ಲಿಯೂ ಜನಿಸುವ ಪ್ರೇಮವು ದಯ, ಕರುಣ, ಅನುಕಂಪ, ಸಹಾನುಭೂತಿ .... ಎನಿಸುತ್ತದೆ. ಅರ್ಥಿಗಳಲ್ಲಿಯೂ, ಆಶ್ರಿತರಲ್ಲಿಯೂ, ಶರಣರಲ್ಲಿಯೂ ಹರಿಯುವ ಪ್ರೇಮವು ಅನುಗ್ರಹ, ಆಶೀರ್ವಾದ, ಕೃಪಾ ಇತ್ಯಾದಿಯಾಗಿದೆ. ವಿಷಯಗಳಲ್ಲಿರುವ ಪ್ರೇಮವೇ ಕಾಮವೂ, ಆಶೆಯೂ, ಆಸಕ್ತಿಯೂ, ಅನುರಕ್ತಿಯೂ ಆಗಿದೆ. ಅವಿವೇಕದಿಂದ ಮಾಡುವ ವಿಷಯಪ್ರೀತಿಯೇ ಮೋಹವೂ, ಅದರ ಅತಿರೇಕವೇ ವ್ಯಾಮೋಹವೂ ಆಗಿದೆ. ಸ್ತ್ರೀಪುರುಷರ ಪ್ರೇಮವೇ ರಾಗವೂ, ಅನುರಾಗವೂ, ಕಾಮವೂ, ಪ್ರಣಯವೂ ಆಗಿದೆ.

ವಯಸ್ಸು, ವಿದ್ಯಾ, ಗುಣ, ಶೀಲ, ತ್ಯಾಗ, ತಪಸ್ಸು, ದಾನ, ಧರ್ಮ, ಉಪಕಾರ ಮೊದಲಾದ ಯೋಗ್ಯತೆಗಳಲ್ಲಿ ಶ್ರೇಷ್ಠತೆಯುಳ್ಳವರು ಗೌರವ ಪ್ರೇಮಕ್ಕೆ ಅಥವಾ ಭಕ್ತಿಗೆ ಅರ್ಹರಾಗುತ್ತಾರೆ. ಆದ್ದರಿಂದ ಮಾತೃಭಕ್ತಿ,

ಪಿತೃಭಕ್ತಿ, ಭ್ರಾತೃಭಕ್ತಿ, ಪತಿಭಕ್ತಿ, ಸ್ವಾಮಿಭಕ್ತಿ, ಆಚಾರ್ಯಭಕ್ತಿ, ಗುರುಭಕ್ತಿ, ದೈವಭಕ್ತಿ, ಭಗವದ್ಭಕ್ತಿ ಮೊದಲಾದ ಭಕ್ತಿವಿಶೇಷಗಳು ಶಾಸ್ತ್ರೀಯವಾಗಿ ರೂಢಿಗೆ ಬಂದಿವೆ. ಹಾಗೆಯೇ ಸಮಷ್ಟಿರೂಪವೂ ಈಶ್ವರಾಂಶವಾಗಿ ಪೂಜ್ಯವಾದುದರಿಂದ ದೇಶಭಕ್ತಿ, ರಾಷ್ಟ್ರಭಕ್ತಿ, ರಾಜಭಕ್ತಿ ಮೊದಲಾದುವು ಪ್ರಸಿದ್ಧವಾಗಿವೆ ಇದು ಪ್ರಜಾಪ್ರಭುತ್ವದ ಯುಗವಾದ್ದರಿಂದ ರಾಜಭಕ್ತಿಯ ಸ್ಥಳದಲ್ಲಿ ಸಮಷ್ಟಿದೃಷ್ಟಿಯಿಂದ ಪ್ರಜಾಭಕ್ತಿಯನ್ನೂ ದೇಶಭಕ್ತಿಯೊಡನೆ ಸೇರಿಸಿಕೊಳ್ಳಬೇಕಾಗಿದೆ.

ಹೀಗೆ ಹಲವು ರೂಪಗಳಾದ ಭಕ್ತಿಯ ಒಂದೊಂದು ರೂಪದಲ್ಲಿಯೂ ಅಚಲವೂ, ಅನನ್ಯವೂ ಆದ ನಿಷ್ಠಾಪೂರ್ವಕ ಪ್ರೇಮವೇ ಇದೆ. ಇಲ್ಲಿ ನಮ್ಮ ವಿಚಾರಕ್ಕೆ ಬೇಕಾಗಿರುವುದು ಭಗವದ್ಭಕ್ತಿ ಅಥವಾ ಭಗವತ್ಪ್ರೇಮ.

ಪ್ರೇಮವೆಂದರೆ ಏನು? "**ಅನಿರ್ವಚನೀಯಂ ಪ್ರೇಮಸ್ವರೂಪಂ, ಮೂಕಾಸ್ವಾದನವತ್**" ಎಂದು ನಾರದರು ತಮ್ಮ ಭಕ್ತಿಸೂತ್ರದಲ್ಲಿ ಹೇಳಿರುವಂತೆ ಜೇನುತುಪ್ಪವನ್ನು ನೆಕ್ಕಿರುವ ಮೂಕನು ಅದರ ರುಚಿಯನ್ನು ಸವಿಯುದಿದ್ದರೂ ಹೇಗೆ ತನ್ನ ಅನುಭವವನ್ನು ಹೇಳಲಾರನೋ ಹಾಗೆ ಪ್ರೇಮಾಮೃತ ಮಹಿಮೆಯಿಂದಲೇ ನಾವು ಬದುಕಿದ್ದರೂ ಆ ಪ್ರೇಮದ ಸ್ವರೂಪವನ್ನು ವರ್ಣಿಸಲಾರೆವು. ಪ್ರೇಮವು ಅತ್ಯಂತ ಸೂಕ್ಷ್ಮವೂ, ಹಾರ್ದಿಕವೂ, ಪ್ರಚಂಡವೂ ಆದ ಶಕ್ತಿ. ಪ್ರೇಮದ ಇರುವಿಕೆಯನ್ನು ಸಿದ್ಧಮಾಡುವುದಕ್ಕೆ ಬೇರೆ ಪ್ರಮಾಣಗಳು ಬೇಕಿಲ್ಲ. ಅದು ನಮ್ಮ ಅನುಭವದಲ್ಲಿಯೇ (ನಮ್ಮ ಸ್ವರೂಪವಾಗಿಯೇ) ಇರುವುದರಿಂದ ಸ್ವತಃ ಪ್ರಮಾಣವಾದುದು.

ಪ್ರೇಮವು ಎರಡು ಬಗೆಯಾಗಿದೆ. ಒಂದು ಪ್ರಾಪಂಚಿಕವಾದ ಪ್ರೇಮ, ಇನ್ನೊಂದು ಪಾರಮಾರ್ಥಿಕದ ಪ್ರೇಮ. ಪ್ರಾಪಂಚಿಕವಾದುದೂ ಎರಡು ಬಗೆ. ಒಂದು ಸ್ವಾರ್ಥ ಪ್ರೇಮ, ಇನ್ನೊಂದು ಪರಾರ್ಥ ಪ್ರೇಮ. ಸ್ವಾರ್ಥಪರ ಪ್ರೇಮವೂ ಎರಡು ಬಗೆಯಾಗಿದೆ. ಧರ್ಮಾಧರ್ಮಗಳನ್ನು ಲಕ್ಷಿಸದೆ ಕೇವಲ ವಿಷಯಸುಖವನ್ನೇ ಮುಖ್ಯವಾಗಿ ಗಮನಿಸುವ ಲೌಕಿಕ ಸ್ವಾರ್ಥವು ಒಂದನೆಯದು; ಗೀತೆಯಲ್ಲಿ "**ಧರ್ಮಾವಿರುದ್ಧೋ ಕಾಮೋಸ್ಮಿ ಭೂತೇಷು ಭರತರ್ಷಭ।**" — ಪ್ರಾಣಿಗಳಲ್ಲಿ ಧರ್ಮಕ್ಕೆ ವಿರುದ್ಧವಲ್ಲದ ಕಾಮವೇ

ನಾನಾಗಿದ್ದೇನೆ — ಎಂಬ ಪರಮಾತ್ಮನು ಹೇಳಿರುವಂತೆ ಧರ್ಮಸಮ್ಮತವಾದ ಸ್ವಾರ್ಥಪ್ರೇಮವು ಎರಡನೆಯದು. ಅನನ್ಯವೂ, ನಿಷ್ಕಾಮವೂ, ನಿರತಿಶಯವೂ ಆದ ಭಗವತ್ಪ್ರೇಮವೇ ಪಾರಮಾರ್ಥಿಕವಾದ ಪ್ರೇಮ. ಸ್ವಾರ್ಥಪ್ರೇಮಕ್ಕಿಂತಲೂ ಪರಾರ್ಥಪ್ರೇಮವೂ, ಅದಕ್ಕಿಂತಲೂ ಪಾರಮಾರ್ಥಿಕ ಪ್ರೇಮವೂ ಪವಿತ್ರವೂ ಶ್ರೇಷ್ಠವೂ ಆಗಿವೆ.

ಜೀವನಿಗಿರುವ ಅನ್ನಮಯಾದಿ ಪಂಚಕೋಶಗಳಲ್ಲಿ ಪ್ರೇಮವು ಮೊದಲನೆಯದಾದ ಆನಂದಮಯ ಕೋಶದ ವೃತ್ತಿಯು ಅಥವಾ ಶಕ್ತಿಯು. ಜೀವನಿಗೆ ಅಥವಾ ಆತ್ಮನಿಗೆ ಅತ್ಯಂತ ಸಮೀಪವೂ ಸೂಕ್ಷ್ಮವೂ ಪ್ರಪ್ರಥಮವೂ ಆದ ಆವರಣವೇ ಆನಂದಮಯ ಕೋಶ. **"ತಸ್ಯ ಪ್ರಿಯಮೇವ ಶಿರಃ। ಮೋದೋ ದಕ್ಷಿಣಃ ಪಕ್ಷಃ। ಪ್ರಮೋದ ಉತ್ತರಃ ಪಕ್ಷಃ। ಆನಂದ ಆತ್ಮಾ।"** ಪ್ರಿಯ, ಮೋದ, ಪ್ರಮೋದಗಳೇ ಆನಂದಮಯ ಕೋಶದ ವೃತ್ತಿಗಳೆಂದು ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿದೆ. ಪ್ರಿಯವೆಂದರೆ ಪ್ರೇಮ. ಯಾವುದೊಂದು ವಿಷಯವು ನಮಗೆ ಇಷ್ಟವಾಗಿ ಬೇಕೆನಿಸುವುದೇ ಪ್ರೇಮ. ಬೇಕಾದ ವಸ್ತುವನ್ನು ನಾವು ಹೊಂದುವುದು ಅಥವಾ ಸೇರುವುದು ಸ್ವಾಭಾವಿಕವಾಗಿದೆ. ಇಷ್ಟವಸ್ತುವನ್ನು ಸೇರುವುದಕ್ಕೆ ಪ್ರೇಮವೇ ಪ್ರಬಲವಾದ ಸಾಧನ. ಸೇರುವುದು ಎಂಬುದಕ್ಕೇ ಸಂಸ್ಕೃತದಲ್ಲಿ 'ಯೋಗ' ಎನ್ನುತ್ತಾರೆ. ಆದ್ದರಿಂದ ಯೋಗಸಾಧನೆಗೆ ಪ್ರೇಮವೇ ಪ್ರಗೂಢವಾದ ಶಕ್ತಿಯಾಗಿದೆ. ಪ್ರೇಮವು ಸಹಜವೂ ಸುಲಭವೂ ಸರ್ವರಲ್ಲಿಯೂ ಸ್ವಭಾವಸಿದ್ಧವೂ ಆದ ಶಕ್ತಿ. ಜ್ಞಾತೃ ಸೋಪಾನ (subject) ದಲ್ಲಿರುವ ಆನಂದವು ತನಗೆ ಬೇಕಾದ ಜ್ಞೇಯ (object) ಸೋಪಾನಕ್ಕೆ ಇಳಿಯುವಾಗ ಆಗುವ ವೃತ್ತಿವಿಲಾಸವೇ ಪ್ರೇಮವೆನ್ನಬಹುದು. ನಿರ್ವಿಷಯಿಯಾದ ಆನಂದವೇ ವಿಷಯಿಯಾದಾಗ ಪ್ರೇಮರೂಪವಾಗುತ್ತದೆ. ಪ್ರೇಮವು ಸಾಪೇಕ್ಷ, ಅಂದರೆ ವಿಷಯವನ್ನು ಬಯಸುತ್ತದೆ. ಆ ವಿಷಯವು ಒಳಗಿನದಾದರೂ ಆಗಬಹುದು, ಹೊರಗಿನದಾದರೂ ಆಗಬಹುದು. ಬಹಳ ಒಳಗಿನದೆಂದರೆ ತಾನೇ; ಹೊರಗಿನದೆಂದರೆ ಬಾಹ್ಯ ಶಬ್ದಸ್ಪರ್ಶಾದಿಗಳು. ಆನಂದವು ಮಾತ್ರ ನಿರಪೇಕ್ಷ. ಕೇವಲವೂ ನಿರಪೇಕ್ಷವೂ ಆದ ಆನಂದವೇ ಸಾಪೇಕ್ಷವಾದೊಡನೆ ಪ್ರೇಮರೂಪವಾಗುತ್ತದೆ. ತಾನೇ ತಾನಾದ ಆನಂದವು ತನ್ನನ್ನು ತಾನು ಬಯಸಿದೊಡನೆ ಅಥವಾ ತನ್ನನ್ನು ತಾನು

ವಿಷಯೀಕರಿಸಿಕೊಂಡೊಡನೆ ಪ್ರೇಮಶಕ್ತಿಯಾಗುತ್ತದೆ. ಆಂಗ್ಲದಲ್ಲಿ "Self objectification of bliss is love" ಎನ್ನಬಹುದು. ಹೀಗೆ ಆನಂದದಿಂದಲೇ ಪ್ರೇಮವು ಉದಿಸಿರುವುದರಿಂದ, ಪ್ರೇಮವು ಸುಖಮಯವೂ, ಸುಖಾಪೇಕ್ಷಿಯೂ ಆಗಿದೆ. ಪ್ರೇಮವು ಅನಿರ್ವಚನೀಯವೆಂಬುದು ನಿಜವಾದರೂ ಸಾಧ್ಯವಾದಷ್ಟು ವಿಚಾರಮಾಡಬೇಕಾಗಿದೆ.

ಪ್ರೇಮದಲ್ಲಿ ಸುಖವಿರುವುದರಿಂದಲೇ ಪ್ರೇಮ ಮಾಡುತ್ತೇವೆ. ಪ್ರೇಮವು ತಾನೇ ಆನಂದಮಯವೆಂದೂ, ಆನಂದವೇ ತನ್ನ ಉಗಮಸ್ಥಾನವೆಂದೂ ತಿಳಿಯದಿರುವುದರಿಂದಲೇ, ತನಗೆ ಸುಖದ ಹಂಬಲವು ಹತ್ತಿದೆಯೆಂಬುದು ಅರಿತು ಆನಂದದಲ್ಲಿ ಲೀನವಾದರೆ ಮಾತ್ರ ಪ್ರೇಮಕ್ಕೆ ಸಾಫಲ್ಯವೂ ಸಂತೃಪ್ತಿಯೂ ಉಂಟಾಗುವುದು. ಹಾಗಲ್ಲದೇ ಪ್ರೇಮವು ತನ್ನೊಳಗೆ ತಾನು ನೋಡಿಕೊಳ್ಳದೆ. ಇಂದ್ರಿಯಗಳ ಮುಖದಿಂದ ಹೊರಗೆ ಹರಿದು, ವಿಷಯಗಳನ್ನು ಹಿಡಿದು. ಅವುಗಳಲ್ಲಿ ಸುಖವಿದೆಯೆಂದು ಭ್ರಮಿಸಿ ಅವುಗಳ ಭೋಗಕ್ಕಾಗಿ ಶ್ರಮಿಸುತ್ತದೆ. ಆದರೆ, ಪ್ರೇಮಕ್ಕೆ ಶಾಶ್ವತವಾದ ತೃಪ್ತಿಯನ್ನು ಕೊಡತಕ್ಕಂಥ ನಿಜವಾದ ಸುಖವು ವಿಷಯಗಳಲ್ಲಿಲ್ಲವಾದ್ದರಿಂದ ಹತಾಶವಾಗುತ್ತದೆ. ಆದರೂ ವಿವೇಚನಾ ಶಕ್ತಿಯೂ ವೈರಾಗ್ಯವೂ ಇಲ್ಲದಿರುವುದರಿಂದ ಪ್ರೇಮವು ತಾನು ಸುಖಪಡುವುದಕ್ಕಾಗಿ ಪುನಃ ಪುನಃ ವಿಷಯಗಳನ್ನೇ ಭೋಗಿಸಿ ಆಯಾಸಪಡುತ್ತದೆ. ಇಷ್ಟವಾದ ವಿಷಯಗಳನ್ನು ಭೋಗಿಸುವಾಗ ಇಂದ್ರಿಯಗಳಿಗಾಗುವ ಅನುಕೂಲ ಸಂವೇದನೆಯೇ ಸುಖವೆನಿಸುತ್ತದೆ. ಇದಕ್ಕೆ ವಿರೋಧಿಯಾದುದು ದುಃಖ.

ಯಾವುದೊಂದು ವಿಷಯವು ಎಲ್ಲರಿಗೂ ಇಷ್ಟವಾಗುವುದೆನ್ನುವುದಿಲ್ಲ. ಅವರವರ ಮನಸ್ಸು ಮೆಚ್ಚಿದುದೇ ಅವರವರಿಗೆ ಇಷ್ಟವಿಷಯವಾಗುವುದು. ಮನಸ್ಸೊಪ್ಪಿದ ವಿಷಯದಲ್ಲಿ ತುಂಬಿಕೊಳ್ಳುವುದು ಪ್ರೇಮದ ಸ್ವಭಾವ. ಪ್ರೇಮವು ತುಂಬಿದಲ್ಲಿ ಸುಖವು ಪ್ರತಿಬಿಂಬಿಸುವುದು ಸಹಜವಾಗಿದೆ. ತನಗೆ ಗುಣ ಕಂಡ ವಿಷಯವನ್ನು ಮನಸ್ಸು ಒಪ್ಪುವುದು; ಮನಸ್ಸು ಮೆಚ್ಚಿದಲ್ಲಿ ಗುಣವು ಕಾಣಿಸುವುದು. ಸ್ವೇಚ್ಛಾವಿಲಾಸಿಯಾದ ಮನಸ್ಸು ವ್ಯಕ್ತಕಾರಣವಿಲ್ಲದೆಯೂ ಒಲಿಯುವುದು ಹೆಚ್ಚು. ತನ್ನದು ಎನ್ನುವ ಅಭಿಮಾನವೂ ಮನಸ್ಸು ಒಲಿಯುವುದಕ್ಕೆ ಒಂದು ಕಾರಣ ಅಂತೂ, ಮನಸ್ಸು ಒಲಿದಲ್ಲಿ

ಪ್ರೇಮವು ತುಂಬಿಕೊಳ್ಳುವುದು. ಪ್ರೇಮವು ತನ್ನ ಸುಖಸ್ವರೂಪವನ್ನು ತಾನು ನೋಡಿಕೊಳ್ಳುವುದಕ್ಕೆ ಇಷ್ಟವಿಷಯ ಭೋಗವೇ ಕನ್ನಡಿಯಾಗಿದೆ.

ಸುಂದರವಾದ ಶಿಶುವನ್ನು ಅದರ ತಾಯಿಯು ಮುದ್ದುಮಾಡಿ ಪಡುವ ಆನಂದಕ್ಕೂ ಕುರೂಪಿಯಾದ ಮಗುವನ್ನು ಅದರ ತಾಯಿಯು ಮುದ್ದುಮಾಡಿ ಪಡುವ ಆನಂದಕ್ಕೂ ಯಾವ ವ್ಯತ್ಯಾಸವೂ ಇಲ್ಲ. ಸುರೂಪದಲ್ಲಿಯೇ ಆನಂದ ವಿದ್ದರೆ ಕುರೂಪದಲ್ಲಿ ದುಃಖಪಿರಬೇಕು. ಆದರೆ ಕುರೂಪಿ ಮಗುವನ್ನೂ ಅದರ ತಾಯಿಯು ಮುದ್ದಿಸಿ ಆನಂದಪಡಬೇಕಾದರೆ ಆಕೆಯ ಮುದ್ದೇ, ಅಂದರೆ ಪ್ರೇಮವೇ ಆನಂದಮಯವಾಗಿರಬೇಕು. ಎಲ್ಲರ ಪ್ರೇಮವನ್ನೂ ಪ್ರತಿಫಲಿಸಿ ಆನಂದದರ್ಶನ ಮಾಡಿಸುವುದಕ್ಕೆ ಸೌಂದರ್ಯವು ಜಗತ್ತಿನಲ್ಲಿ ನಿಮಿತ್ತ ಕಾರಣವೇ ಹೊರತು ಏಕಮಾತ್ರ ಮುಖ್ಯ ಕಾರಣವಲ್ಲ. ಮುಖ್ಯ ಕಾರಣವು ಹೊರಗಿಲ್ಲ; ನಮ್ಮೊಳಗೇ ಇದೆ. ಏಕೆಂದರೆ, ಮನಸ್ಸು ಪ್ರೇಮಿಸುವುದಕ್ಕೆ ತನ್ನದು ಎಂಬ ಅಭಿಮಾನವಷ್ಟೇ ಕಾರಣವಾಗಬಹುದು; ಆ ವಿಷಯದಲ್ಲಿರುವ ಗುಣವೇ ಕಾರಣವಾಗಬೇಕಾಗಿಲ್ಲ. ಪ್ರೇಮವು ತನ್ನನ್ನು ತಾನು ನೋಡಿ ಕೊಂಡು ಸುಖಿಸುವುದಕ್ಕೆ ತನ್ನ ಮಗುವೆಂಬ ವಿಷಯವು ಕನ್ನಡಿಯಂತೆ ಮಾತ್ರ. ಆತ್ಮಸೋಪಾನದಲ್ಲಿ(ಆತ್ಮನೇ ಆಗಿ)ರುವ ಅನಂತವು ತನ್ನನ್ನೇ ತಾನು ವಿಷಯ ಮಾಡಿಕೊಂಡು ಪ್ರೇಮವಾಗುವಂತೆ ಪ್ರೇಮವು ಮುಂದೆ ತನ್ನನ್ನೇ ತಾನು ವಿಷಯ ಮಾಡಿಕೊಂಡು " ನಾನು, ನನ್ನದು, ನನ್ನಲ್ಲಿ ........ " ಮೊದಲಾದ ಅಭಿಮಾನರೂಪವಾಗುತ್ತದೆ. ಆದ್ದರಿಂದ 'ನನ್ನದು' ಎಂದಾದ ವಿಷವೂ ಅಮೃತವಾಗಿ ತೋರುವುದಕ್ಕೆ ಆ ಪ್ರೇಮದ ಮಹಿಮೆಯೇ ಕಾರಣ.

ಕೆಲವರಿಗೆ ಸಿಹಿ ಪದಾರ್ಥವು ಪ್ರಿಯವಾಗಿ ಸುಖವನ್ನು ಕೊಟ್ಟರೆ, ಬೇರೆ ಯವರಿಗೆ ಕಹಿ ಹಾಗಲಕಾಯಿಯೇ ಪ್ರಿಯವಾಗಿ ಸುಖವನ್ನು ಕೊಡಬಹುದು. ಕೆಲವರಿಗೆ ಶೃಂಗಾರರಸವನ್ನು ಪ್ರಚೋದನೆ ಮಾಡುವ ರಾಗಭಾವಗಳು ಪ್ರಿಯ ವಾದರೆ, ಮತ್ತೆ ಕೆಲವರಿಗೆ ಶೋಕರಸವನ್ನು ಚಿಮ್ಮಿಸುವ ಕೀರ್ತನೆಗಳು ಪ್ರಿಯ ವಾಗಬಹುದು. ಭೋಗಿಗಳಿಗೆ ಮೃದುವಾದ ಪುಷ್ಪಶಯ್ಯೆಯು ಪ್ರಿಯವಾದರೆ, ವಿರಾಗಿಗಳಿಗೆ ಕಠಿಣವಾದ ಪಾಷಾಣಶಯ್ಯೆಯೇ ಪ್ರಿಯವಾಗಬಹುದು. ಅತ್ಯಂತ ಲಾವಣ್ಯಮಯಿಯಾದ ಸಾಮ್ರಾಜ್ಞಿಯು ಅತ್ಯಂತ ಕುರೂಪಿಯಾದ ಕುಲಹೀನ

ದರಿದ್ರ ದಾಸನನ್ನು ಮೆಚ್ಚಿ ಮುಚ್ಚುಮರೆಯಲ್ಲಿ ವಿಲಾಸಮಾಡುತ್ತಿರಬಹುದು; ಅಥವಾ ಇದಕ್ಕೆ ಪೂರ್ಣ ವಿರುದ್ಧ ಸಂದರ್ಭವಾದರೂ ಆಗಿ ಸಾಮ್ರಾಟನು ದಾಸಿಯಲ್ಲಿ ರಮಿಸುತ್ತಿರಬಹುದು. ಆದ್ದರಿಂದ ಪ್ರೇಮವಿಲಾಸದ ಸುಖಕ್ಕೆ ಅಭಿಮಾನವು ಕಾರಣವಾದಂತೆ ಮನಸ್ಸಿನ ಮೆಚ್ಚು (ಹುಚ್ಚು) ಕಾರಣವೇ ಹೊರತು ಹೊರಗಿರುವ ಪದಾರ್ಥಗಳ ಗುಣಗಳೇ ಕಾರಣವಲ್ಲ. ಮನಸ್ಸಿನ ಮೆಚ್ಚೇ ಅಭಿಮಾನವಾಗುತ್ತದೆ. ಬಹಳ ಮಟ್ಟಿಗೆ ವಿಷಯಗಳು ನಿಮಿತ್ತ ಮಾತ್ರ. ಮನಸ್ಸಿನ ಮೆಚ್ಚೆಂಬ ರಸಗನ್ನಡಿಯಲ್ಲಿ ಪ್ರೇಮವು ತನ್ನ ಮುಖವನ್ನು ತಾನು ನೋಡಿಕೊಂಡು ಆನಂದಪಡುತ್ತದೆ.

ನಮ್ಮ ಮುಖವೇ ಆದರೂ ನಮಗೇ ಕಾಣುವುದಿಲ್ಲ. ಮುಖವು ತನ್ನನ್ನು ತಾನು ನೋಡಿಕೊಳ್ಳುವುದಕ್ಕೆ ಒಂದು ಕನ್ನಡಿ ಬೇಕು. ಆ ಕನ್ನಡಿಯಲ್ಲಿ ಕಾಣುವುದು ತನ್ನ ಸೌಂದರ್ಯವೇ ಆಗಿದೆ. ಮುಖವು ತನ್ನ ಸೌಂದರ್ಯವನ್ನೇ ನೋಡಿಕೊಂಡು ಆನಂದದಿಂದ ಹಸನ್ಮುಖಿಯಾಗುತ್ತದೆ. ಹಾಗೆ ತನ್ನನ್ನು ತಾನು ನೋಡಿಕೊಳ್ಳಲಾರದೇ ಹೊರಹೊರಗೇ ಹರಿಯುತ್ತಿರುವ ಪ್ರೇಮಕ್ಕೆ ತನ್ನನ್ನು ತಾನು ನೋಡಿಕೊಳ್ಳಲು ಒಂದು ಕನ್ನಡಿ ಬೇಕಾಗುತ್ತದೆ. ಆ ಕನ್ನಡಿಯೇ ವಿಷಯೇಂದ್ರಿಯಗಳ ಸಂಯೋಗ ಅಥವಾ ಪ್ರೇಮವು ಇಂದ್ರಿಯಗಳೆಂಬ ಕಣ್ಣುಗಳಿಂದ ತನ್ನನ್ನು ತಾನು ನೋಡಿಕೊಳ್ಳಲು ವಿಷಯಾನುಭವವೇ ಕನ್ನಡಿ. ಆದ್ದರಿಂದ ವಿಷಯಭೋಗದರ್ಪಣದಲ್ಲಿ ಪ್ರತಿಫಲನವಾಗಿ ಕಾಣುತ್ತಿರುವ ಸುಖವು ಪ್ರೇಮದ ಸ್ವರೂಪವೇ ಆಗಿದೆ. ಆ ಪ್ರೇಮವಾದರೂ ಸುಖದ ರೂಪವೇ ಆಗಿದೆ. ವಿವೇಕಿಗಳಾದವರು ಕನ್ನಡಿಯಲ್ಲಿ ನೋಡಿಕೊಂಡು ಆನಂದಪಡುವುದಕ್ಕೆ ತಮ್ಮ ಚೆಲುವೇ ಅದರಲ್ಲಿ ಪ್ರತಿಬಿಂಬಿಸಿರುವುದೆಂಬ ತಿಳಿವಳಿಕೆಯೇ ಕಾರಣವಾಗುತ್ತದೆ. ಹಾಗಲ್ಲದೇ ಸುಂದರ ರೂಪವುಳ್ಳ ಒಬ್ಬ ಹುಚ್ಚನೇ ಶ್ರೀಮಂತಮಿತ್ರನ ಮನೆಗೆ ಹೋಗಿ ಗೋಡೆಯ ಅಗಲಕ್ಕೂ ಹಾಕಿರುವ ನಿಲುವುಗನ್ನಡಿಯಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಅದನ್ನು ಮತ್ತೊಬ್ಬನಾವನೋ ಮನುಷ್ಯನೆಂದು ತಿಳಿದು ಅವನ ಸೌಂದರ್ಯಕ್ಕಾಗಿ ಮತ್ಸರಪಡಬಹುದು ಅಥವಾ ಆಶೆಮಾಡಬಹುದು. ಎಷ್ಟು ಕಾಲ ಕನ್ನಡಿಯ ಎದುರಿಗೆ ನಿಂತು ಪ್ರತಿಬಿಂಬದ ಚೆಲುವನ್ನು ಅನ್ಯಪುರುಷನದೆಂದು ತಿಳಿದು ಆ ಹುಚ್ಚನು ಬಯಸಿ ಬಾಯಿ ಬಾಯಿ ಬಿಟ್ಟರೂ ಅದು ಅವನದಾಗುವುದಿಲ್ಲ. ಪುಣ್ಯವಶಾತ್ ಅವನಿಗೆ

ಹುಚ್ಚಳಿದು ಪ್ರತಿಫಲಿತ ಸೌಂದರ್ಯವು ತನ್ನದೇ ಎಂದು ತಿಳಿದಾಗ ಮಾತ್ರ ಅವನಿಗೆ ಆನಂದವೂ ಸಂತೃಪ್ತಿಯೂ ಉಂಟಾಗುವುದು.

ನಾಗರಿಕ ಸುಂದರ ಯುವತಿಯು, ಮೈಗೆ ಬಿಗಿಯಪ್ಪಿಕೊಳ್ಳುವಂತೆ ಹಾಕಿಕೊಂಡಿರುವ ಬಹಳ ತೆಳುವೂ ನವಿರೂ ಆದ 'ವಾಯಿಲ್' ವಸನದ ಮೂಲಕ ಕಾಣುವ ಅಂಗಪುಷ್ಟಿ, ಸೌಷ್ಠವಾದಿಗಳು (ವಸ್ತ್ರದ್ದಲ್ಲದೇ) ಒಳಗಿರುವ ಆಕೆಯ ಸುಂದರ ದೇಹಕ್ಕೇ ಹೇಗೆ ಸಂಬಂಧಪಟ್ಟವೋ ಹಾಗೆಯೇ ಆತ್ಮನಿಗೆ ಅತ್ಯಂತ ಸಮೀಪವೂ ಸೂಕ್ಷ್ಮವೂ ಆಗಿರುವ ಆನಂದಮಯ ಕೋಶದ ಮೂಲಕ ತೋರುವ ಆನಂದವೂ ಪ್ರೇಮವೂ ಒಳಗಿರುವ ಆತ್ಮನ ಸ್ವರೂಪವೇ ಆಗಿವೆ.

ಆನಂದಮಯ ಕೋಶದ ಪ್ರಿಯ, ಮೋದ, ಪ್ರಮೋದ ವೃತ್ತಿಗಳಲ್ಲಿ ಪ್ರಿಯಕ್ಕಿಂತಲೂ ಮೋದವೂ, ಮೋದಕ್ಕಿಂತಲೂ ಪ್ರಮೋದವೂ ಹೆಚ್ಚು ತೀವ್ರವೂ, ವಿಕಸಿತವೂ, ನಿಬಿಡವೂ, ಉತ್ಕಟವೂ ಆದ ವೃತ್ತಿಗಳು. ಏಕೆಂದರೆ, ಪ್ರಿಯದಲ್ಲಿ ಅವ್ಯಕ್ತವಾದ ಸುಖವಿದ್ದರೂ ಸುಖದ ನಿರೀಕ್ಷೆಯು ಮಾತ್ರ ಸ್ಪಷ್ಟವಾಗಿದೆ. ಯಾರಾದರೂ ತಾವೊಂದು ಸುಖವನ್ನು ಹೊಂದುವುದಕ್ಕಾಗಿಯೇ ಇನ್ನೊಂದು ವಿಷಯದಲ್ಲಾಗಲೀ ವ್ಯಕ್ತಿಯಲ್ಲಾಗಲೀ ಪ್ರೇಮವನ್ನು ಮಾಡುವುದು. ಸುಖವನ್ನು ಹೊಂದುವ ಭರವಸೆಯಿಲ್ಲದಿದ್ದರೆ ಅಥವಾ ದುಃಖವನ್ನೇ ಹೊಂದುವುದಾಗಿ ತೋರಿದರೆ ಯಾರೂ ಯಾರಲ್ಲಿಯೂ ಪ್ರೇಮಮಾಡುವುದಿಲ್ಲ. ಆದರೆ ಮೋದವು ಹಾಗಲ್ಲ. ಸಂತೋಷವೇ ಮೋದವಾಗಿದೆ. ಸುಖಕ್ಕಾಗಿ ನಾವೊಂದು ವಸ್ತುವನ್ನು ಪ್ರೇಮಮಾಡುತ್ತಿರಬಹುದು. ಆದರೆ ಎಷ್ಟು ಪ್ರಯತ್ನ ಮಾಡಿದರೂ ಅದು ನಮಗೆ ಲಭಿಸದೇ ಹೋಗಬಹುದು. ಅಂಥಾ ಸಂದರ್ಭಗಳಲ್ಲಿ ಆನಂದವು ಪ್ರಿಯರೂಪದಲ್ಲಿ ಮಾತ್ರ ವಿಲಾಸಮಾಡಿ ಅವ್ಯಕ್ತವಾಗಿ ಮೈಗರೆಯುತ್ತದೆ. ಪ್ರೇಮದ ವಸ್ತುವು ದೊರೆತು ಕೈವಶವಾದರೆ ಮನಸ್ಸಿನ ಹರಿದಾಟವು ನಿಂತು ಅದರ ತಿಳಿಯಾದ ವೃತ್ತಿಯಲ್ಲಿ ಆನಂದವು ಹೆಚ್ಚು ವ್ಯಕ್ತವಾಗಿ ಮೋದ, ಹರ್ಷ, ಅಥವಾ ತೋಷವೆನಿಸುತ್ತದೆ. ನಮಗೆ ಇಷ್ಟವಾದ ವಸ್ತುವು ಕೈಗೆ ಸಿಕ್ಕರೂ ಬಾಯಿಗೆ ದಕ್ಕದೇ ಹೋಗಬಹುದು. ಹಾಗಾದರೆ ಆಶಾಭಂಗವಾಗಿ ದುಃಖವೇ ಹೆಚ್ಚುತ್ತದೆ. ಆದ್ದರಿಂದ ವಿಷಯಸುಖದ ಈ ಹಂತದಲ್ಲಿ ಪ್ರಿಯವಸ್ತುವು ಲಭಿಸಿದ್ದರೂ ಭೋಗಕ್ಕೆ ದಕ್ಕದೇಹೋಗಬಹುದೆಂಬ

ಚಿಂತಾತಂಕಗಳಿರುತ್ತವೆ; ಅಥವಾ ದೊರೆತ ವಿಷಯವನ್ನು ಅನುಭವಿಸ ಬೇಕೆಂಬ ಕಾತರವಾದರೂ ಇರುತ್ತದೆ. ತರಂಗಿತ ಸರೋವರ ಸಲಿಲದಲ್ಲಿ ಪೂರ್ಣಚಂದ್ರನ ವಿಕಂಪಿತ ಪ್ರತಿಬಿಂಬವು ಹೇಗೋ ಹಾಗೆ ಮನಸ್ಸಿನ ಆವೃತ್ತಿ ಗಳ ಗೊಂದಲದಲ್ಲಿ ಆನಂದದ ಪೂರ್ಣ ಪ್ರತಿಫಲನವಾಗಲು ಶಕ್ಯವಿಲ್ಲ. ಆದರೆ, ಕೈಗೆ ಸಿಕ್ಕಿರುವ ಪ್ರಿಯ ವಿಷಯಾನುಭವದಲ್ಲಿ ಮನಸ್ಸು ಆತುರ-ಕಾತರತೆಗಳ ನ್ನೆಲ್ಲಾ ತೊರೆದು ಕ್ಷಣಿಕವಾಗಿಯಾದರೂ ಭೋಗದಲ್ಲಿ ತೃಪ್ತಿಯಿಂದ ಹಾಯಾ ಗಿಯೂ ತಿಳಿಯಾಗಿಯೂ ನೆಲೆಗೆ ನಿಂತಿರುವುದರಿಂದ ಆತ್ಮನ ಆನಂದರೂಪದ ಅಂಶವು ಹೆಚ್ಚು ಸ್ಪಷ್ಟವಾಗಿ ಮೂಡುತ್ತದೆ. ಇದೇ ಮೋದಕ್ಕಿಂತಲೂ ಹೆಚ್ಚು ತೀವ್ರವೂ ಆಂತರಿಕವೂ ಸೂಕ್ಷ್ಮವೂ ಆದ ಪ್ರಮೋದ; ಅಥವಾ ತೋಷ ಕ್ಕಿಂತಲೂ ಹೆಚ್ಚು ಉತ್ಕಟವಾದ ಸಂತೋಷ. ಇದೇ ವಿಷಯಭೋಗದಲ್ಲಿ ತಾತ್ಕಾಲಿಕವಾದ ಸುಖ-ಸಂತೃಪ್ತಿ

ಪ್ರಿಯ-ಮೋದ-ಪ್ರಮೋದಗಳು ಆನಂದಮಯ ಕೋಶದ ವೃತ್ತಿಗಳಾ ದರೂ ಮಾನಸಿಕ ಭಾವಗಳು; ಅಥವಾ ವಿಷಯಸಂಬಂಧ ನಿಮಿತ್ತದಿಂದ ಆನಂದವೇ ಮನೋಮುಖದಿಂದ ಅನುಭೂತಿಗೆ ಬರುವ ತಾರತಮ್ಯ ಭಾವಗಳು ಪ್ರಿಯ, ಮೋದ, ಪ್ರಮೋದಗಳು. ಆದರೆ ವಿಷಯೇಂದ್ರಿಯ ಸಂಬಂಧದಿಂದುಂ ಟಾಗುವ ಇಂದ್ರಿಯಸುಖವು ಇಂದ್ರಿಯಪ್ರಧಾನವಾದುದು. ವಿಷಯ ಭೋಗದ ವ್ಯವಹಾರದಲ್ಲಿ ಪ್ರಿಯ, ಮೋದ ಪ್ರಮೋದ ರೂಪ ಮನೋವೃತ್ತಿಗಳ ಜೊತೆಗೆ ವಿಷಯಸುಖಗಳನ್ನೂ ಅನುಭವಿಸುತ್ತೇವೆ. ಹೇಗೆಂದರೆ, ನಮ್ಮ ಮನೆಯಲ್ಲಿ ಸ್ವಂತವಾದ ರೇಡಿಯೋ ಯಂತ್ರವನ್ನಿಟ್ಟುಕೊಂಡು ಸ್ವತಂತ್ರವಾಗಿ ಅದರ ಮೂಲಕ ನಿತ್ಯವೂ ಸಕಲ ರಾಷ್ಟ್ರಗಳ ಸಮಾಚಾರಗಳನ್ನೂ ಸಂಗೀತ ಮೊದ ಲಾದುವುಗಳನ್ನೂ ಕೇಳುವುದು ನಮಗೆ ಅತ್ಯಂತ ಇಷ್ಟಕರವಾದುದೆಂದು ಇಟ್ಟು ಕೊಳ್ಳೋಣ. ಹಾಗೆ ಶ್ರವಣಸುಖವನ್ನು ಕೊಡುವ ರೇಡಿಯೋ ಯಂತ್ರ ವನ್ನು ನಮಗೆ ಪ್ರಿಯವಾಗಿ ಭಾವಿಸುವುದರಲ್ಲಿಯೇ ನಮಗೆಷ್ಟೋ ಅವ್ಯಕ್ತವೂ ಅಸ್ಪಷ್ಟವೂ ಆಂತರಿಕವೂ ಆದ ಆನಂದವಾಗುತ್ತದೆ. ಆದ್ದರಿಂದಲೇ ನಾವದನ್ನು ಪ್ರೀತಿಸುವುದು. ಆದರೆ ಪ್ರೇಮವು ರೇಡಿಯೋ ಸುಖದ ಪ್ರತ್ಯಕ್ಷಾನುಭವ ವನ್ನೇ ದೃಷ್ಟಿಯಲ್ಲಿಟ್ಟುಕೊಂಡಿರುವುದರಿಂದ ಅದರ ಕಲ್ಪನಾಮಾತ್ರದಿಂದ ತೃಪ್ತ ವಾಗುವುದಿಲ್ಲ. ಆದ್ದರಿಂದ ಅದನ್ನು ಹೊಂದಬೇಕೆಂದು ಎರಡುಮೂರು ವರ್ಷ

ಗಳು ಶ್ರಮಪಟ್ಟು ಹಣವನ್ನು ಉಳಿಸಿ ಮುನ್ನೂರು ನಾಲ್ಕುನೂರು ರೂಪಾಯಿಗಳನ್ನು ಕೂಡಿಸಿಕೊಂಡು, ಅಂತೂ ರೇಡಿಯೋ ಕೊಳ್ಳುತ್ತೇವೆ. ಅದನ್ನು ಪಡೆಯುವ ಪ್ರಯತ್ನದ ಎರಡು ಮೂರು ವರ್ಷಗಳ ತಪಸ್ಸಿನ ಕಾಲದಲ್ಲಿ ರೇಡಿಯೋ ಸಂಬಂಧವಾಗಿ ನಮ್ಮಲ್ಲಿ ಪ್ರಿಯವಾದ ವೃತ್ತಿಯು ಮಾತ್ರ ಇತ್ತು. ನಾವು ಬಯಸುವ ಯಂತ್ರವನ್ನು ಇನ್ನೂ ಕಣ್ಣಲ್ಲಿ ಕಂಡಿಲ್ಲ, ಅದನ್ನು ಕೊಳ್ಳುವಷ್ಟು ಹಣವು ಉಳಿಯುವುದೋ ಇಲ್ಲವೋ ಎಂಬ ನಂಬಿಕೆಯೂ ಇಲ್ಲ. ಸ್ವಲ್ಪ ಸ್ವಲ್ಪವಾಗಿ ಹಣವನ್ನು ಉಳಿಸಿದರೂ ಅನಿವಾರ್ಯವಾದ ಮಿಕ್ಕ ವ್ಯವಹಾರಗಳಿಗಾಗಿ ಎಷ್ಟು ತೊಂದರೆಯಾಗುವುದೋ ಎಂಬ ಸಂಕಟ. ಎಷ್ಟು ಕಷ್ಟಪಟ್ಟರೂ ಕೊನೆಗೂ ಅಷ್ಟು ಹಣವು ಕೂಡುವುದೋ ಇಲ್ಲವೋ ಎಂಬ ಸಂದೇಹ. ಅದನ್ನು ಹೊಂದಲೇಬೇಕೆಂಬ ಇಚ್ಛೆಯು ಪ್ರಬಲವಾಗಿ ಒಂದು ವೇಳೆ ಸಾಲ ಮಾಡಿಕೊಂಡರೂ ಸಾಲ ತೀರಿಸುವುದು ಕಷ್ಟವಾಗುವುದೆಂಬ ಕಳವಳ. ಹೀಗೆ ಹಲವು ಬಗೆಯ ಮನಸ್ಸಿನ ಹೊಯಿದಾಟದಲ್ಲಿ ಆನಂದದ ಅತ್ಯಲ್ಪವಾದ ಅಂಶವು ಮಾತ್ರ ರೇಡಿಯೋ ಸುಖವನ್ನು ಹೊಂದಬೇಕೆಂಬ ಪ್ರಿಯವೃತ್ತಿಯ ಮೂಲಕ ಹೊಳಿಸಬಲ್ಲದು. ಆದರೆ ಪುಣ್ಯವಶದಿಂದ ಕೊಳ್ಳುವುದು ಸಾಧ್ಯವಾಗಿ ರೇಡಿಯೋ ಯಂತ್ರವನ್ನು ತರಿಸಿಬಿಟ್ಟರೆ ನಮಗೆ ವಾಸ್ತವವಾದ (ಮೋದನೇ) ಹರ್ಷವೇ ಆಗುವುದು. ಶ್ರೀಮಂತರಿಗಾದರೂ ಇಷ್ಟವಸ್ತು ಪ್ರಾಪ್ತಿಯಾಗುವವರೆಗೂ ಅದು ಆಗದಿರುವ ಕೊರತೆಯೂ, ಆಗಬೇಕೆಂಬ ಆತುರ-ಕಾತರ ಭಾವಗಳೂ ಇದ್ದೇ ಇರುವುದರಿಂದ ಪ್ರಾಪ್ತವಾದಮೇಲಿನ ಮೋದಕ್ಕೂ ಆಗುವವರೆಗಿನ ಪ್ರಯತ್ನದ ಪ್ರಿಯಭಾವಕ್ಕೂ ಅನುಭವಿಸುವಾಗ ತೋರುವ ಪ್ರಮೋದಕ್ಕೂ ಆನಂದಾಭಿವ್ಯಕ್ತತೆಯಲ್ಲಿ ತಾರತಮ್ಯವು ಇದ್ದೇ ಇದೆ. ಕೈಗೆ ರೇಡಿಯೋ ಬಂದರೂ ಅದಕ್ಕೆ ಬೇಕಾದ ವಿದ್ಯುತ್ಸಂಬಂಧ ಕಲ್ಪನೆಯಿಂದ ಅದನ್ನು ಇನ್ನೂ ಕಾರ್ಯಗತ ಮಾಡಿಲ್ಲವೆಂಬ ಕೊರತೆಯು ಇದ್ದೇ ಇರುತ್ತದೆ; ಅದನ್ನು ಕೊಂಡಿರುವ ಉದ್ದೇಶವು ಇನ್ನೂ ಸಫಲವಾಗಿಲ್ಲವಾದ್ದರಿಂದ ಆನಂದವು ಪೂರ್ಣವಾಗಿ ವ್ಯಕ್ತವಾಗುವುದಕ್ಕೆ ಸಾಧ್ಯವಿರುವುದಿಲ್ಲ. ವಿದ್ಯುತ್ತಿನ ಸಂಬಂಧವಾದ ವ್ಯವಸ್ಥೆಯೂ ಮುಗಿದು ನಾವು ರೇಡಿಯೋ ಮೂಲಕ ಬೇಕುಬೇಕಾದ ಸ್ಥಳಗಳಿಂದ ಸಮಾಚಾರಗಳನ್ನೂ ಸಂಗೀತಗಳನ್ನೂ ಕೇಳುವುದಕ್ಕೆ ತೊಡಗಿದೊಡನೆ ಕೃತಕೃತ್ಯ ಭಾವವನ್ನು ಹೊಂದಿದ ಮನಸ್ಸಿನಲ್ಲಿ ಆನಂದವು ವಿಷಯಸಂಬಂಧ

ವಾಗಿ ಎಷ್ಟು ವ್ಯಕ್ತವಾಗಬಹುದೋ ಅಷ್ಟೂ ಪೂರ್ಣ ವ್ಯಕ್ತವಾಗಿ ಪ್ರಮೋದ ವೆನಿಸುತ್ತದೆ.

ರಸಪತ್ತಾದ ಜಿಲೇಬಿಯನ್ನು ತಿನ್ನಬೇಕೆಂದು ಬಹು ದಿನಗಳಿಂದ ಬಯಸು ವವನಲ್ಲಿ ಆನಂದವು, ಅದರ ಸಂಬಂಧವಾದ ಪ್ರಿಯವೃತ್ತಿಯಿಂದಲೂ ಅವನು ಶ್ರಮಪಟ್ಟು ಪಾಕಮಾಡಿಸಿದಾಗ ಅವನಲ್ಲಿ ಮೋದವೃತ್ತಿಯಿಂದಲೂ, ಅವನು ಜಿಲೇಬಿಯನ್ನು ತಿನ್ನುತ್ತಿರುವಾಗ ಅವನ ತೃಪ್ತಮನಸ್ಸಿನಲ್ಲಿ ಪ್ರಮೋದವೃತ್ತಿ ಯಿಂದಲೂ ವ್ಯಕ್ತವಾಗುತ್ತದೆ. ರೇಡಿಯೋ ಶ್ರವಣ ಸಂಬಂಧವಾದ ಪ್ರಿಯ, ಮೋದ, ಪ್ರಮೋದ ವೃತ್ತಿಗಳಿಗೂ, ಭಕ್ಷ್ಯಭೋಜನ ಸಂಬಂಧವಾದ ಪ್ರಿಯ, ಮೋದ, ಪ್ರಮೋದ ವೃತ್ತಿಗಳಿಗೂ ಮತ್ತಾವುದೇ ವಿಷಯಭೋಗ ಸಂಬಂಧ ವಾದ ಆ ವೃತ್ತಿಗಳಿಗೂ ಪರಸ್ಪರ ಭೇದವಿಲ್ಲ. ಆದರೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಗೂ, ಶ್ರೋತ್ರಾದಿ ಇಂದ್ರಿಯಗಳಿಗೂ ಪರಸ್ಪರ ಸಂಯೋಗ ದಿಂದಾಗುವ ಭಿನ್ನಭಿನ್ನ ಸಂವೇದನಾತ್ಮಕವಾದ ಸುಖಗಳಲ್ಲಿ ಅನ್ಯೋನ್ಯ ಭೇದ ವಿದ್ದೇ ಇದೆ. ಗಾನದಿಂದಾಗುವ ಶ್ರೋತ್ರೇಂದ್ರಿಯ ಸಂವೇದನೆಗೂ ಅದರ ಸುಖಕ್ಕೂ, ರಸಾಸ್ವಾದನೆಯಿಂದಾಗುವ ರಸನೇಂದ್ರಿಯ ಸಂವೇದನೆಗೂ ಅದರ ಸುಖಕ್ಕೂ, ಹಾಗೆಯೇ ಮಿಕ್ಕ ವಿಷಯೇಂದ್ರಿಯಗಳ ಸಂಬಂಧವಾದ ಸಂವೇ ದನೆಗಳಿಗೂ ಆಯಾ ಸುಖಗಳಿಗೂ ಒಂದಕ್ಕೊಂದಕ್ಕೆ ಭೇದವಿದ್ದೇ ಇದೆ. ಎಲ್ಲಾ ಸುಖಗಳೂ ಒಂದೇ ಆಗಿದ್ದರೆ ಮಿಕ್ಕ ಇಂದ್ರಿಯಗಳ ಸುಖಗಳನ್ನು ಬಯಸದೆ, ಎಲ್ಲರೂ ಯಾವುದಾದರೊಂದೇ ಇಂದ್ರಿಯಸುಖದಿಂದಲೇ ತೃಪ್ತರಾಗಬಹು ದಾಗಿತ್ತು. ಆದರೆ ಯಾರ ಅನುಭವವೂ ಹಾಗಿಲ್ಲ. ಬೇರೆ ಬೇರೆ ಸುಖಗಳ ಸಾರವೂ ಮೂಲವೂ ಆದ ಆನಂದವು ಒಂದೇ ಆದರೂ ಬೇರೆ ಬೇರೆ ಇಂದ್ರಿಯ ಗಳ ಬೇರೆ ಬೇರೆ ಸಂವೇದನೆಗಳೆನಿಸುವ ಸುಖಗಳೂ ಬೇರೆ ಬೇರೆಯೇ ಇವೆ. ಇದನ್ನು ಒಪ್ಪುವುದು ಸ್ವಲ್ಪ ಕಠಿಣವಾಗಿ ಕಾಣಬಹುದು; ಆದರೆ ಅದು ಅಷ್ಟೂ ಸುಲಭವೂ ಸತ್ಯವೂ ಇದೆ. ಏಕೆಂದರೆ ಸ್ಪರ್ಶಸುಖವು ಗಾನಸುಖವಾಗಲಾರದು. ಇಂಪಾದ ಕಂಠವುಳ್ಳ ಗಾನಕಲಾವಿಶಾರದರೂ ಗಾನಸುಖವೊಂದರಿಂದಲೇ ತೃಪ್ತ ರಾಗಿರದೇ ಮಿಕ್ಕ ವಿಷಯಸುಖಗಳಿಗಾಗಿ ಎಳೆಸುವುದೂ ಪ್ರಸಿದ್ಧವೇ ಇದೆ.

ಮನಸ್ಸು ಸೇರದೇ ಯಾವ ಸುಖಾನುಭವವೂ ತೋರುವುದಿಲ್ಲವಾದರೂ, ಕೆಲವು ಮನಃಪ್ರಧಾನವಾಗಿಯೂ ಇವೆ. ಪ್ರಿಯ, ಮೋದ, ಪ್ರಮೋದಗಳೇ.

ಮನಃಪ್ರಧಾನವಾದವುಗಳು. ಏಕೆಂದರೆ ಇಂದ್ರಿಯಸುಖಗಳ ಸಂಬಂಧವಾಗಿಯೇ ಅಲ್ಲದೆ, ಪ್ರಿಯ ಮೋದ ಪ್ರಮೋದಗಳು ಯಾವ ವಿಷಯಸಂಬಂಧವಾಗಿ ಯಾದರೂ ತೋರಬಹುದು. ರಾಜ್ಯಾಧಿಕಾರದ ಲಾಲಸೆಯುಳ್ಳವನಿಗೆ ಸರ್ವಾಧಿಕಾರದ ಪ್ರೇಮವಿರಬಹುದು. ಅದು ಅವನಿಗೆ ವಶವಾದರೆ ಮೋದವುಂಟಾಗುತ್ತದೆ. ಅವನು ನಿರಂಕುಶವಾಗಿ ಸರ್ವಾಧಿಕಾರವನ್ನೇ ರಾಷ್ಟ್ರದಲ್ಲಿ ನಡೆಸುತ್ತಿರುವಾಗ ಅವನಿಗೆ ಪ್ರಮೋದವೇ ಆಗುವುದು. ಸರ್ವಾಧಿಕಾರ ಪ್ರಯೋಗದ ಪ್ರಮೋದವು ಇಂದ್ರಿಯಸುಖವೇನಲ್ಲ, ಅದು ಕಾಲ್ಪನಿಕ ಸುಖವು.

ರಾಜನಿಗೆ ರಾಜ್ಯಲಾಭವು ಎಷ್ಟು ಪ್ರಿಯವೋ ಭಿಕ್ಷುಕನಿಗೆ ಭಿಕ್ಷಾಲಾಭವು ಅಷ್ಟೇ ಪ್ರಿಯ. ಪರಾಜಿತನಾದ ರಾಜನಿಗೆ ರಾಜ್ಯಲಾಭವಾದರೆ ಆಗುವ ಮೋದವೇ ಕ್ಷೀಣಪ್ರಾಣನಾದ ಭಿಕ್ಷುಕನಿಗೆ ಭಿಕ್ಷಾಲಾಭದಿಂದಾಗುತ್ತದೆ. ರಾಜ್ಯ ಸಂಪತ್ತನ್ನು ಸಮೃದ್ಧಿಯಾಗಿ ಭೋಗಿಸುವಾಗ ರಾಜನಿಗಾಗುವ ಪ್ರಮೋದವೇ ಭಿಕ್ಷಾನ್ನವನ್ನು ಸ್ವಚ್ಛಂದವಾಗಿ ಭುಜಿಸುವಾಗ ಭಿಕ್ಷುಕನಿಗಾಗುತ್ತದೆ. ಏಕೆಂದರೆ, ಇಂದ್ರಿಯಸುಖದ ರೂಪದಿಂದಾಗಲೀ ಪ್ರಿಯ ಮೋದ ಪ್ರಮೋದ ವೃತ್ತಿಗಳಿಂದಾಗಲೀ ಆನಂದವು ಸ್ಥೂಲ, ಸೂಕ್ಷ್ಮ, ಸೂಕ್ಷ್ಮತರ, ಸೂಕ್ಷ್ಮತಮವಾಗಿ ತಾರತಮ್ಯಭಾವಗಳಿಂದ ಪ್ರತೀತಿಯಾಗುವುದಕ್ಕೆ ಭಿನ್ನ ಭಿನ್ನ ಮನಸ್ಥಿತಿಯೇ ಮುಖ್ಯ ಕಾರಣವೂ ಬಾಹ್ಯಪರಿಸ್ಥಿತಿಯು ನಿಮಿತ್ತಕಾರಣವೂ ಆಗಿವೆ. ಆದ್ದರಿಂದಲೇ ಭರ್ತೃಹರಿ ಮಹರ್ಷಿಯು,

**ವಯಮಿಹ ಪರಿತುಷ್ಟಾ ವಲ್ಕಲೈಸ್ತ್ವಂ ಚ ಲಕ್ಷ್ಮ್ಯಾ ।**
**ಸಮ ಇಹ ಪರಿತೋಷೋ ನಿರ್ವಿಶೇಷೋ ವಿಶೇಷಃ ॥**

“ನೀವು ಐಶ್ವರ್ಯದಿಂದ ಸಂತುಷ್ಟರಾಗಿದ್ದರೆ ನಾವು ಕೇವಲ ನಾರುಬಟ್ಟೆಗಳಿಂದಲೇ ಸಂತೃಪ್ತರಾಗಿದ್ದೇವೆ ಸಂತುಷ್ಟಿಯೆನ್ನುವುದು ನಮ್ಮಿಬ್ಬರಿಗೂ ಸಮಾನವಾದ್ದರಿಂದ ವಿಶೇಷವೇನೂ ಇಲ್ಲ” ಎಂದು ಹೇಳಿದ್ದಾನೆ. ಸರ್ವೇಂದ್ರಿಯಗಳ ಕೇಂದ್ರವೇ ಮನಸ್ಸಾಗಿರುವಂತೆ ಸರ್ವಸುಖಗಳ ಕೇಂದ್ರವೂ ಮನಸ್ಸೇ ಆಗಿದೆ. ಕನಸಿನಲ್ಲಿಯೂ ನೆನಸಿನಲ್ಲಿಯೂ ಮನಸ್ಸೇ ಭೋಕ್ತೃ–ಭೋಗ್ಯ–ಭೋಗಗಳೆಂಬ ತ್ರಿಪುಟಿಗಳಾಗಿ ತನ್ನಲ್ಲಿಯೇ ತಾನು ರಮಿಸಿ ಸುಖಿಸುತ್ತದೆ. ಯಾವ ಸುಖವೇ ಆದರೂ ಪ್ರೇಮರೂಪವಾದ ಆನಂದದ ಅಂಶವಾದ್ದರಿಂದ

ಅದು ಬೇಕೆಂಬ ಪ್ರೇಮವನ್ನು ಹುಟ್ಟಿಸುತ್ತದೆ. ಪ್ರೇಮವೂ ಸುಖವೂ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ ಇವೆ. ಪ್ರೇಮವಿದ್ದಲ್ಲಿ ಸುಖವೂ ಸುಖವಿದ್ದಲ್ಲಿ ಪ್ರೇಮವೂ ತಪ್ಪದೇ ಎಡೆಬಿಡದೇ ಇದೆ.

ಆನಂದವೇ ಪ್ರೇಮವಾಗಿರುವುದರಿಂದಲೂ ಪ್ರೇಮವೇ ಸುಖರೂಪವಾಗಿ ಭಕ್ತಿಯೋಗವೆಂಬ ಕಲ್ಪದ್ರುಮಕ್ಕೆ ಬೀಜವೂ ಫಲವೂ ಆಗಿರುವುದರಿಂದಲೂ, ಸುಸತ್ವಪೂರ್ಣವಾದ ಸುಖಾನಂದಗಳ ವಿಚಾರವನ್ನು ಇನ್ನಷ್ಟು ವಿಶದವಾಗಿ ವಿಮರ್ಶೆ ಮಾಡೋಣ. ಇಂಥಾ ವಿಚಾರಕ್ಕೆ ಶಾಸ್ತ್ರದಲ್ಲಿ "ಮೀಮಾಂಸಾ" ಎನ್ನುತ್ತಾರೆ. ಎಲ್ಲಾ ವಿಚಾರವೂ ಮೀಮಾಂಸೆಯಾಗಲಾರದು. ಪವಿತ್ರವಾದೊಂದು ವಿಷಯವನ್ನು ಅದಕ್ಕೆ ತಕ್ಕ ಗೌರವಾದರಗಳಿಂದ ಚರ್ಚಿಸುವ ಪೂಜನೀಯ ವಿಚಾರವೇ ಮೀಮಾಂಸೆ. ಆನಂದ ಮೀಮಾಂಸೆಯೆಂದರೆ ಪವಿತ್ರವಾದ ಆನಂದದ ವಿಚಾರ. ಧರ್ಮಮೀಮಾಂಸವೆಂದೂ ಬ್ರಹ್ಮಮೀಮಾಂಸವೆಂದೂ ಪೂರ್ವೋತ್ತರ ಭಾಗಗಳಿಂದ ಮೀಮಾಂಸಾ ಶಾಸ್ತ್ರವು ಪ್ರಸಿದ್ಧವಾಗಿರುವಂತೆ ಆನಂದಮೀಮಾಂಸೆಯೂ ಉಪನಿಷತ್ತಿನಿಂದ ಪ್ರಸಿದ್ಧವಾಗಿದೆ.

ಹಿಂದೆ ವಿಚಾರಮಾಡಿರುವಂತೆ ಸುಖ, ಮೋದ, ಪ್ರಮೋದ, ಆನಂದ ಎಂಬ ಪರ್ಯಾಯ ಶಬ್ದಗಳು ಹೆಚ್ಚುಕಡಿಮೆ ಒಂದೇ ಅರ್ಥವನ್ನು ಬೋಧಿಸತಕ್ಕವುಗಳಾದರೂ ಅನುಭವದಲ್ಲಿ ಅವುಗಳಿಗೆ ಪರಸ್ಪರವಾಗಿರುವ ಅಂತರವನ್ನು ನೋಡಿದ್ದೇವೆ. ಈ ಅಂತರವು ಘಂಟೆಯ ಶಬ್ದಕ್ಕೂ, ಅದರ ಧ್ವನಿಗೂ, ಅದರ ಸ್ವರಕ್ಕೂ, ಅದರ ನಾದಕ್ಕೂ ಇರುವ ಪರಸ್ಪರ ವ್ಯತ್ಯಾಸದಂತೆಯೇ ಇದೆ. ಘಂಟೆಯನ್ನು ಬಾರಿಸುತ್ತಿರುವಾಗ ಕೇಳುವುದು ಅದರ ಶಬ್ದವಾದರೂ, ಬಾರಿಸುವುದನ್ನು ಬಿಟ್ಟ ಮೇಲೂ ತರಂಗತರಂಗವಾಗಿ ಸೂಕ್ಷ್ಮವಾಗಿಯೂ ಸೂಕ್ಷ್ಮತರವಾಗಿಯೂ ಕೇಳುವುದೇ ಅದರ ಮಧುರಧ್ವನಿಯೂ ಮಂಜುಳಸ್ವರವೂ ಆಗಿವೆ. ಆ ಸೂಕ್ಷ್ಮತರವಾದ ಸ್ವರದ ಕೊನೆಯಲ್ಲಿ ಸೂಕ್ಷ್ಮತಮವಾಗಿಯೂ, ಏಕಾಕಾರವಾಗಿಯೂ, ಸಾರಸುಖವಾಗಿಯೂ ಲಯಿಸುತ್ತಿರುವುದೇ ನಾದವಾಗಿದೆ. ಹೀಗೆಯೇ ಪ್ರಿಯವಿಷಯಗಳನ್ನು ಗ್ರಹಿಸುತ್ತಿರುವಾಗ ಉಂಟಾಗುವ ಇಂದ್ರಿಯಸಂವೇದವೆಯೇ ಸುಖವಾಗಿಯೂ, ಅದನ್ನು ಮನಸ್ಸಿನಿಂದ ಸವಿಯುವ ಸಂತೋಷದ ತಾರತಮ್ಯವೇ ಮೋದ ಪ್ರಮೋದಗಳಾಗಿಯೂ, ಸುಖ, ಮೋದ,

ಪ್ರಮೋದಗಳ ಸಾರವೆಂಬಂತೆ ಅತ್ಯಂತ ಸೂಕ್ಷ್ಮವೂ ಆಂತರಿಕವೂ ಅದ ಅವರ್ಣನೀಯ ಉಲ್ಲಾಸವೇ ಆನಂದವೂ ಆಗಿದೆ. ಸುಖವು ಸ್ಥೂಲವೂ, ಇಂದ್ರಿಯ ಪ್ರಧಾನವೂ ಹರ್ಷ, ಮೋದ, ಪ್ರಮೋದಾದಿಗಳು ಸೂಕ್ಷ್ಮ, ಸೂಕ್ಷ್ಮತರಗಳೂ ಮನಃಪ್ರಧಾನಗಳೂ, ಆನಂದವು ಕಾರಣವೂ ಹೃದಯಪ್ರಧಾನವೂ ಆಗಿವೆ. ಅಂತಃಕರಣದಲ್ಲಿ ಮನಸ್ಸಿಗಿಂತಲೂ ಹೃದಯವು ಅಥವಾ ಬುದ್ಧಿಯು ಶುದ್ಧವಾಗಿರುವಂತೆ ಮೋದಾದಿಗಳಿಗಿಂತಲೂ ಆನಂದವು ಶುದ್ಧವೂ ನಿರುಪಾಧಿಕವೂ ಆಗಿವೆ.

ಸುಖಾದಿಗಳ ತಾರತಮ್ಯ ಭಾವಗಳನ್ನು ವೈಖರಿ ಮೊದಲಾದ ಶಬ್ದಬ್ರಹ್ಮದ ಭೇದಗಳಿಗೆ ಹೋಲಿಸಬಹುದು. ಸುಖವು ವೈಖರೀ ವಾಣಿಯಾದರೆ ಮೋದವು ಮಧ್ಯಮಾ, ಪ್ರಮೋದವು ಪಶ್ಯಂತಿ, ಆನಂದವೇ ಪರಾವಾಣಿ.

**ವೈಖರೀ ಶಬ್ದನಿಷ್ಪತ್ತಿಃ ಮಧ್ಯಮಾ ಶ್ರುತಿಗೋಚರಾ ।**
**ದ್ಯೋತಿತಾರ್ಥಾತು ಪಶ್ಯಂತಿ ಸೂಕ್ಷ್ಮವಾಗನಪಾಯಿನೀ ॥**

ಎಂಬ ಶ್ರುತಿಯಂತೆ ನಾಶರಹಿತವೂ ಅವ್ಯಕ್ತವೂ ಆದ ಪರಾಶಕ್ತಿಯು ತೇಜೋರೂಪಿನಲ್ಲಿ ವ್ಯಕ್ತವಾದ ಅರ್ಥವುಳ್ಳ ಪಶ್ಯಂತೀ ಸ್ಥಿತಿಯನ್ನು ಹೊಂದಿ, ಅನಂತರ ಮತಿಗೋಚರವಾದ ನಮ್ಮ ಒಳಗಿನ ಕಲ್ಪನಾರೂಪ ಮಧ್ಯಮಾ ಸ್ಥಿತಿಯಲ್ಲಿ ಪ್ರಕಟವಾಗಿ ಕೊನೆಯಲ್ಲಿ ಹೊರಗಡೆ ಕೇಳಿಬರುವ ಸ್ಥೂಲಶಬ್ದರೂಪವಾದ ವೈಖರೀ ಸ್ಥಿತಿಯನ್ನು ಪಡೆಯುವುದು. ಲಯಕ್ರಮದಲ್ಲಿ ಸ್ಥೂಲಶಬ್ದದಿಂದ ಕ್ರಮವಾಗಿ ಪರಾಸ್ಥಿತಿಗೆ ಹೋಗುವುದು ಈ ನಾಲ್ಕು ನಾದಬ್ರಹ್ಮದ ಭೇದಗಳು.

ವೈಖರೀ ಸ್ವರೂಪವಾದ ಸ್ಥೂಲಶಬ್ದದಿಂದ ಬಹು ಸೂಕ್ಷ್ಮಾತ್‌ಸೂಕ್ಷ್ಮತರವೂ ಸೂಕ್ಷ್ಮತಮವೂ ಆದ ಕಳಾಸ್ಥಿತಿಯವರೆಗೂ ನಾದಬ್ರಹ್ಮವಾಗಿರುವುದು. ಸೃಷ್ಟಿಕ್ರಮದಲ್ಲಿ ಓಂಕಾರವು ಪರಾದಿಂದ ಪ್ರಾರಂಭವಾಗಿ ವೈಖರಿಗೆ ಬಂದು ನಿಲ್ಲುವುದು. ಲಯಕ್ರಮದಲ್ಲಿ ವೈಖರಿಯಿಂದ ಪ್ರಾರಂಭವಾಗಿ ಪರಾಸ್ಥಿತಿಗೆ ಹೋಗಿ ನಿಲ್ಲುವುದು. ಈ ಪ್ರಕಾರ ಉಚ್ಚವಾಗಿ ಉಚ್ಚರಿತವಾಗುವ ವೈಖರೀ ಶಬ್ದದಂತೆ ಸ್ಫುಟವಾದ ಇಂದ್ರಿಯಸುಖವಿದೆ. ಪ್ರಿಯವೃತ್ತಿಗೂ ಪ್ರಮೋದವೃತ್ತಿಗೂ ಮಧ್ಯಮವಾದ ಮೋದವೃತ್ತಿಯೇ ಮಧ್ಯಮಾವಾಣಿಯೆನ್ನಬಹುದು.

ದೃಗ್ರೂಪದಲ್ಲಿರುವ ಆನಂದವು ದೃಶ್ಯಭೂಮಿಕೆಗಿಳಿದ ಪ್ರಥಮರೂಪವೇ ಪ್ರಮೋದವಾದುದರಿಂದ ಅದೇ ಪಶ್ಯಂತಿ. ಅವ್ಯಕ್ತವೂ, ಅನಪಾಯಿಸಿಯೂ, ಅನಿರ್ವಚನೀಯವೂ ಆದ ಆನಂದಾನುಭವವೇ ಪರಾವಾಣಿಯಾದ ಪ್ರಣವವು. ತುರ್ಯಸ್ಥಿತಿಯ ಪರಮಾನಂದದಲ್ಲಿ ಸ್ವಯಂಭುವಾಗಿ ಸ್ಫುರಣವಾಗುವುದೇ ಪರಾವಾಣಿಯು. ಸುಷುಪ್ತಿಯಲ್ಲಿ ಪಶ್ಯಂತಿ, ಸ್ವಪ್ನದಲ್ಲಿ ಮಧ್ಯಮಾ, ಜಾಗ್ರತ್ತಿನಲ್ಲಿ ಪ್ರಧಾನವಾದುದೇ ವೈಖರೀವಾಣಿಯು.

ಇಂದ್ರಿಯಸುಖಕ್ಕೆ ವಿಷಯಗಳೂ, ಜಾಗ್ರದವಸ್ಥೆಯೂ ಬೇಕಾದರೆ ಸಂತೋಷಕ್ಕೆ ಮನಸಿನ ಅಥವಾ ಕನಸ್ಸಿನ ಕಲ್ಪನೆ ಸಾಕಾಗಿದೆ. ಆನಂದಕ್ಕೆ ಕಲ್ಪನೆಯೂ ಇಲ್ಲದ ಗಾಢನಿದ್ರೆಯೇ ಸಾಕು. ಎಚ್ಚರದಿಂದ ನೋಡಿದರೆ, ಗಾಢ ನಿದ್ರೆಯಲ್ಲಿರುವ ಒಂದೇ ಉಪಾಧಿಯು ಅವಿದ್ಯಾವೃತ್ತಿಯು. ಕನಸಿನಲ್ಲಿರುವುದು ಅಜ್ಞಾನವೂ ಅಜ್ಞಾನಕಲ್ಪಿತ ಅಂತಃಕರಣವೂ ಉಪಾಧಿಗಳು. ಎಚ್ಚರದಲ್ಲಿರುವುದು ಅಜ್ಞಾನವೂ, ಅಂತಃಕರಣವೂ, ಬಹಿಃಕರಣಗಳೂ (ಇಂದ್ರಿಯಗಳೂ), ವಿಷಯಗಳೂ ಉಪಾಧಿಗಳು. ನಿರುಪಾಧಿಕವಾದುದು ತುರ್ಯವೊಂದೇ! ಆದ್ದರಿಂದ ಗಾಢನಿದ್ರೆಯಲ್ಲಿ ತಾನೇತಾನಾದ ಆನಂದವೇ ಅಂತಃಕರಣದ ಉಪಾಧಿಯಲ್ಲಿ ಮೋದ ಪ್ರಮೋದಗಳಾಗಿಯೂ ವಿಷಯೇಂದ್ರಿಯ ಸಂಯೋಗ ಕಾಲದಲ್ಲಿ ಸುಖವಾಗಿಯೂ ತೋರುತ್ತದೆ. ಗಾಢಸುಪ್ತಿಯಲ್ಲಿರುವ ಆನಂದವೇ ತುರ್ಯಸ್ಥಿತಿಯ ಪರಮಾನಂದವಾಗಿದೆ.

ಸುಖವೆಂದೊಡನೆ ಅದರ ವಿರುದ್ಧವಾದ ಕಷ್ಟ ಅಥವಾ ದುಃಖದ ನೆನಪೂ ನಮಗೆ ಬಾರದಿರುವುದಿಲ್ಲ. ಏಕೆಂದರೆ, ಪ್ರಕೃತಿ–ಪುರುಷ ವಿಲಾಸರೂಪವಾದ ಈ ಜಗತ್ತು ದ್ವಂದ್ವಾತ್ಮಕವಾದುದು. ಬೆಳಕಿಗೆ ಎದುರಾಗಿರುವ ವಸ್ತುವಿನ ಒಂದು ಮುಖವು ಬೆಳಗುತ್ತಿದ್ದರೂ ಮರೆಯಾಗಿರುವ ಇನ್ನೊಂದು ಮುಖದಲ್ಲಿ ನೆರಳಾಗಿರುವಂತೆ ಸ್ವಯಂ ಪ್ರಕಾಶನಾದ ಆತ್ಮನಿಗೆ ಅಭಿಮುಖವಾದ ಭಾವವು ಜ್ಞಾನವಾಗಿಯೂ, ವಿಮುಖವಾದ ಭಾವವು ಅಜ್ಞಾನವಾಗಿಯೂ, ಸಾಧಕವಾದ ಕರ್ಮವು ಪುಣ್ಯವಾಗಿಯೂ, ಬಾಧಕವಾದುದು ಪಾಪವಾಗಿಯೂ, ಅನುಕೂಲ ಸಂವೇದನೆಯು ಸುಖವಾಗಿಯೂ, ಪ್ರತಿಕೂಲವಾದುದು ದುಃಖವಾಗಿಯೂ ತೋರುತ್ತವೆ. ಇದನ್ನೇ ವೈಜ್ಞಾನಿಕವಾಗಿ " Polarity of things "

" ಪದಾರ್ಥಗಳ ವಿದ್ಯುನ್ಮಯ ಧೃವಾಭಿಮುಖತ್ವ " ಎನ್ನುತ್ತಾರೆ. ಆಚಾರ್ಯ ಶಂಕರರೂ **" ವಿಷಯಾನುಕೂಲ್ಯೇ ಸೌಖ್ಯಂ । ದುಃಖಂ ತದ್ವಿಪರ್ಯಯೇ "** ಅನುಕೂಲ ವಿಷಯದಿಂದಾಗುವ ಸಂವೇದನೆಯು ಸುಖವೆಂದೂ ಅದಕ್ಕೆ ವಿಪರೀತವಾದುದು ದುಃಖವೆಂದೂ ಹೇಳಿದ್ದಾರೆ. ನಮ್ಮ ಬುದ್ಧಿಯಲ್ಲಿ ಜ್ಞಾನಾಜ್ಞಾನಗಳು ಮಿಶ್ರವಾಗಿರುವವರೆಗೂ ವೃತ್ತಿಯಲ್ಲಿ ರಾಗ ದ್ವೇಷಗಳೂ, ಕರ್ಮದಲ್ಲಿ ಪುಣ್ಯಪಾಪಗಳೂ, ಅನುಭವದಲ್ಲಿ ಸುಖದುಃಖಗಳೂ ಮಿಶ್ರವಾಗಿರುತ್ತವೆ. ಪ್ರಪಂಚ ಜೀವನವೆಲ್ಲಾ ಸುಖದುಃಖ ಮಿಶ್ರವಾದುದು.

ಈ ಪ್ರಪಂಚದಲ್ಲಿ ದುಃಖದ ಪ್ರಮಾಣವೇ ಹೆಚ್ಚಾಗಿದೆ. ವೇದಾಂಗವೂ ವೇದಕ್ಕೂ ಲೋಕಕ್ಕೂ ನೇತ್ರಪ್ರಾಯವೂ ಆದ ಜ್ಯೋತಿಷ್ಯಶಾಸ್ತ್ರ ಪ್ರಕಾರ ಸೂರ್ಯಾದಿ ನವಗ್ರಹಗಳಲ್ಲಿ ನೈಸರ್ಗಿಕ ಶುಭಗ್ರಹಗಳಾದ ಗುರುಶುಕ್ರರನ್ನು ಬಿಟ್ಟರೆ ಮಿಕ್ಕ ಏಳೂ ಪಾಪಗ್ರಹಗಳು ದುಃಖಪ್ರದಗಳಾಗಿವೆ. ಈ ಲೆಕ್ಕದಂತೆ ಪ್ರಪಂಚದಲ್ಲಿ ಎರಡು ಭಾಗ ಸುಖವಾದರೆ ಏಳು ಭಾಗ ದುಃಖವಿದೆ.

ಶಾಸ್ತ್ರಪುರಾಣ ಕಾವ್ಯಾದಿಗಳಲ್ಲಿ ಸುಖದುಃಖಗಳ ಗುಣ ಲಕ್ಷಣ ಪ್ರಮಾಣಗಳ ವಿಷಯಕ್ಕೆ ಬಗೆಬಗೆಯಾದ ವಿವರಣೆಗಳಿವೆ. ಆನಂದ ರಾಮಾಯಣದ ಸಪ್ತರ್ಷಿ ಸ್ತೋತ್ರಗಳಲ್ಲಿ ಮೊದಲನೆಯ ಮಹರ್ಷಿಯು ಮನಸ್ಸನ್ನೇ ಕುರಿತು ಹೇಳುವುದೇನೆಂದರೆ,

**" ನಿತ್ಯಂ ಕಿಂ ಧಾವಸಿ ಚಲವಿಷಯಾನನುಭವಿತುಂ ಸುಖಲೇಶಾಭಾಸಾನ್ ಉರುತರ ದುಃಖಾನ್ ಅತಿ ದುಸ್ಸಾಧ್ಯಾನ್ ಅತ್ಯಂತಾಯಾಸಾನಂ ಹೋ ಮೂಲಾನುಗ್ರ ಭಯಂಕರ ರೌರವಾದಿ ನಾರಕ ಗತಿ ಹೇತೂನೇತಾನಪಿ ಪರಿಹರ ಸೀತಾಪತಿಮಾಶು ಪರಿಚರೇಶಂ ಭೋಃ ! ಚೇತಶ್ಶ್ರೀರಾಮಂ ಭಜಶರಣಂ ಭಜಘನರಾಮಂ ಭಜ ಶರಣಂ ಶ್ರಿತಚಿಂತಾಮಣಿಮತಿಕರುಣಾಕರಮರಿಹರವರುತರ ಶರ ಕೋದಂಡಂ ಭೋಃ ! ॥ "**

" ಎಲೈ ಮನಸ್ಸೇ ! ಬರೀ ತೋರಿಕೆಯದಾದ ಲೇಶಮಾತ್ರ ಸುಖವುಳ್ಳದ್ದಾದರೂ ಅಧಿಕತರ ದುಃಖವನ್ನೇ ಕೊಡುವುದಾಗಿಯೂ. ಕಷ್ಟಸಾಧ್ಯವಾಗಿಯೂ, ಅತ್ಯಂತ ಆಯಾಸಕರವಾಗಿಯೂ ಭೀಕರೋಗ್ರವಾದ ರೌರವನರಕ

ಯಾತನೆಗೀಡುಮಾಡುವುದಾಗಿಯೂ ಚಂಚಲವಾಗಿಯೂ ಇರುವ ವಿಷಯಗಳನ್ನು ಅನುಭವಿಸುವುದಕ್ಕೆ ಎಡೆಬಿಡದೇ ಏಕೆ ಓಡೋಡಿ ಹೋಗುತ್ತೀ ? ಇವುಗಳನ್ನೆಲ್ಲಾ ಬಿಟ್ಟು ಆಶ್ರಿತರಿಗೆ ಕರುಣಾಕರನೂ ಚಿಂತಾಮಣಿ ಸದೃಶನೂ ಆದ ಶ್ರೀರಾಮಚಂದ್ರನನ್ನು ಭಜಿಸು."

ಭರ್ತೃಹರಿ ಮಹರ್ಷಿಯು ಹೇಳುವುದೇನೆಂದರೆ, **"ಪ್ರತೀಕಾರಂ ವ್ಯಾಧೇಃ ಸುಖಮಿತಿ ವಿಪರ್ಯಸ್ಯತಿ ಜನಃ।"** "ಹಸಿವು, ಬಾಯಾರಿಕೆ, ಸ್ತ್ರೀಪುರುಷ ಕಾಮ ಇವೇ ಮೊದಲಾದವು ಪ್ರಾಣಿಸಹಜವಾದ ನಿತ್ಯವ್ಯಾಧಿಗಳು. ಇವುಗಳ ಬಾಧೆಯನ್ನು ಸಹಿಸಲಾರದೇ ಮಾಡಿಕೊಳ್ಳುವ ಚಿಕಿತ್ಸಾರೂಪವಾದ ಭೋಜನ, ಪಾನ, ಆಲಿಂಗನಾದಿ ಪರಿಹಾರಗಳನ್ನೇ ಸುಖವೆಂದು ಭ್ರಮಿಸಿದ್ದೇವೆ. ಭಗವತ್ಪಾದ ಶಂಕರರೂ **"ಕ್ಷುದ್ವ್ಯಾಧಿಶ್ಚ ಚಿಕಿತ್ಸ್ಯತಾಂ ಪ್ರತಿದಿನಂ ಭಿಕ್ಷೌಷಧಂ ಭುಜ್ಯತಾಂ"** "ಹಸಿವೆಯೆಂಬ ರೋಗಕ್ಕೆ ಚಿಕಿತ್ಸೆ ಮಾಡುವುದಕ್ಕಾಗಿ ನಿತ್ಯವೂ ಭಿಕ್ಷಾನ್ನವೆಂಬ ಔಷಧಿಯು ಸೇವಿಸಲ್ಪಡಲಿ" ಎಂದು ಹೇಳಿದ್ದಾರೆ. ಭರ್ತೃಹರಿಯೇ ಇನ್ನೊಂದು ಕಡೆ **"ಚುಂಬನಂ ದೇಹಿ ಮೇ ಕಾಂತಾ ಕಾಮಚಂಡಾಲ ತೃಪ್ತಯೇ"** "ಎಲೈ ಕಾಂತೆ ! ನನ್ನನ್ನು ಕಾಡುತ್ತಿರುವ ಕಾಮಚಂಡಾಲನ ಕಾಟವನ್ನು ಕಳೆಯುವುದಕ್ಕಾಗಿ ಚುಂಬನಾದಿಗಳನ್ನು ನೀಡು" ಎಂದು ಹೇಳಿದ್ದಾನೆ. ಹೀಗೆ ನಮ್ಮ ಎಷ್ಟೋ ಸುಖಗಳು ದುಃಖದ ಪರಿಹಾರಮಾತ್ರವಾಗಿವೆ.

ಆರೋಗ್ಯವಾಗಿದ್ದ ನಾವು ಜ್ವರಾದಿಗಳಿಂದ ಬಹಳ ದಿನಗಳು ವ್ಯಥೆಪಟ್ಟು ಔಷಧೋಪಚಾರಗಳಿಂದ ಗುಣ ಹೊಂದಿ ಸುಖವಾಯಿತೆನ್ನುತ್ತೇವೆ. ಇಲ್ಲಿ ನಮಗೆ ನಿಜವಾಗಿಯೂ ಆದ ಸುಖವೇನು ? ಮೊದಲು ಆರೋಗ್ಯವನ್ನು ಹೊಂದಿದ್ದ ನಾವೇ ಮಧ್ಯದಲ್ಲಿ ಆರೋಗ್ಯವನ್ನು ಕಳೆದುಕೊಂಡು ಮತ್ತೆ ಆರೋಗ್ಯವನ್ನೇ ಹೊಂದಿದೆವು. ಇದರಿಂದ ನಮಗೆ ಹೆಚ್ಚಿನ ಲಾಭವೇನೂ ಇಲ್ಲವಾದರೂ ನಷ್ಟಪರಿಹಾರವೇ ಹೊಸ ಲಾಭವೆನ್ನಿಸಿ ಉಲ್ಲಾಸಪಡಿಸುತ್ತದೆ. ಮಳೆಗಾಲದಲ್ಲಿ ಮನೆಯಲ್ಲಿ ನೆಮ್ಮದಿಯಾಗಿದ್ದ ನಾವು ಹೊರಗೆ ಹೋಗಿ ಮಳೆಯಲ್ಲಿ ನೆನೆದು ತೊಂದರೆಪಟ್ಟು ಪುನಃ ಮನೆಗೆ ಬಂದು ಹಾಯಾಗಿರುತ್ತೇವೆ. ಇಲ್ಲಿ ನಮಗಾದ ಸುಖವೂ ದುಃಖದ ಪರಿಹಾರವೇ ಆಗಿದೆ.

ನಮ್ಮ ಮನಸ್ಸು ಯಾವುದೊಂದು ವಿಷಯವನ್ನು ಬಯಸಿ ಅದಕ್ಕಾಗಿ ಹಂಬಲಿಸಿ ಅದರ ಭೋಗಕ್ಕಾಗಿ ಕಾತರಿಸಿ ಚಿಂತಾಕುಲವಾಗುತ್ತದೆ. ಆ ಇಷ್ಟ ವಸ್ತುವನ್ನು ಪಡೆದಾಗ ಮನಸ್ಸು ಸಂತೋಷಪಡುತ್ತದೆ. ಈ ಸಂತೋಷವು ಮನಸ್ಸಿನ ಬಯಕೆಯೆಂಬ ಬೇನೆಯ ಪ್ರತೀಕಾರ ಅಥವಾ ಪರಿಹಾರವೇ ಆಗಿದೆ. ಮನಸ್ಸಿನ ಬಯಕೆಯಾಗಲೀ ಇಂದ್ರಿಯಗಳ ಬಾಯಾರಿಕೆಯಾಗಲೀ ಶರೀರದ ಬೇನೆಯಾಗಲೀ ಇಲ್ಲದಾಗ ವಿಷಯೇಂದ್ರಿಯಗಳ ಸಂಯೋಗಮಾತ್ರದಿಂದಲೂ ಸುಖವಾಗುತ್ತದೆ. ನಾವು ಸುಮ್ಮನೆ ಕುಳಿತಿರುವಾಗ ಅನಿರೀಕ್ಷಿತವಾಗಿ ನಮಗೆ ಇಂಪಾದ ಗಾನವು ಕೇಳಿದರೂ, ಕಂಪಾದ ವಾಸನೆ ಬಂದರೂ, ತಂಪಾದ ಗಾಳಿ ಬೇಸಗೆಯಲ್ಲಿ ಬೀಸಿದರೂ, ಕಣ್ಣೆದುರಿಗೆ ಸೊಂಪಿನ ಕಾಮನಬಿಲ್ಲು ಮೂಡಿದರೂ, ಸೊಂಪಾದ ರಸದೌತಣವು ದೊರೆತರೂ ಸುಖವಾಗುತ್ತದೆ. ಇದು ಬಯಕೆ, ಬಾಯಾರಿಕೆ, ಬೇನೆ ಮೊದಲಾದುವುಗಳ ಪರಿಹಾರರೂಪವಾದ ಸುಖವಲ್ಲ; ಇದು ವಾಸ್ತವವಾದ ಇಂದ್ರಿಯಸುಖ. ನಾವು ಬಯಸಿ ಈ ಭೋಗಗಳನ್ನು ಪಡೆಯದಿದ್ದರೂ ಆ ಭೋಗಗಳು ತಮ್ಮ ಸುಖದ ಬಯಕೆಯನ್ನು ಹುಟ್ಟಿಸುವು ದಂತೂ ನಿಶ್ಚಯ; ಏಕೆಂದರೆ ಅನುಕೂಲ ವಿಷಯಗಳಲ್ಲಿ ಪ್ರೀತಿಯೂ, ಪ್ರತಿಕೂಲ ವಿಷಯಗಳಲ್ಲಿ ದ್ವೇಷವೂ ಇಂದ್ರಿಯಗಳಲ್ಲೇ ನಿಸರ್ಗಸಿದ್ಧವಾಗಿ ನೆಲೆಗೊಂಡಿವೆ. ಈ ಸಂದರ್ಭಕ್ಕೆ ಗೀತೆಯಲ್ಲಿ ಭಗವಂತನು ಹೇಳಿರುವು ದೇನೆಂದರೆ,

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ||**

"ಶಬ್ದ, ಸ್ಪರ್ಶ, ರೂಪ, ರಸ, ಗಂಧಾದಿ ವಿಷಯಗಳಲ್ಲಿ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ಅನುಕೂಲವಾಗಿರುವುದರಲ್ಲಿ ಪ್ರೀತಿಯೂ, ಪ್ರತಿಕೂಲ ವಾಗಿರುವುದರಲ್ಲಿ ಹಗೆತನವೂ ಸ್ವಾಭಾವಿಕವಾಗಿ ನೆಲೆಗೊಂಡಿರುವುವು.

**ತಯೋರ್ನವಶಮಾಗಚ್ಛೇತ್ ತೌಹ್ಯಸ್ಯಪರಿಪಂಥಿನೌ ||**

"ಆದರೆ ಆ ರಾಗದ್ವೇಷಗಳು ಶತ್ರುಗಳಾದುದರಿಂದ ಅವುಗಳಿಗೆ ಮುಮುಕ್ಷು ಗಳು ವಶರಾಗಬಾರದು." ಏಕೆಂದರೆ,

**ನ ಜಾತು ಕಾಮಃಕಾಮಾನಾಮುಪಭೋಗೇನ ಶಾಮ್ಯತಿ |**
**ಹವಿಷಾ ಕೃಷ್ಣವರ್ತ್ಮೇವ ಭೂಯಏವಾಭಿವರ್ಧತೇ ||**

ಬೆಂಕಿಗೆ ತುಪ್ಪವನ್ನು ಹೊಯ್ಯುವುದರಿಂದ ಹೇಗೆ ಅದನ್ನು ಆರಿಸುವುದಕ್ಕಾಗದೇ ಉರಿಯನ್ನು ಹೆಚ್ಚಿಸಿದಂತೆಯೇ ಆಗುತ್ತದೆಯೋ ಹಾಗೆಯೇ ವಿಷಯೋಪಭೋಗದಿಂದ ಸುಖದ ಬಯಕೆಯನ್ನು ಎಂದಿಗೂ ಹಿಂಗಿಸುವುದಕ್ಕಾಗದೇ ಹೆಚ್ಚಿಸಿದಂತೆಯೇ ಆಗುತ್ತದೆ. ಆಶೆಯೇ ಸರ್ವದುಃಖಕ್ಕೂ ಕಾರಣವಾಗಿದೆ. ಆದ್ದರಿಂದಲೇ ಭಗವಂತನು ಗೀತೆಯಲ್ಲಿ,

**ಯೇ ಹಿ ಸಂಸ್ಪರ್ಶಜಾ ಭೋಗಾಃ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥**

" ವಿಷಯೇಂದ್ರಿಯಗಳ ಸಂಬಂಧದಿಂದುಂಟಾದ ಯಾವ ಸುಖಗಳುಂಟೋ ಅವುಗಳು ದುಃಖಕ್ಕೆ ಕಾರಣವಾದವುಗಳೇ ಸರಿ; ಮತ್ತು ಉತ್ಪತ್ತಿ, ವಿನಾಶಗಳುಳ್ಳವುಗಳು. ಆದ್ದರಿಂದಲೇ ವಿವೇಕಿಯಾದವನು, ಕ್ಷಣಿಕವಾದ ಅಂತಹ ಸುಖಗಳಲ್ಲಿ ರಮಿಸುವುದಿಲ್ಲ " ಎಂದು ಹೇಳಿದ್ದಾನೆ.

**" ಸರ್ವಂ ಶೂನ್ಯಂ ಶೂನ್ಯಂ "** ಎಂದು ಹೇಳಿರುವ ಬೌದ್ಧದರ್ಶನದಲ್ಲಿಯೂ, **" ಸರ್ವಂ ಕ್ಷಣಿಕಂ ಕ್ಷಣಿಕಂ; ಸರ್ವಂ ದುಃಖಂ ದುಃಖಂ "** " ಸರ್ವ ಜಗತ್ತೂ ಕ್ಷಣಿಕವಾಗಿಯೂ, ದುಃಖಪೂರ್ಣವಾಗಿಯೂ ಇದೆ " ಎಂದೂ ಹೇಳಿದೆ. ಇದರಲ್ಲಿ ಸ್ವಲ್ಪ ಉತ್ಪ್ರೇಕ್ಷೆಯಿರಬಹುದು.

ಇಲ್ಲಿ ನಮಗೊಂದು ಶಂಕೆ ಬರಬಹುದು. " ಜಗತ್ತಿನಲ್ಲಿ ದುಃಖವೇ ತುಂಬಿದ್ದು ಸುಖವೇ ಇಲ್ಲವಾದರೆ ನಮಗೆ ಸುಖದ ಕಲ್ಪನೆಯಾದರೂ ಹೇಗೆ ಬರಬೇಕು ? " ಎಂದು.

ನಿಜವಾಗಿ ನೋಡಿದರೆ ಪ್ರಪಂಚದಲ್ಲಿ ಪ್ರತಿಯೊಂದು ಪ್ರಾಣಿಯೂ **" ಸುಖ, ಸುಖ, ಸುಖ "** ಎಂಬ ಹಂಬಲದಿಂದಲೇ ಹಗಲಿರುಳೂ ಯಾವುದಾದರೊಂದು ಕರ್ಮದಲ್ಲಿ ತೊಡಗಿರುವುದು. ಕರ್ಮವು ಸಾಮಾನ್ಯವಾಗಿ ಶ್ರಮದಾಯಕವಾಗಿರುವುದರಿಂದ ಸುಖವು ದೊರಕುವುದೆಂಬ ಭರವಸೆಯಿಲ್ಲದಿದ್ದರೆ ಯಾವ ಪ್ರಾಣಿಯೂ ಕಾರ್ಯತಃ ಶ್ರಮಿಸುತ್ತಿರಲಿಲ್ಲ. ಸುಖವು ತಪ್ಪದೇ ನಮಗೆ ದೊರಕುವುದರಿಂದಲೇ ಎಡೆಬಿಡದೇ ಹಲವು ಬಗೆಯಿಂದ ಅದಕ್ಕಾಗಿ ಹೆಣಗಾಡುತ್ತಿದ್ದೇವೆ.

ಆದರೆ ಹರಿತವಾದ ಖಡ್ಗದ ಅಲಗಿಗೆ ಹಚ್ಚಿರುವ ಜೇನುತುಪ್ಪವನ್ನು ನಾಲಿಗೆಯಿಂದ ನೆಕ್ಕಿದರೆ ಲೇಶಮಾತ್ರವೇ ಸಿಹಿಯು ಹತ್ತಿದರೂ ನಾಲಿಗೆಯು ಸೀಳಿ ರಕ್ತವು ಸುರಿದು ವ್ರಣವಾಗಿ ವ್ಯಥೆಪಡುವಂತೆ ಜಗತ್ತಿನ ಸುಖದುಃಖಗಳ ರೀತಿಯಿದೆ. ವಿಷಯಸುಖವಾದರೂ ಆತ್ಮಸ್ವರೂಪವಾದ ಸುಖಸಿಂಧುವಿನ ಬಿಂದುವೇ ಆದುದರಿಂದ ಅದರ ಮಹಿಮೆಯೂ ಅಪಾರವಾದುದು. ನಮ್ಮ ಜೀವನದಲ್ಲಿ ಆ ಸುಖವು ವಿಷಯಮುಖದಿಂದ ಅಷ್ಟಾದರೂ ದೊರಕುವುದ ರಿಂದಲೇ ನಾವು ಜೀವಿಸಿದ್ದೇವೆ. ಲೇಶವಾದರೂ ಸಹ ಆ ಸುಖವೇ ಜೀವನದಲ್ಲಿ ಅನಿವಾರ್ಯವಾದ ಹಲವು ದುಃಖಗಳಿಗೆ ಧೈರ್ಯದಿಂದಲೂ ಕಾಂಕ್ಷೆಯಿಂದಲೂ ಮೈಗೊಡುವ ಸಾಹಸವನ್ನು ನೀಡುತ್ತಿದೆ.

ಮಹಾಮಹಿಮವಾದ ಸುಖದ ವಿಚಾರವು ಛಾಂದೋಗ್ಯೋಪನಿಷತ್ತಿನ ಏಳನೇ ಅಧ್ಯಾಯದ ಮೂವತ್ತೊರನೇ ಖಂಡದಲ್ಲಿ ಬಂದಿದೆ. ಸನತ್ಕುಮಾರನು ನಾರದನಿಗೆ ಹೇಳುವುದೇನೆಂದರೆ,

**"ಯದಾ ವೈ ಸುಖಂ ಲಭತೇಽಥ ಕರೋತಿ, ನಾಸುಖಂ ಲಬ್ಧ್ವಾ ಕರೋತಿ, ಸುಖಮೇವ ಲಬ್ಧ್ವಾ ಕರೋತಿ, ಸುಖಂ ತ್ವೇವ ವಿಜಿಜ್ಞಾಸಿತವ್ಯಮಿತಿ।"**

"ಸುಖವನ್ನು ಹೊಂದುವುದರಿಂದಲೇ ಅವನು ತನ್ನ ಕರ್ತವ್ಯಗಳನ್ನು ಮಾಡು ತ್ತಾನೆ. ಸುಖವನ್ನು ಹೊಂದದಿದ್ದರೆ ಕರ್ಮವನ್ನೂ ಮಾಡುವುದಿಲ್ಲ; ನಿಶ್ಚಯ ವಾಗಿಯೂ ಸುಖವನ್ನು ಹೊಂದುವುದರಿಂದಲೇ ಯಾವನೊಬ್ಬನು ಕರ್ಮವನ್ನು ಮಾಡುವುದು. ಆದ್ದರಿಂದ ಆ ಸುಖದ ಸ್ವರೂಪವನ್ನೇ ತಿಳಿಯಲು (ವಿಚಾರಿ ಸಲು) ಇಚ್ಛಿಸಬೇಕು.

ಇದಕ್ಕೆ ನಾರದನೆಂದನು, **"ಸುಖಂ ಭಗವೋ ವಿಜಿಜ್ಞಾಸ ಇತಿ।"** "ಭಗವನ್! ಸುಖವನ್ನು ನಾನು ತಿಳಿಯಲು ಇಚ್ಛಿಸುತ್ತೇನೆ."

ನಾರದನು ಹೀಗೆ ಪ್ರಾರ್ಥಿಸಿದೊಡನೆ ಸನತ್ಕುಮಾರನು ಹೀಗೆಂದನು: **"ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ, ಭೂಮಾತ್ವೇವ ವಿಜಿಜ್ಞಾಸಿತವ್ಯ ಇತಿ।"** "ಯಾವುದು ಅನಂತವೋ (ಮಹತ್ತೊ) ಅದು (ಆನಂದ) ಸುಖ. ಅಲ್ಪದಲ್ಲಿ (ಸಾಂತದಲ್ಲಿ)

ಸುಖವಿಲ್ಲ. ಅಪಾರವೇ ಸುಖ. ಆದರೆ ಆ ಅನಂತವನ್ನು ತಿಳಿಯಲು ಇಚ್ಛಿಸಬೇಕು.

ನಾರದ: **ಭೂಮಾನಂ ಭಗವೋ ವಿಜಿಜ್ಞಾಸ ಇತಿ।** "ಪೂಜ್ಯರೆ! ಅನಂತವನ್ನು ತಿಳಿಯಲು ಇಚ್ಛಿಸುತ್ತೇನೆ."

ಅನಂತ, ಅಪಾರ, ಅಪರಿಚ್ಛಿನ್ನ, ಅಖಂಡ, ಮಹತ್ತು, ಅತ್ಯಂತ ಶ್ರೇಷ್ಠ, ವ್ಯಾಪಕ ಮೊದಲಾದವುಗಳು 'ಭೂಮಾ' ಎನ್ನುವುದಕ್ಕೆ ಪರ್ಯಾಯ ಪದಗಳು. ಇವೇ ಸುಖ. ಹೆಚ್ಚಿನದಕ್ಕೆ ಬಯಕೆ ಹುಟ್ಟುವುದರಿಂದ ಸಣ್ಣದರಲ್ಲಿ ಸುಖವಿಲ್ಲ. ಬಯಕೆಯೇ ದುಃಖದ ಮೂಲ. ದುಃಖ, ಶೋಕ, ಕ್ಲೇಶ, ಜ್ವರಾದಿಗಳಿಗೆ ಯಾವುದು ಕಾರಣವೋ ಅದು ಎಂದಿಗೂ ಸುಖವನ್ನು ಕೊಡುವುದಿಲ್ಲ. ಆದ್ದರಿಂದಲೇ ಸಣ್ಣದರಲ್ಲಿ ಸುಖವಿಲ್ಲವೆನ್ನುವುದು ವಿದಿತವಾಗಿದೆ. ಆದ್ದರಿಂದ ಅನಂತವೇ ಸುಖ. ಏಕೆಂದರೆ, ಆ ಅನಂತಾಪಾರದಲ್ಲಿ ನೋವಿಗೆ ಕಾರಣವಾದ ಬಯಕೆಗೆ ಅವಕಾಶವಿಲ್ಲ.

**"ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ; ಅಥ ಯತ್ರಾನ್ಯತ್ ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ। ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಂ ಸ ಭಗವಃ, ತಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನೀತಿ।"**

"ಎಲ್ಲಿ ಬೇರೆ ಏನನ್ನೂ ನೋಡುವುದಿಲ್ಲವೋ, ಬೇರೆ ಏನನ್ನೂ ಕೇಳುವುದಿಲ್ಲವೋ, ಬೇರೆ ಏನನ್ನೂ ಅರಿಯುವುದಿಲ್ಲವೋ ಅದೇ ಅನಂತ. ಆದರೆ ಎಲ್ಲಿ ಇನ್ನೊಂದನ್ನು ನೋಡುವನೋ, ಇನ್ನೊಂದನ್ನು ಕೇಳುವನೋ, ಇನ್ನೊಂದನ್ನು ಅರಿಯುವನೋ ಅದೇ ಅಲ್ಪವಾದುದು (ಕ್ಷುದ್ರ, ಪರಿಚ್ಛಿನ್ನವಾದುದು). ಯಾವುದು ಅನಂತವೋ ಅದು ಅಮೃತಮಯವಾದುದು; ಯಾವುದು ಅಲ್ಪವೋ ಅದು ಮೃತ್ಯುವು.

Finitude or limitedness is dependence and misery; Infinititude or unlimitedness is freedom and Bliss. ಪರಿಚ್ಛಿನ್ನವೇ ಅಥವಾ ಪರಿಮಿತವೇ ಪರಾಧೀನವೂ ದುಃಖವೂ ಆಗಿದೆ; ಅಖಂಡವೇ ಅಥವಾ ಅಪಾರವೇ ಮುಕ್ತಿಯೂ ಆನಂದವೂ ಆಗಿದೆ.

ನಾರದ: ಪೂಜ್ಯರೆ! ಅನಂತವು ಇರುವುದು ಎತರಲ್ಲಿ ?

ಸನತ್ಕುಮಾರ: ಅನಂತವಿರುವುದು ತನ್ನ ಸ್ವಂತ ಮಹಿಮೆಯಲ್ಲಿಯೇ! ಅಥವಾ ತನ್ನ ಮಹಿಮೆಯಲ್ಲಿಯೂ ಅಲ್ಲ.

ಈ ಅನಂತವೆಂದರೆ ಯಾವ ಬಗೆಯಾದುದು ಎಂದರೆ, ಈ ಅನಂತದಲ್ಲಿ ಯಾವ ಇಂದ್ರಿಯದಿಂದಲೂ ಏನನ್ನೂ ನೋಡಲಾಗುವುದಿಲ್ಲ. ನೋಡತಕ್ಕವನಾದರೂ ಇದರಿಂದ ಬೇರೆಯಲ್ಲ; ಹಾಗೆಯೇ ಇದರಲ್ಲಿ ಏನೂ ಕೇಳುವುದೂ ಇಲ್ಲ; ನಾಮರೂಪಾತ್ಮಕವಾದ ಜಗತ್ತು ಆ ಅನಂತದಲ್ಲಿ ಇಲ್ಲವಾದುದರಿಂದ ರೂಪವನ್ನು ನೋಡುವ ಕಣ್ಣೂ ನಾಮವನ್ನು ಕೇಳುವ ಕಿವಿಯೂ ಅಲ್ಲಿ ಏನನ್ನೂ ಗ್ರಹಿಸಲಾರವು. ಅಲ್ಲಿ ಅಜ್ಞಾನವೂ ವಿಷಯವೂ ಇಲ್ಲದ ಕಾರಣ ಮನಸ್ಸೂ ಏನನ್ನೂ ಅರಿಯಲಾರದು. ಕುತೂಹಲಿಯಾದ ಮನಸ್ಸಿನ ಸಮಾಧಾನಾರ್ಥವಾಗಿ ಅದರ ಮಹಿಮೆಯಲ್ಲಿಯೇ ಅದು ಇರುವುದೆನ್ನುವುದಲ್ಲದೆ, ನಿಜವಾಗಿ ಕೇಳಿದರೆ ಅನಂತವು ಸರ್ವ ಜಗದಾಧಾರವಾಗಿದ್ದರೂ ನಿರಾಧಾರವಾಗಿದೆ.

ಇಲ್ಲಿ ಭೂಮಾ ಎನ್ನುವುದಕ್ಕೆ ನಿಷೇಧಮುಖವಾಗಿ ಹೇಳಿರುವ ಅರ್ಥವು ಸುಷುಪ್ತ್ಯವಸ್ಥೆಯಲ್ಲಿಯೂ ಒಂದು ರೀತಿಯಿಂದ ಅನ್ವಯಿಸುತ್ತದೆ. ಗಾಢನಿದ್ರೆಯಲ್ಲಿಯೂ ಇನ್ನೊಂದನ್ನು ನೋಡುವುದಿಲ್ಲ, ಇನ್ನೊಂದು ಶಬ್ದವನ್ನು ಕೇಳುವುದಿಲ್ಲ, ಇನ್ನೊಂದು ವಿಷಯವನ್ನು ಅರಿಯುವುದಿಲ್ಲ. ಆದ್ದರಿಂದ ಇಷ್ಟೇ ಲಕ್ಷಣವು ಸಾಕಾಗಬಹುದಾದರೆ ಇದನ್ನೇ 'ಭೂಮಾ' ಎನ್ನಬಹುದು. ಆದರೆ ಮೋಕ್ಷಪ್ರಾಪ್ತಿಗೆ ಸ್ವರೂಪಜ್ಞಾನವು ಮುಖ್ಯವೇ ಹೊರತು ದ್ವೈತಜ್ಞಾನದ ಅಭಾವವಲ್ಲ. ಪಾಷಾಣಾದಿಗಳಿಗೂ ದ್ವೈತಭಾನದ ಅಭಾವವಿದೆ; ಅಂದರೆ ಎರಡನೆಯದರ ಜ್ಞಾನವೇ ಅವಕ್ಕಿಲ್ಲ. ಇದೇ 'ಭೂಮಾ' ಆಗಿರುವುದಾದರೆ ಪಾಷಾಣಾದಿಗಳೂ ಮುಕ್ತವೆನ್ನಬೇಕಾದೀತು. ಆದರೆ ಇದು ಸಂಭವವಲ್ಲ.

ಎಚ್ಚರ–ಕನಸುಗಳಲ್ಲಿ ಸ್ಥೂಲ–ಸೂಕ್ಷ್ಮವಾದ ವಿಷಯಗಳೊಡನೆ ಸೇರಿಕೊಂಡಿರುವ ಜ್ಞಾನವು ಗಾಢನಿದ್ರೆಯಲ್ಲಿ (ಕಾಣುವ, ಕೇಳುವ, ತಿಳಿಯುವ) ಎಲ್ಲಾ ವಿಷಯಗಳನ್ನೂ ತೊರೆದು ತಾನೇತಾನಾಗಿ 'ಭೂಮಾ' ಸ್ಥಿತಿಯನ್ನು ಪಡೆದಿರುವುದೆಂದರೆ ಅದು ಮುಕ್ತಿಗೆ ಕಾರಣವಾಗಬಹುದು. ಆದರೆ ಸುಷುಪ್ತಿಯು

'ಭೂಮ'ವು ಸ್ಥಿರವಾಗಿ ಉಳಿಯದೆ ಎಚ್ಚತ್ತೊಡನೆ ಸಂಸಾರದಲ್ಲಿ ತೊಡಗುವುದರಿಂದ ಆ ಭೂಮವು ನಿರ್ಬೀಜವೂ ಜ್ಞಾನಸಂಪೂರ್ಣವೂ ಆಗಬೇಕು. ನೋಡುವುದಾಗಲೀ, ಕೇಳುವುದಾಗಲೀ, ತಿಳಿಯುವುದಾಗಲೀ ಇಲ್ಲದ ಸ್ಥಿತಿಯಲ್ಲಿ "ನಾನೇ ಬ್ರಹ್ಮ" ಎಂಬ ಉಜ್ಜ್ವಲವಾದ ಪೂರ್ಣ ಪ್ರಜ್ಞೆಯಿರುವುದೇ 'ಭೂಮಾ'.

'ಆನಂದ ಮೀಮಾಂಸ'ವು ತೈತ್ತಿರೀಯ ಉಪನಿಷತ್ತಿನಿಂದ ಪ್ರಸಿದ್ಧವಾಗಿದೆ. ಊಹೆಗೆ ನಿಲುಕದಿರುವ ಅಪಾರವಾದ ಬ್ರಹ್ಮಾನಂದದ ಮಹತ್ತನ್ನು ಕಲ್ಪನೆಗೆ ನಿಲುಕಿಸುವುದಕ್ಕಾಗಿ ದೃಶ್ಯಪ್ರಪಂಚದಲ್ಲಿ ಭಾವನೆಗೆ ಸಾಧ್ಯವಾದಂಥ ಉತ್ತಮೋತ್ತಮವಾದ ಲೋಕಾಂತರ ಸುಖಗಳ ತಾರತಮ್ಯ ಪರಂಪರೆಯ ವಿವರಣೆಯನ್ನೇ ಆ ಉಪನಿಷತ್ತಿನಲ್ಲಿ ಕೊಟ್ಟಿದೆ. ಅಲ್ಲಿರುವುದೇನೆಂದರೆ,

**"ಸೈಷಾನಂದಸ್ಯ ಮೀಮಾಂಸಾ ಭವತಿ । ಯುವಾಸ್ಯಾತ್ ಸಾಧುಯುವಾಧ್ಯಾಯಕಃ । ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾವಿತ್ತಸ್ಯ ಪೂರ್ಣಾಸ್ಯಾತ್ । ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ ಶ್ರೋತ್ರಿಯಸ್ಯ ಚಾಅಕಾಮಹತಸ್ಯ । .... .... .... .... । "**

"ಇದೇ ಆನಂದ ಮೀಮಾಂಸೆಯಾಗಿದೆ: ಸಾಧುವೂ ವಿದ್ವಾಂಸನೂ ಸುಶಿಕ್ಷಿತನೂ ದೃಢಸಂಕಲ್ಪವುಳ್ಳವನೂ ಬಲಿಷ್ಠವಾದ ಶರೀರವುಳ್ಳವನೂ ಆದ ತರುಣನೊಬ್ಬನಿಗೆ ಸರ್ವಸಂಪತ್ಸಮೃದ್ಧವಾದ ಈ ಪೃಥ್ವಿಯೇ ವಶವಾದರೆ, ಅಂಥಾ ಸಾರ್ವಭೌಮನ ಆನಂದವೇ ಒಂದು ಮನುಷ್ಯಾನಂದವು. ಮನುಷ್ಯಾನಂದದ ನೂರುಪಟ್ಟು ಆನಂದವು ಮನುಷ್ಯ ಗಂಧರ್ವರ ಒಂದು ಆನಂದವು. ಹೆಚ್ಚಿನ ಜ್ಞಾನಶಕ್ತಿ ಕ್ರಿಯಾಶಕ್ತಿಗಳಿಂದ ಮನುಷ್ಯರು ಗಂಧರ್ವರಾಗುವುದರಿಂದಲೂ, ಗಂಧರ್ವರಿಗೆ ಸೂಕ್ಷ್ಮವಾದ ದೇಹೇಂದ್ರಿಯಗಳಿರುವುದರಿಂದಲೂ, ಸ್ವೇಚ್ಛೆಯಾಗಿ ಅದೃಶ್ಯ ಅಥವಾ ದೃಶ್ಯಮಾನರಾಗುವ ಶಕ್ತಿಯಿರುವುದರಿಂದಲೂ, ಅವರಿಗೆ ಪ್ರತಿಬಂಧಗಳು ಕಡಿಮೆಯಾಗಿರುವುದರಿಂದಲೂ, ದ್ವಂದ್ವಗಳನ್ನು ಮೀರುವುದಕ್ಕೆ ಸೌಕರ್ಯವಿರುವುದರಿಂದಲೂ, ಗಂಧರ್ವರಿಗೆ ಮನುಷ್ಯರಿಗಿಂತಲೂ ಹೆಚ್ಚಿನ ಚಿತ್ತಶುದ್ಧಿಯುಂಟಾಗಬಹುದು. ಚಿತ್ತವು ಹೆಚ್ಚು ಶುದ್ಧಿಯಾಗುವುದರಿಂದ

ಆನಂದವೂ ಹೆಚ್ಚಾಗಿ ಅನುಭವಕ್ಕೆ ಬರುವುದು ಸ್ವಾಭಾವಿಕವೇ ಆಗಿದೆ. ಶ್ರೋತ್ರಿಯನೂ ನಿಷ್ಕಾಮನೂ ಆದ ಬ್ರಹ್ಮನಿಷ್ಠನಿಗೆ ಈ ಆನಂದವೂ ಇದೆ. ಮನುಷ್ಯ ಗಂಧರ್ವರ ಆನಂದದ ನೂರುಮಡಿ ಆನಂದವು ದೇವಗಂಧರ್ವರದು. ಶ್ರೋತ್ರಿಯನೂ ನಿಷ್ಕಾಮನೂ ಆದ ಬ್ರಹ್ಮನಿಷ್ಠನಿಗೆ ಈ ಆನಂದವೂ ಇದೆ. ದೇವ ಗಂಧರ್ವಾನಂದದ ನೂರುಪಟ್ಟು ಪಿತೃಗಳ ಆನಂದ; ಅವರ ಆನಂದದ ನೂರು ಪಟ್ಟು ಆಜಾನಜಾನ ದೇವತೆಗಳ ಆನಂದ; ಅದರ ನೂರುಪಟ್ಟು ಕರ್ಮ ದೇವತೆಗಳ ಆನಂದ; ಅದರ ನೂರುಪಟ್ಟು ದೇವತೆಗಳ ಆನಂದ; ಅದರ ನೂರುಪಟ್ಟು ಇಂದ್ರನ ಆನಂದ; ಇಂದ್ರಾನಂದದ ನೂರರಷ್ಟು ಬೃಹಸ್ಪತಿಯ ಆನಂದ; ಬೃಹಸ್ಪತ್ಯಾನಂದದ ನೂರರಷ್ಟು ಪ್ರಜಾಪತಿಯ ಆನಂದ; ಆ ಹಿರಣ್ಯಗರ್ಭ ಪ್ರಜಾಪತಿಯ ಆನಂದದ ನೂರರಷ್ಟು ಆನಂದವೇ **ಬ್ರಹ್ಮಾನಂದವು.** ಶ್ರೋತ್ರಿಯನೂ ನಿಷ್ಕಾಮನೂ ಆದ ಬ್ರಹ್ಮನಿಷ್ಠನಿಗೆ ಅನುಭವವಾಗಿರುವ ಪೂರ್ಣಾನಂದವೇ ಬ್ರಹ್ಮಾನಂದವು.

ಪ್ರತಿಯೊಂದು ಮೇಲುಮೇಲಿನ ಲೋಕದಲ್ಲಿಯೂ ಮನಸ್ಸು ಹೆಚ್ಚು ಹೆಚ್ಚು ಪರಿಶುದ್ಧವಾಗಿರುವುದರಿಂದ ಕೆಳಗಿನದೊಂದು ಲೋಕದಲ್ಲಿ ಅನುಭವಕ್ಕೆ ಬರುವ ಆನಂದಕ್ಕಿಂತಲೂ ನೂರುಪಟ್ಟು ಹೆಚ್ಚಿನ ಆನಂದವು ಅದರ ಮೇಲಿನ ಲೋಕದಲ್ಲಿ ಅನುಭವಕ್ಕೆ ಬರುತ್ತದೆ.

ಅಂತು, ಪುಣ್ಯಕರ್ಮಗಳ ಬಲದಿಂದಲೂ ಜ್ಞಾನಬಲದಿಂದಲೂ ಅಂತಃಕರಣದಲ್ಲಿ ಸತ್ತ್ವಗುಣವು ಹೆಚ್ಚುಹೆಚ್ಚಾಗಿ ಬೆಳೆದು, ಮನಸ್ಸು ಎಷ್ಟೆಷ್ಟು ನಿರ್ಮಲವೂ ನಿಶ್ಚಲವೂ ಆಗುವುದೋ, ಸರ್ವ್ವೊಳಗಿರುವ ನಮ್ಮ ಸ್ವರೂಪವೇ ಆದ ಬ್ರಹ್ಮಾನಂದವೂ ಅಷ್ಟಷ್ಟು ಅನುಭವಕ್ಕೆ ಬರುವುದು. ಹೆಚ್ಚುಹೆಚ್ಚಾದ ಪುಣ್ಯಬಲದಿಂದ ಹೆಚ್ಚುಹೆಚ್ಚಾದ ಲೋಕಗಳ ಪ್ರಾಪ್ತಿಯೂ, ಆಯಾ ಲೋಕಗಳಿಗೆ ತಕ್ಕನಾದ ಉತ್ತಮ–ಉತ್ತಮತರನಾದ ವಿಷಯೇಂದ್ರಿಯಗಳ ಉಪಾಧಿಗಳೂ ತನ್ಮೂಲಕವಾಗಿ ಅಧಿಕಾಧಿಕವಾಗಿ ಪ್ರತಿಫಲನವಾಗುವ ಆನಂದದ ತಾರತಮ್ಯಗಳೂ ಬ್ರಹ್ಮಾನಂದದ ಅಥವಾ ಸ್ವರೂಪಾನಂದದ ಅಂಶಗಳೇ ಆಗಿವೆ. ಆದರೆ ಶ್ರೋತ್ರಿಯನೂ ನಿಷ್ಕಾಮನೂ ಆದ ಬ್ರಹ್ಮನಿಷ್ಠನು ಯಾವ ಲೋಕಗಳಿಗೂ ಹೋಗದೇ ಇಲ್ಲಿಯೇ ಈಗಲೇ ಆ ಲೋಕಲೋಕಾಂತರದ ಆನಂದಗಳ ಒಟ್ಟೂ, ಅತಿ ಮಿಗಿಲೂ ಆದ ಅಪಾರ ಬ್ರಹ್ಮಾನಂದವನ್ನು ಅನುಭವಿಸುತ್ತಾನೆ.

ಭಕ್ತಿಯೋಗವಲ್ಲಿ ಇದು ಕೇವಲ ಅನನ್ಯವೂ ಉತ್ಕಟವೂ ಆದ ಪ್ರೇಮದಿಂದ ಸಾಧ್ಯವಾಗುತ್ತದೆ.

**" ಆನಂದೋ ಬ್ರಹ್ಮೇತಿ ವ್ಯಜಾನಾತ್ । ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ .... . .... ವಿಶಂತೀತಿ । "** ಎಂದು ತೈತ್ತಿರೀಯದಲ್ಲಿ ಹೇಳಿರುವಂತೆ ಆನಂದವೇ ಬ್ರಹ್ಮವು; ಆನಂದದಿಂದಲೇ ಜೀವಿಸಿ ಆನಂದದಲ್ಲಿಯೇ ಸೇರಿ ಸಮರಸವಾಗುತ್ತವೆ.

ಇಂತಹ ಬ್ರಹ್ಮಾನಂದಾನುಭವದಿಂದ ಮುಕ್ತರಾಗುವುದೇ ಮಾನವ ಜನ್ಮದ ಪರಮೋದ್ದೇಶ. ಇದಕ್ಕೆ ಭಕ್ತಿಯೇ ಶ್ರೇಷ್ಠವಾದ ಸಾಧನ.

ಆಚಾರ್ಯ ಶಂಕರರೂ ಹೀಗೆಯೇ ಹೇಳಿದ್ದಾರೆ.

**ಮೋಕ್ಷಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ ।**
**ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೇ ॥**

" ಮೋಕ್ಷಸಂಪಾದನೆಗೆ ಸಾಧನವಾದ ಅನೇಕ ಸಾಮಗ್ರಿಗಳಲ್ಲಿ ಭಕ್ತಿಯೇ ಶ್ರೇಷ್ಠವಾದುದು. ತನ್ನ ಸ್ವರೂಪದ ಧ್ಯಾನವೇ ಭಕ್ತಿಯೆನಿಸಿಕೊಳ್ಳುತ್ತದೆ."

ಮೋಕ್ಷಕ್ಕೆ ಮುಖ್ಯವಾದ ಸಾಧನಗಳು ನಾಲ್ಕು; ಕರ್ಮಯೋಗ, ಭಕ್ತಿಯೋಗ, ರಾಜಯೋಗ ಮತ್ತು ಜ್ಞಾನಯೋಗ.

ಕರ್ಮಯೋಗದ ಅನುಷ್ಠಾನಕ್ಕೆ ದೇಶ, ಕಾಲ, ವಸ್ತು ಮೊದಲಾದ ಅನೇಕ ಸಾಧನ ಸಾಮಗ್ರಿಗಳು ಬೇಕು. ಇದು ಎಲ್ಲರಿಗೂ ಎಲ್ಲಾ ಕಾಲದಲ್ಲಿಯೂ ಕೊರತೆಯಿಲ್ಲದೆ ದೊರೆಯುವುದಿಲ್ಲ. ಬಡವರಿಗೂ ಅಂಗಹೀನರಿಗೂ ಹಲವು ಬಿಕ್ಕಟ್ಟಿನ ಸಂದರ್ಭಗಳಲ್ಲಿ ತಮ್ಮ ಕರ್ತವ್ಯವನ್ನು ತಾವು ನಿಶ್ಚಯಿಸಲಾರದವರಿಗೂ ಕರ್ಮಯೋಗವು ಸುಲಭವಲ್ಲ.

ಯಮ-ನಿಯಮಾದಿ ಅಷ್ಟಾಂಗ ಯೋಗದಲ್ಲಿ ನಿಷ್ಣಾತನಾದ ಸಿದ್ಧಗುರುವಿನ ಸನ್ನಿಧಿಯಲ್ಲಿಯೇ ನಿರ್ಜನವಾದ ಅರಣ್ಯಾಶ್ರಮದಲ್ಲಿದ್ದು ಕೇವಲ ಬ್ರಹ್ಮಚರ್ಯ ಪಾಲನದಿಂದಲೂ ಯುಕ್ತಾಹಾರ-ವಿಹಾರಗಳಿಂದಲೂ, ಯಮನಿಯಮಾದಿ ಧಾರಣಾ ಧ್ಯಾನ ಸಮಾಧಿಗಳ ಅಭ್ಯಾಸದಿಂದಲೂ ರಾಜಯೋಗವನ್ನು

ಸಾಧಿಸಬೇಕು. ಇದಕ್ಕೆ ಅನುಕೂಲವಾದ ಸ್ವಭಾವ–ಸನ್ನಿವೇಶ–ಸಂಯಮಗಳು ನೂರು ಜನ ಮುಮುಕ್ಷುಗಳಲ್ಲಿ ಇಬ್ಬರಿಗಾದರೂ ಇರುವುದು ಕಠಿಣವಾಗಿದೆ.

ನಿರಂತರದಲ್ಲಿಯೂ ನಿತ್ಯಾನಿತ್ಯ ವಸ್ತುಗಳ, ಸತ್ಯಾಸತ್ಯಗಳ ಮತ್ತು ಆತ್ಮಾನಾತ್ಮಗಳ ವಿವೇಚನೆಯನ್ನು ಮಾಡುತ್ತಾ ಅನಿತ್ಯವೂ ಅಸತ್ಯವೂ ಅನಾತ್ಮವೂ ಆದವುಗಳನ್ನು ನಿರ್ಮೋಹದಿಂದ ನಿರಾಕರಿಸಿ ನಿತ್ಯಸತ್ಯವಾದ ಆತ್ಮವನ್ನೇ ಶುದ್ಧಬುದ್ಧಿಯಿಂದ ಅಖಂಡವಾಗಿ ಅನುಸಂಧಾನ ಮಾಡಬೇಕಾಗಿರುವ ಜ್ಞಾನಯೋಗದಲ್ಲಿ ಪರಿಶುದ್ಧವೂ ತೀಕ್ಷ್ಣವೂ ಆದ ಪ್ರಜ್ಞೆಯೂ ತೀವ್ರ ವೈರಾಗ್ಯವೂ ಅಗತ್ಯವಾಗಿವೆ. ಗೀತೆಯಲ್ಲಿ ಹೇಳಿರುವಂತೆ,

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥**

ಜ್ಞಾನಯೋಗದ ಅಭ್ಯಾಸಕ್ಕೆ ಬೇಕಾದ ಯೋಗ್ಯತೆಯು ಸಹಸ್ರಾರು ಮುಮುಕ್ಷು ಜನರಲ್ಲಿ ಒಬ್ಬರಿಗಿರುವುದೂ ದುರ್ಲಭ.

ಇನ್ನು ಉಳಿದಿರುವುದು ಭಕ್ತಿಯೋಗ.

ಯಾರ ಸ್ವಭಾವವು ಹೇಗೇ ಇರಲಿ, ಅವರ ಲೌಕಿಕ ಸಂನಿವೇಶಗಳೂ, ಯೋಗ್ಯತೆಗಳೂ ಏನೇ ಇರಲಿ, ಬಂಧದಲ್ಲಿರುವ ಜೀವರೆಲ್ಲಾ—ಇಚ್ಛೆಯೂ, ಪ್ರಯತ್ನವೂ ಮಾತ್ರ ಇದ್ದರೆ—ಮುಕ್ತರಾಗುವುದಕ್ಕೆ ಯಾವುದು ಸುಲಭವಾದ ಸಾಧನವೋ ಅದೇ ಶ್ರೇಷ್ಠ ಸಾಧನವೆನಿಸುತ್ತದೆ. ಇಂಥಾ ಸಾಧನವೇ ಭಕ್ತಿ.

ನಾರದರೂ ತಮ್ಮ ಭಕ್ತಿಸೂತ್ರದಲ್ಲಿ:

**" ಅನ್ಯಸ್ಮಾತ್ ಸೌಲಭ್ಯಂ ಭಕ್ತೌ ॥ "**

"ಇತರ ಸಾಧನೆಗಳಿಗಿಂತಲೂ ಹೆಚ್ಚಿನ ಅನುಕೂಲತೆಯೂ ಸೌಲಭ್ಯವೂ ಭಕ್ತಿಯಲ್ಲಿವೆ" ಎಂದು ಹೇಳಿದ್ದಾರೆ. ಭಕ್ತಿಯೋಗ ಸಾಧನೆಗೆ ಭಕ್ತಿಯ ಬೀಜವಾದ ಪ್ರೇಮವೊಂದಿದ್ದರೆ ಸಾಕು. ಆ ಪ್ರೇಮವನ್ನೇ ಬೆಳಸಿಕೊಂಡರಾಯಿತು. ಜ್ಞಾನಯೋಗದಲ್ಲಿ ಶಾಸ್ತ್ರಾರ್ಥ ವಿಚಾರವನ್ನು ಗುರುಮುಖದಿಂದ ಮಾಡಿ ಅನಾತ್ಮ ವಸ್ತುಗಳ ದೃಢವಾದ ನಿರಾಕರಣದಿಂದ ಆತ್ಮವಸ್ತುವಿನ ಧಾರಣವನ್ನು

ಪಡೆದು ತತ್ತ್ವಜ್ಞಾನದ 'ಪರಾನಿಷ್ಠೆ'ಯನ್ನು ಸಂಪಾದಿಸಬೇಕು. ಇದಕ್ಕೆ ಶ್ರವಣಾದಿಗಳೇ ಸಾಧನವೂ ಬ್ರಹ್ಮಾತ್ಮರ ಐಕ್ಯಜ್ಞಾನವೇ ಸಿದ್ಧಿಯೂ ಆಗಿವೆ. ಕರ್ಮಯೋಗಕ್ಕೆ ಶರೀರ ಶ್ರಮವೂ, ಧನವೂ, ದ್ರವ್ಯಗಳೂ ಬೇಕಾಗುತ್ತವೆ. ಇದರಲ್ಲಿ ಯಜ್ಞ, ದಾನ, ತಪಸ್ಸುಗಳೇ ಸಾಧನವೂ, ಚಿತ್ತಶುದ್ಧಿಯೇ ಫಲವೂ ಆಗಿವೆ. ರಾಜಯೋಗದಲ್ಲಿ ಯಮನಿಯಮಾದಿಗಳೇ ಸಾಧನವೂ, ಸಮಾಧಿ ಸಂಪಾದನೆಯೇ ಫಲವೂ ಆಗಿವೆ. ಆದರೆ ಭಕ್ತಿಯೋಗದಲ್ಲಿ ಸಾಧನವೂ ಪ್ರೇಮವೇ, ಅದರ ಫಲವೂ (ಅಪಾರವೂ ಅನಿರ್ವಚನೀಯವೂ ಆದ ಪರ ಮಾತ್ಮನ) ಪ್ರೇಮಸ್ವರೂಪವೇ ಆಗಿದೆ. ಭಕ್ತಿಯೋಗದ ಜೀವಾಳವಾದ ಪ್ರೇಮವು ಎಲ್ಲಾ ಪ್ರಾಣಿಗಳಲ್ಲಿಯೂ ತಪ್ಪದೇ ಇರುವುದರಿಂದಲೇ ಭಕ್ತಿಯು ಎಲ್ಲರಿಗೂ ಸುಲಭವಾದ ಸಾಧನವಾಗಿದೆ. ಅಲ್ಲದೆ ಭಕ್ತನು ಹೊಂದಬೇಕಾ ಗಿರುವ ಪರಮಾತ್ಮನೂ ಪ್ರೇಮಸ್ವರೂಪನೇ ಆಗಿದ್ದಾನೆ.

ಪ್ರೇಮವಿಲ್ಲದ ಪ್ರಾಣಿಯೇ ಇಲ್ಲ. ಇದು ಹೇಗೆಂಬುದನ್ನು ವಿಚಾರ ಮಾಡೋಣ.

ಪ್ರತಿಯೊಂದು ಪ್ರಾಣಿಯಲ್ಲಿಯೂ ಅನ್ನಮಯ ಕೋಶದಿಂದ ಒಳಗಡೆ ಆನಂದಮಯದವರೆಗೂ ಒಂದಕ್ಕಿಂತಲೂ ಇನ್ನೊಂದು ಸೂಕ್ಷ್ಮವೂ ವ್ಯಾಪಕವೂ ಪ್ರತ್ಯಗಾತ್ಮನಿಗೆ ಸಮೀಪವೂ ಪ್ರಭಾವಶಾಲಿಯೂ ಆದ ಕೋಶವಾಗಿದೆ. ಒಂದ ರೊಳಗೊಂದಿರುವ ಐದು ಚೀಲಗಳ ಒಳಗಡೆ ಗೂಢವಾಗಿರುವ ಅನರ್ಘ್ಯ ರತ್ನ ದಂತೆ ಆತ್ಮನಿದ್ದಾನೆ. ನಾನು ಎಂಬ ಜ್ಞಾನವು ವಿಜ್ಞಾನಮಯ ಕೋಶದ ವೃತ್ತಿಯಾದ್ದರಿಂದ ಆನಂದಮಯ ಕೋಶದ ವೃತ್ತಿಯಾದ ಪ್ರೇಮವು ಅದರ ಹಿನ್ನೆಲೆಯಲ್ಲಿ ಅದನ್ನು ವ್ಯಾಪಿಸಿಕೊಂಡು ಎಡೆಬಿಡದೇ ಇರುತ್ತದೆ. ಆದ್ದರಿಂದ ನಾನು ಎಂಬ ಜ್ಞಾನವಿರುವಲ್ಲೆಲ್ಲಾ ತನ್ನ ಮೇಲಿನ ಪ್ರೇಮವು ತನಗೆ ತಪ್ಪದೇ ಇರುತ್ತದೆ. ಪ್ರತಿಯೊಂದು ಪ್ರಾಣಿಯಲ್ಲಿಯೂ ತನ್ನ ಇರುವಿಕೆಯ ಜ್ಞಾನ ವಿರುವುದರಿಂದ ಅದಕ್ಕೆ ತನ್ನ ಮೇಲಿನ ಪ್ರೇಮವೂ ತನಗಾಗಿ ಇನ್ನೊಂದರ ಮೇಲಿನ ಪ್ರೇಮವೂ ಇರುವುದು ಸ್ವಾಭಾವಿಕವಾಗಿದೆ.

ಪ್ರಪಂಚದ ಒಳಹೊರಗೆಲ್ಲಾ ಸಚ್ಚಿದಾನಂದ ರೂಪ ಆತ್ಮನೇ ತುಂಬಿರು ವುದರಿಂದ ಆತ್ಮನಿಲ್ಲದ ಪ್ರಾಣಿಯು ಹೇಗಿಲ್ಲವೋ ಹಾಗೆ ಪ್ರೇಮವಿಲ್ಲದ

ಪ್ರಾಣಿಯೂ ಇಲ್ಲ. ಆದರೆ ಆ ಪ್ರೇಮಭಾವವು ಆಯಾ ಪ್ರಾಣಿಗಳ ಸ್ವಭಾವ, ಸಂಸ್ಕಾರ, ಸಾಧನಾದಿಗಳಿಗೆ ಅನುಗುಣವಾಗಿ ಹೆಚ್ಚು-ಕಡಿಮೆ ಪ್ರಮಾಣದಿಂದ ಪ್ರಕಾಶವಾಗುತ್ತದೆ.

ಪ್ರೇಮಭಾವಕ್ಕೆ ವಿರೋಧವಾದ ಕ್ರೂರಸ್ವಭಾವವುಳ್ಳ ಹುಲಿ ಮೊದಲಾದ ಪ್ರಾಣಿಗಳಲ್ಲಿಯೂ, ರಾಕ್ಷಸಾದಿಗಳಲ್ಲಿಯೂ ಪ್ರೇಮವಿಲ್ಲವೆಂಬಂತೆ ತೋರ ಬಹುದು. ಆದರೆ ವಿಚಾರಮಾಡಿದರೆ ಅವುಗಳಲ್ಲಿಯೂ ಅವರಲ್ಲಿಯೂ ಪ್ರೇಮ ವಿಲ್ಲದೇ ಇಲ್ಲ. ಆ ಪ್ರೇಮವು ಬಹಳ ಸಂಕುಚಿತವಾಗಿದೆ, ಅಷ್ಟೆ. ಕ್ರೂರ ಸ್ವಭಾವದ ಪ್ರಾಣಿಗಳು ಬೇರೆ ಪ್ರಾಣಿಗಳಿಗೆ ಕ್ರೂರವಾಗಿ ಕಂಡು ಅವುಗಳನ್ನು ತಿಂದರೂ, ತಮ್ಮ ಮರಿಗಳನ್ನು ಪ್ರೇಮದಿಂದಲೇ ಪೋಷಿಸುತ್ತವೆ. ಘೋರ ಸ್ವಭಾವದ ರಾಕ್ಷಸರು ತಮ್ಮ ಸ್ವಾರ್ಥಕ್ಕಾಗಿ ಇತರರನ್ನು ಹಿಂಸಿಸಿದರೂ, ತಮ್ಮ ಕುಟುಂಬ ಪರಿವಾರದವರಿಗೆ ತಾವು ಪ್ರೇಮಿಗಳಾಗಿ ಪೋಷಕರಾಗಿಯೇ ಇರು ತ್ತಾರೆ. ಇನ್ನು ಆ ರಾಕ್ಷಸರಿಗಿಂತಲೂ ಕಡೆಯಾಗಿ ತಮ್ಮ ಕುಟುಂಬದವರಿಗೂ ತಾವು ಮಾರಿಗಳಾಗಿರುವವರುಂಟು. ಅಂಥಾ ನೀಚ ಸ್ವಾರ್ಥಿಗಳ ಪ್ರೇಮವು ಅತ್ಯಂತ ಸಂಕುಚಿತವಾಗಿ ಅವರ ದೇಹದ ಮಟ್ಟಿಗೇ ಮೀಸಲಾಗಿರುತ್ತದೆ. ಇನ್ನು ಕೆಲವರು ಜೀವನದಲ್ಲಿ ಅಪಜಯ, ಅಪಮಾನ, ಕಷ್ಟ, ನಷ್ಟ, ನಿಷ್ಠುರ, ನಿರಾಶೆಗಳನ್ನೂ ಜುಗುಪ್ಸೆಯನ್ನೂ ಹೊಂದಿ ಸ್ವೇಚ್ಛೆಯಿಂದ ಆಯುಷ್ಯವನ್ನು ಮುಗಿಸಿಕೊಳ್ಳುತ್ತಾರೆ. ಇದಕ್ಕೆ ರೂಢಿಯ ಮಾತಿನಲ್ಲಿ ಆತ್ಮಹತ್ಯೆಯೆನ್ನುತ್ತಾರೆ. ಆದರೆ ಸಾವಿಲ್ಲದ ಆತ್ಮನನ್ನು ( **ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ** । ಗೀತಾ) ಕೊಲ್ಲುವುದು ಸಾಧ್ಯವಿಲ್ಲವಾದರೂ ದೇಹಾದಿ ಗಳನ್ನೇ ಆತ್ಮನೆಂದು ತಪ್ಪಾಗಿ ತಿಳಿದವರು ತಮ್ಮ ಪ್ರಾಣದೇಹಗಳನ್ನು ಹತ್ಯ ಮಾಡಿಕೊಳ್ಳುವುದರಿಂದ ಆತ್ಮಹತ್ಯೆಯನ್ನೇ ಮಾಡಿಕೊಂಡಂತಾಯಿತು ಇಂಥಾ ಸಂದರ್ಭಗಳಲ್ಲಿ ತನ್ನನ್ನೇ ತಾನು ದ್ವೇಷಿಸುವುದು ಕಾಣುವುದರಿಂದ ತನ್ನಲ್ಲಿ ತನಗೆ ಪ್ರೇಮವಿಲ್ಲದೇ ಇರುವ ಸಂದರ್ಭವೂ ಉಂಟೆಂದು ತೋರುತ್ತದೆ. ಆದರೆ ತಾನೇ ಆತ್ಮನಾದ್ದರಿಂದ ಆತ್ಮನಿಲ್ಲದ ಸಮಯವು ಹೇಗಿಲ್ಲವೋ ಹಾಗೆ ತನ್ನ ಮೇಲೆ ತನಗೆ ಪ್ರೇಮವಿಲ್ಲದ ಸಂದರ್ಭವೂ ಇಲ್ಲವೇ ಇಲ್ಲ. ಆತ್ಮಹತ್ಯ ಮಾಡಿಕೊಳ್ಳತಕ್ಕವರ ದ್ವೇಷವಿರುವುದು ಅವರ ದೇಹ ಮತ್ತು ಅದರ ಪರಿ ಸ್ಥಿತಿಯ ಮೇಲೇ ಹೊರತು ಆತ್ಮನ ಮೇಲೆ ಅಲ್ಲ.

ಅತ್ತೆಯು ಕಾಟವನ್ನು ಸಹಿಸುವುದಕ್ಕಾಗಲೀ ತಪ್ಪಿಸಿಕೊಳ್ಳುವುದಕ್ಕಾಗಲೀ ಸಾಧ್ಯವಿಲ್ಲದೇ ಸೊಸೆಯು ನೇಣುಹಾಕಿಕೊಂಡೋ, ನೀರಿನಲ್ಲಿ ಮುಳುಗಿಯೋ, ವಿಷಪ್ರಾಶನ ಮಾಡಿಯೋ ಪ್ರಾಣ ಕಳೆದುಕೊಳ್ಳಬಹುದು. ಇಂಥ ಸಂದರ್ಭ ದಲ್ಲಿ ಸೊಸೆಗೆ ದ್ವೇಷವಿರುವುದು ತನ್ನ ಅತ್ತೆಯ ಮೇಲೂ, ಸೊಸೆಯಾದ ತನ್ನ ದೇಹದ ಮೇಲೂ ಹೊರತು ತನ್ನ ಮೇಲೆಯೇ ಅಲ್ಲ. ಆಕೆಗೆ ತಿಳಿಯದಿದ್ದರೂ ಆಕೆಯ ಆ ಹುಚ್ಚು ಸಾಹಸದಲ್ಲಿ ದುಃಖಕಾರಣವಾದ ತನ್ನ ದೇಹವು ತಾನಲ್ಲ ವೆಂಬ ನಿಜದರ್ಶನವು ಅಡಗಿದಂತಿದೆ. ಬಾಧಕವಾದ ತನ್ನ ದೇಹವನ್ನು ಕಳೆದು ಕೊಂಡರೆ, ತಾನು ಸುಖವಾಗಿರಬಹುದೆಂಬ ಆತ್ಮಪ್ರೇಮವೇ ಆಕೆಯ ಕೃತಿಯಲ್ಲಿ ಗೂಢವಾಗಿದೆ. ಹೀಗೆ ಜೀವನಕಾಲದಲ್ಲಿಯೂ ದೇಹಪಾತಾನಂತರವೂ ಎಡೆ ಬಿಡದೇ ನಮ್ಮಲ್ಲಿರುವ ಪ್ರೇಮಗುಣವೇ ನಮ್ಮ ಸ್ವರೂಪವೆಂಬುದಕ್ಕೆ ಯಾವ ಸಂದೇಹವೂ ಇಲ್ಲ. ಆದ್ದರಿಂದ ಪ್ರೇಮವಿಲ್ಲದ ಪ್ರಾಣಿಯೇ ಇಲ್ಲ. ಪ್ರೇಮವೇ ಸಾಧನವಾದ ಭಕ್ತಿಯೋಗವು ಇದರಿಂದಲೇ ಸರ್ವಸುಲಭವೂ ಸರ್ವಶ್ರೇಷ್ಠವೂ ಆಗಿದೆ.

ಪ್ರೇಮಸ್ವರೂಪನಾದ ಆತ್ಮನ ಪ್ರೀತಿಗಾಗಿಯೂ, ಸುಖಕ್ಕಾಗಿಯೂ ಸರ್ವವೂ ಪ್ರಿಯವಾಗುವುವು. ಬೃಹದಾರಣ್ಯಕೋಪನಿಷತ್ತಿನಲ್ಲಿ ಯಾಜ್ಞ ವಲ್ಕ್ಯನು ಮೈತ್ರೇಯಿಗೆ ಹೇಳುವುದೇನೆಂದರೆ,

**“ನ ವಾ ಅರೇ! ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ। ನ ವಾ ಅರೇ! ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ। ನ ವಾ ಅರೇ! ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವಂತ್ಯಾತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವಂತಿ। ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವಂತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ।”**

“ಪತಿಯ ಪ್ರೇಮಕ್ಕಾಗಿಯೇ ಪತಿಯು ಪ್ರಿಯನಾಗುವುದಿಲ್ಲ. ಪತ್ನಿಗೆ ತನ್ನ ಪ್ರೇಮಕ್ಕಾಗಿಯೇ ಪತಿಯು ಪ್ರಿಯನಾಗುತ್ತಾನೆ. ಪತ್ನಿಯ ಸುಖಕ್ಕಾ ಗಿಯೇ ಪತ್ನಿಯು ಪ್ರಿಯಳಾಗುವುದಿಲ್ಲ, ಪತಿಗೆ ತನ್ನ ಸುಖಕ್ಕಾಗಿಯೇ ಪತ್ನಿ

ಪ್ರಿಯಳಾಗುತ್ತಾಳೆ. ಮಕ್ಕಳ ದೆಸೆಯಿಂದಲೇ ಮಕ್ಕಳು ಪ್ರಿಯರಾಗುವುದಿಲ್ಲ. ಮಾತಾಪಿತೃಗಳಿಗೆ ತಮ್ಮ ದೆಸೆಯಿಂದಲೇ ಮಕ್ಕಳು ಪ್ರಿಯರಾಗುತ್ತಾರೆ ಎಲ್ಲವೂ ಅವುಗಳಿಗಾಗಿಯೇ ಪ್ರಿಯವಾಗುವುದಿಲ್ಲ. (ನಮಗೆ ನಮ್ಮ ದೆಸೆಯಿಂದಲೇ ನಮ್ಮ ಸುಖಕ್ಕಾಗಿಯೇ ನಮ್ಮ ಪ್ರೇಮಕ್ಕಾಗಿಯೇ) ನಮಗಾಗಿಯೇ ಎಲ್ಲವೂ ಪ್ರಿಯವಾಗುವುವು."

ಹೀಗೆ ನಮ್ಮ ದೆಸೆಯಿಂದಲೇ. ನಮಗಾಗಿಯೇ ಲೋಕವೆಲ್ಲಾ ಪ್ರಿಯವಾಗುವುದರಿಂದ ಸ್ವತಃ ನಾವೇ ಪರಮಪ್ರೇಮಸ್ವರೂಪರೆಂಬುದು ಸಿದ್ಧವಾಗುತ್ತದೆ. ಸ್ವತಃ ಸಿದ್ಧವಾದ ನಮ್ಮ ಪ್ರೇಮಸ್ವರೂಪವು ಎಷ್ಟು ಅಗಾಧವೂ, ಅಪಾರವೂ ಪವಿತ್ರವೂ ಇದೆಯೆಂಬುದನ್ನು ನಾವು ಮರೆತಿರುವುದರಿಂದ ಅದನ್ನು ಅರಿತು ಅದರಲ್ಲಿಯೇ ಸ್ಥಿರಭಾವವನ್ನು ಹೊಂದಬೇಕಾಗಿದೆ. ಇದಕ್ಕಾಗಿ ತಪ್ಪು ತಿಳಿವಳಿಕೆಯಿಂದ ನಮ್ಮ ಪ್ರೇಮದಲ್ಲಿಯೇ ನಾವು ಕಲ್ಪಿಸಿಕೊಂಡಿರುವ ಅಭಿಮಾನದ ಆವರಣವನ್ನೂ ಚಾಪಲ್ಯವನ್ನೂ ಕಿತ್ತೊಗೆಯಬೇಕು. ಪ್ರೇಮವು ವಿಶಾಲವೂ ಗಂಭೀರವೂ ಆಗಬೇಕು. ಪ್ರೇಮವು ವಿಶಾಲವಾಗುವುದರಿಂದ ಅಭಿಮಾನದ ಆವರಣವೂ, ಅದು ಗಭೀರವಾಗುವುದರಿಂದ ಚಾಪಲ್ಯವೂ ನಾಶವಾಗುತ್ತವೆ. ಆವರಣ, ವಿಕ್ಷೇಪ (ಚಾಪಲ್ಯ) ಶಕ್ತಿಗಳೇ ದುಃಖಕ್ಕೆ ಕಾರಣವಾದವುಗಳು. ಪ್ರವೃತ್ತಿಧರ್ಮಸಾಧನೆಯಿಂದ ಪ್ರೇಮವು ವಿಶಾಲವೂ, ನಿವೃತ್ತಿಧರ್ಮಸಾಧನೆಯಿಂದ ಅದು ಗಂಭೀರವೂ ಏಕಾಗ್ರವೂ ಆಗಬೇಕು.

**" ದ್ವಿವಿಧೋ ಹಿ ವೇದೋಕ್ತೋ ಧರ್ಮಃ ।**
**ಪ್ರವೃತ್ತಿ ಲಕ್ಷಣೋ ನಿವೃತ್ತಿಲಕ್ಷಣಶ್ಚ ಜಗತಸ್ಥಿತಿಕಾರಣಂ । "**

" ಜಗತ್ತಿನ ಸುಸ್ಥಿತಿಗೂ ಜೀವರ ಉನ್ನತಸ್ಥಿತಿಗೂ ಮುಕ್ತಸ್ಥಿತಿಗೂ ಸಾಧನವಾಗಿರುವ ವೇದೋಕ್ತಧರ್ಮವು ಪ್ರವೃತ್ತಿಲಕ್ಷಣವುಳ್ಳುದೆಂದೂ ನಿವೃತ್ತಿಲಕ್ಷಣವುಳ್ಳುದೆಂದೂ ಎರಡು ಬಗೆಯಾಗಿದೆ" ಎಂದು ಆಚಾರ್ಯ ಶಂಕರರು ತಮ್ಮ ಗೀತಾಭಾಷ್ಯದ ಉಪೋದ್ಘಾತದಲ್ಲಿ ಹೇಳಿದ್ದಾರೆ. ಪ್ರೇಮವು ದುಃಖವನ್ನು ತಪ್ಪಿಸಿಕೊಂಡು ಮುಕ್ತಸ್ಥಿತಿಯನ್ನು ಹೊಂದಬೇಕಾದರೆ ಪ್ರವೃತ್ತಿಧರ್ಮವನ್ನೂ ನಿವೃತ್ತಿಧರ್ಮವನ್ನೂ ಸಾಧಿಸಬೇಕು.

ಮೊದಲು ಪ್ರವೃತ್ತಿಸಾಧನೆಯನ್ನು ತೆಗೆದುಕೊಳ್ಳೋಣ.

ನಿತ್ಯವೂ ನಿದ್ರೆಯಿಂದ ಎಚ್ಚರವಾದ ಕೂಡಲೇ ಪ್ರಜ್ಞೆಯು ಮೊದಲು ನಮ್ಮ ದೇಹದಲ್ಲಿ ಪ್ರಸರಿಸುತ್ತದೆ. 'ಸ್ವಿಚ್' ಹಾಕಿದ ಕೂಡಲೇ ಎಲೆಕ್ಟ್ರಿಕ್ ಬಲ್ಬಿನಲ್ಲಿ ಲೈಟ್ ಹತ್ತುವಾಗ ಬಲ್ಬಿನಲ್ಲಿರುವ ತಾಮ್ರತಂತಿಯ ಕೇಸರ (ಕಾಪರ್ ಫಿಲಮೆಂಟ್ಸ್)ಗಳಲ್ಲಿ ವಿದ್ಯುಚ್ಛಕ್ತಿಯು ವೇಗವಾಗಿಯಾದರೂ ಕ್ರಮಕ್ರಮವಾಗಿ ಪ್ರಸರಿಸುತ್ತಿರುವುದನ್ನು ತಂತಿಯ ಕುಸುರುಗಳು ಕೆಂಪುಕೆಂಪಗೆ ಕಾಯುತ್ತಾ ಬೆಳ್ಳಗೆ ಕಾದು ಶಾಖ-ಪ್ರಕಾಶಗಳನ್ನು ಕೊಡುವುದರಿಂದ ಕಾಣಬಹುದು. ಹಾಗೆಯೇ ವಿವೇಕಿಯಾದವನು ನಿದ್ರೆಯಿಂದ ಎಚ್ಚರಗೊಳ್ಳುತ್ತಿರುವಾಗ ಸಾವಧಾನವಾಗಿ ಸಾಧನಬಲದಿಂದ ತನ್ನೊಳಗೆ ತಾನೇ ನಿರೀಕ್ಷಣೆಮಾಡುತ್ತಿದ್ದರೆ, ತನ್ನ ಚೈತನ್ಯವು ಹೇಗೆ ಮಸ್ತಕದಿಂದ ಪಾದದವರೆಗೂ ದೇಹೇಂದ್ರಿಯಗಳ ಸಮಸ್ತ ನರನಾಡೀ ಜಾಲಗಳಲ್ಲಿ ಝುಗ್‌ಝುಗ್ಗನೆ ಜೀವಜ್ವಲನವನ್ನೂ ಉತ್ತೇಜನವನ್ನೂ ಉಂಟುಮಾಡುತ್ತಾ ಶೀಘ್ರವಾಗಿಯಾದರೂ ಪರಂಪರೆಯಾಗಿ ಪ್ರಸರಿಸುತ್ತಿರುವುದನ್ನು ಸ್ಪಷ್ಟವಾಗಿ ಅರಿಯಬಹುದು. ಧಾರಣಾ-ಧ್ಯಾನ-ಸಮಾಧಿಗಳನ್ನು ಅಭ್ಯಾಸಮಾಡಿರುವ ಸಂಯಮಿಗೆ ಸಮಾಹಿತಸ್ಥಿತಿಯಿಂದ ಬಹಿರ್ಮುಖನಾಗುವಾಗ ಈ ಚೈತನ್ಯ (ಪ್ರಜ್ಞಾಶಕ್ತಿ-ಪ್ರಾಣಶಕ್ತಿಗಳ) ಪ್ರಸರಣ ವಿಲಾಸವು ಚೆನ್ನಾಗಿ ಅನುಭವಕ್ಕೆ ಬರುತ್ತದೆ.

ಈ ಚೈತನ್ಯ ಪ್ರಸರಣವು ದೇಹೇಂದ್ರಿಯಗಳಲ್ಲಿ 'ನಾನು' ಎಂಬ ವೃತ್ತಿ-ಜ್ಞಾನ ರೂಪದಲ್ಲಿರುತ್ತದೆ. ಇದು ವಿಜ್ಞಾನಮಯಕೋಶದ ಕಾರ್ಯವಾಗಿದೆ. ಜಾಗ್ರತವಾದ ಪ್ರಜ್ಞಾಶಕ್ತಿ ಪ್ರಾಣಶಕ್ತಿಗಳು ಆನಂದಮಯಕೋಶದಲ್ಲಿಯೂ ಉತ್ತೇಜನ ಮಾಡಿ ಚಟುವಟಿಕೆಯನ್ನು ಹುಟ್ಟಿಸುವುದರಿಂದ 'ನಾನು' ಎಂಬ ಜ್ಞಾನದ ಮೂಲಕ ಆನಂದಮಯ ಕೋಶದ ಪ್ರಿಯವೃತ್ತಿಯೂ ಪ್ರತಿಫಲನವಾಗಿ ದೇಹವನ್ನು 'ನಾನು' 'ನನ್ನ'ದೆಂದು ಪ್ರೀತಿಯಿಂದ ಅಭಿಮಾನಿಸುತ್ತೇವೆ. ಹಿಂದೆಯೇ ಹೇಳಿರುವಂತೆ ಆನಂದಚಂದ್ರನ ಕಾಂತಿಯಂತಿರುವ ಪ್ರೇಮವೂ ಸುಖಮಯವಾಗಿಯೇ ಇರುವುದರಿಂದ ನಮ್ಮ ಅಭಿಮಾನದಲ್ಲಿ ನಮಗರಿವಿಲ್ಲದಂತೆ ಸುಖವು ತೋರುತ್ತದೆ. ನಾವು ದೇಹೇಂದ್ರಿಯಗಳನ್ನಾಗಲೀ ಯಾವ ವಿಷಯವನ್ನಾಗಲೀ ಅಭಿಮಾನಿಸುವುದು ನಮ್ಮ ಸುಖಕ್ಕಾಗಿಯೇ ಆಗಿದೆ. ಒಳಗಿರುವ ಜೀವರಾದ ನಾವು ನಮ್ಮನ್ನು ಪ್ರೇಮಾನಂದ ಸ್ವರೂಪಿಗಳೆಂಬುದನ್ನು

ತಿಳಿಯದೇ ನಮ್ಮ ಸುಖಕ್ಕಾಗಿ ದೇಹೇಂದ್ರಿಯಗಳನ್ನು ನಾವು ನಮ್ಮದೆಂದು ಅಭಿಮಾನಿಸುತ್ತೇವೆ. ಅಷ್ಟೇ ಸಾಕಾಗದೇ ಆ ದೇಹೇಂದ್ರಿಯಗಳ ಸುಖಕ್ಕಾಗಿ ಪತ್ನೀ ಪುತ್ರ ಮಿತ್ರ ಭೃತ್ಯಾದಿಗಳನ್ನು ಅಭಿಮಾನಿಸುತ್ತೇವೆ. ಅಲ್ಲಿಗೂ ತೃಪ್ತಿಯಾಗದೇ ನಮ್ಮ ಮತ್ತು ಅವರ ಸುಖಗಳಿಗಾಗಿ ಭೋಗಭಾಗ್ಯಗಳನ್ನು ಅಭಿಮಾನಿಸಿ ಸಂಪಾದಿಸುತ್ತೇವೆ. ಅಂತು, ಅಭಿಮಾನವನ್ನೂ ಅದಕ್ಕೆ ಗುರಿಯಾದ ಇಷ್ಟವಸ್ತುಗಳನ್ನೂ ವ್ಯಕ್ತಿಸಂಬಂಧವನ್ನೂ ಬೆಳೆಸುವುದರಿಂದ ನಮ್ಮ ಸುಖವೂ ಬೆಳೆಯುವುದೆಂಬ ಭಾವನೆಯು ನಮ್ಮ ಹೃದಯದಲ್ಲಿ ಅಡಗಿದೆಯೆಂಬುದು ನಮ್ಮ ವ್ಯವಹಾರವನ್ನು ಒಳಹೊಕ್ಕು ವಿಮರ್ಶೆಮಾಡಿದಾಗ ತಿಳಿಯುತ್ತದೆ. ಮನೋಮುಖದಿಂದಲೂ ಇಂದ್ರಿಯಮುಖದಿಂದಲೂ ಹೊರಹೊರಗೇ ಹರಿಯಲು ಹೊರಟಿರುವ ನಮ್ಮ ಪ್ರೇಮದಲ್ಲಿ ಈ ಪ್ರವೃತ್ತಿಯಿರುವುದು ಸ್ವಾಭಾವಿಕವಾಗಿದೆ. ಈ ಒಲವಿನಲ್ಲಿಯೂ ಸೆಳೆವಿನಲ್ಲಿಯೂ ದೋಷವನ್ನೂ ದುಃಖವನ್ನೂ ನೋಡಿ ಆ ವೃತ್ತಿಪ್ರವಾಹವನ್ನು ತಡೆಗಟ್ಟಿ ತನ್ನೊಳಗೇ ಹಿಮ್ಮುಖವಾಗಿ ಹರಿಸಿ ಮೂಲಸ್ವರೂಪವನ್ನು ಮುಟ್ಟುವಂತೆ ಪ್ರಯತ್ನಿಸುವುದೇ ನಿವೃತ್ತಿಮಾರ್ಗವು. ಇದು ಬಹಳ ಕಷ್ಟಸಾಧ್ಯ: ಮಹಾಪುಣ್ಯಶಾಲಿಗಳಾದ ಕೆಲವರಿಗೆ ಮಾತ್ರ ಸಾಧ್ಯ. ಇದೇ ಜ್ಞಾನವೈರಾಗ್ಯಗಳ ಮಾರ್ಗ ಅಥವಾ ಪರಾಭಕ್ತಿ-ವಿರಕ್ತಿಗಳ ಮಾರ್ಗ. ಆದರೆ, ಮೋಕ್ಷಲಾಭವಾಗುವುದು ಇದರಿಂದಲೇ. ಈ ಮಾರ್ಗಕ್ಕೆ ಸಾಧನವಾಗಿಯೇ ಪ್ರವೃತ್ತಿಧರ್ಮವೂ ಕರ್ಮಯೋಗವೂ ಧ್ಯಾನಯೋಗವೂ ಗೌಣಭಕ್ತಿಯೋಗವೂ ಇವೆ.

ಹೊರಮುಖವಾಗಿ ಹರಿಯುತ್ತಿರುವ ಪ್ರೇಮಪ್ರವಾಹವನ್ನು ತಡೆಗಟ್ಟದೇ ಹೊರಗೇ ಸಮೃದ್ಧಿಯಾಗಿ ತುದಿಮುಟ್ಟುವಂತೆ ಹರಿಯಲು ಬಿಡಬೇಕು: ಅಂದರೆ ನಮ್ಮ ಪ್ರೇಮವನ್ನು ವಿಶ್ವವ್ಯಾಪಿಯನ್ನಾಗಿಯೂ ವಿಶ್ವಗ್ರಾಸಿಯನ್ನಾಗಿಯೂ ಮಾಡಬೇಕೇ ಹೊರತು, ಸಣ್ಣಪುಟ್ಟ ಕುಟುಂಬ ಪರಿವಾರಗಳಲ್ಲಿ ಅಡಗಿಸಿಡಬಾರದು. ಪ್ರೇಮವು ಕುಟುಂಬ ಪರಿವಾರಗಳಲ್ಲಿಯೇ ಅಡಗಿದ್ದರೆ ಅದು ಕ್ಷುದ್ರವಾದುದು. ಅದರಿಂದಾಗುವ ಸುಖವೂ ಅಲ್ಪವಾದುದು. ಆದ್ದರಿಂದ ನಮ್ಮ ಸುಖವು ಅಪಾರವಾಗಬೇಕಾದರೆ ನಮ್ಮ ಪ್ರೇಮವೂ ಅಥವಾ ಅಭಿಮಾನವೂ ಕುಟುಂಬದಿಂದ ಸಮಾಜಕ್ಕೂ, ಸಮಾಜದಿಂದ ಜನಾಂಗಕ್ಕೂ, ಜನಾಂಗದಿಂದ ಜಗತ್ತಿಗೂ ಅಥವಾ ಗೃಹದಿಂದ ನೆರೆಮನೆಗೂ, ನೆರೆಹೊರೆಯಿಂ

ಕೇರಿಗೂ, ಕೇರಿಯಿಂದ ಊರಿಗೂ, ಊರಿನಿಂದ ಪ್ರಾಂತ್ಯಕ್ಕೂ, ದೇಶಕ್ಕೂ, ರಾಷ್ಟ್ರಕ್ಕೂ, ಸರ್ವಜಗತ್ತಿಗೂ ಹಬ್ಬಿ ಹರಡಿ ತುಂಬಿಕೊಳ್ಳಬೇಕು.

**ಅಯಂ ನಿಜಃ ಪರೋವೇತಿ ಗಣನಾ ಲಘು ಚೇತಸಾಂ ।**
**ಉದಾರಚರಿತಾನಾಂತು ವಸುಧೈವ ಕುಟುಂಬಕಂ ॥**

“ಇವನು ನನ್ನವನು. ಇವನು ಪರಕೀಯನು ಎಂಬ ಗಣನೆಯೇ ಕ್ಷುದ್ರ ಜೀವಿಗಳದು; ಆದರೆ ಉದಾರ ಹೃದಯಿಗಳ ಭಾವನೆಯು ವಿಶ್ವವೇ ತನ್ನ ಕುಟುಂಬವೆಂದು ನೀತಿವಿದರು ಹೇಳುವಂತೆ ಪ್ರೇಮವು ವಿಶ್ವಾಕಾರವಾದರೆ ಸುಖವೂ ಅಪಾರವಾಗುತ್ತದೆ. ಏಕೆಂದರೆ ಅಲ್ಪಾಲ್ಪ ಭಾಗಗಳನ್ನು ನಾವು ಪ್ರೀತಿಸಿ ಸುಖಪಡುವಾಗ ಪ್ರಪಂಚದಲ್ಲಿ ನಮ್ಮ ಅಭಿಮಾನಕ್ಕೆ ಹೊರತಾದ ಭಾಗವೇ ಮಹತ್ತಾಗಿ ಉಳಿಯುವುದರಿಂದ ಪ್ರಪಂಚವನ್ನೆಲ್ಲಾ ಪ್ರೇಮಿಸುವುದ ರಿಂದ ಆಗುವ ಪೂರ್ಣ ಸುಖವಲ್ಲಿ ಆ ಮಹದ್ಭಾಗವು ಕಡಿಮೆಯೇ ಆಗುವುದು.

ಆದ್ದರಿಂದ ಪ್ರವೃತ್ತಿಧರ್ಮದಲ್ಲಿ ಪ್ರೇಮವೃತ್ತಿಯು ಪೂರ್ಣಪ್ರಪಂಚ ವ್ಯಾಪಕವಾಗಬೇಕು. ಆತ್ಮಹಿತಾರ್ಥವಾಗಿಯೂ ಜಗತ್ತಿನ ಹಿತಾರ್ಥವಾಗಿಯೂ ತನ್ನ ಕರ್ತವ್ಯವನ್ನು ಪರಿಪಾಲನೆ ಮಾಡುವುದೇ ಪ್ರವೃತ್ತಿಧರ್ಮ. ಆ ಕರ್ತವ್ಯ ಗಳನ್ನೇ ನಿರಭಿಮಾನದಿಂದ ನಿಸ್ಸಂಗವಾಗಿಯೂ ನಿಷ್ಕಾಮವಾಗಿಯೂ ಮಾಡು ವುದೇ ಕರ್ಮಯೋಗ. ಕರ್ತೃವಾದ ತನ್ನನ್ನೂ ತನ್ನ ಕರ್ಮವನ್ನೂ ಕರ್ಮ ಫಲವನ್ನೂ ಭಗವಂತನಿಗೆ ಅರ್ಪಣಮಾಡುವುದೇ ಭಕ್ತಿಯೋಗ. ಪ್ರಪಂಚ ವನ್ನೆಲ್ಲಾ ಪ್ರೇಮಿಸಿ ಸೇವಿಸುವುದು ಧರ್ಮವಾದರೆ, ಪ್ರಪಂಚವನ್ನೆಲ್ಲಾ ಪರ ಮಾತ್ಮನೆಂದು ಭಾವಿಸಿ, ಪೂಜಿಸಿ, ಸೇವಿಸುವುದು ಭಕ್ತಿಯೋಗ. ಜಗತ್ತನ್ನು ಜಗತ್ತೆಂದೇ ತಿಳಿದು ಸೇವಿಸುವುದು ರಾಷ್ಟ್ರಭಕ್ತಿ ಜಗದ್ಭಕ್ತಿಗಳಾಗಬಹುದೇ ಹೊರತು ಭಗವದ್ಭಕ್ತಿಯಾಗಲಾರದು. ಭಗವಂತನೇ ಜಗದ್ರೂಪದಿಂದ ತೋರು ತ್ತಿದ್ದಾನೆಂಬ ದೃಢವಾದ ಭಗವದ್ಭಾವದಿಂದ ಭಕ್ತಿಮಾಡಿದರೆ ಮಾತ್ರ ಜಗತ್ತಿನ ಪ್ರೀತಿ-ಸೇವೆಗಳು ಭಗವದ್ಭಕ್ತಿಯಾಗಬಲ್ಲವು. ಪ್ರವೃತ್ತಿ-ಧರ್ಮಾಚರಣೆ ಯಲ್ಲಿಯೇ ಭಗವದ್ಭಾವವೂ ಭಕ್ತಿಯೂ ಬಲಗೊಂಡು ಬೆಳೆದು ಪ್ರೇಮವನ್ನು ಏಕಾಂತವಾಗಿಯೂ ಏಕಾಗ್ರವಾಗಿಯೂ ಗಭೀರವಾಗಿಯೂ ಪರಮೋತ್ಕಟ ವಾಗಿಯೂ ಸಾಧಿಸುವುದಕ್ಕೆ ಸಹಾಯವಾಗುತ್ತದೆ.

ಪ್ರೇಮವಿಲ್ಲದ ಪ್ರಾಣಿಯೇ ಇಲ್ಲವೆಂದು ಹಿಂದೆ ತೋರಿಸಿರುವಂತೆ ಪ್ರೇಮವಿಲ್ಲದ ಪದಾರ್ಥವೇ ಇಲ್ಲವೆಂದೂ ತೋರಿಸಬಹುದು. ಚಿನ್ನದ ಗಟ್ಟಿಯೊಂದನ್ನು ಶಾಸ್ತ್ರೀಯ ಕ್ರಮದಿಂದ ಪುಡಿಪುಡಿಮಾಡಿ, ಸೂಕ್ಷ್ಮವಾದ ಆ ರೇಣುಗಳನ್ನು ಪಿಂಡೀಕರಣ ಮಾಡಿ ಘನರೂಪದಲ್ಲಿ ಹಿಡಿದಿಟ್ಟಿರುವ ಶಕ್ತಿ ಯಾವುದೆಂದು ಕೇಳಿದರೆ, ಅದು 'ಕೋಹಿರ್ಷ' ಎನ್ನುವ ಶಕ್ತಿಯೆಂದು ವಿಜ್ಞಾನವು ಆಂಗ್ಲಭಾಷೆಯಿಂದ ಉತ್ತರಕೊಡಬಹುದು. 'ಕೋಹಿರ್ಷ' ಎಂದರೆ ಸಂಘಟಕ ಶಕ್ತಿ, ಸಂಶ್ಲೇಷಕ ಶಕ್ತಿ, ಏಕೀಕರಣ ಶಕ್ತಿ, ಪಿಂಡೀಕರಣ ಶಕ್ತಿ, ಸ್ನೇಹಜನಕ ಶಕ್ತಿ. ಬಿಡಿಬಿಡಿಯಾದ ಹಲವು ವಸ್ತುಗಳನ್ನು ಒಟ್ಟುಗೂಡಿಸಿ ಒಂದು ಇಡೀ ಘನವಾಗಿ ಹಿಡಿದಿಡುವ ಆ ಶಕ್ತಿಯನ್ನು ಜೀವಭಾಷೆಯಲ್ಲಿ ಅಥವಾ ಮಾನವ ಭಾಷೆಯಲ್ಲಿ ಭಾವನಾತ್ಮಕವಾಗಿ ಅರ್ಥಮಾಡುವುದಾದರೆ ಅದನ್ನು ಸ್ನೇಹಶಕ್ತಿ ಅಥವಾ ಪ್ರೇಮಶಕ್ತಿಯೆಂದು ಹೇಳಬಹುದು. ಈ ತತ್ವವು ಘನವೂ, ದ್ರವವೂ ಆದ ಎಲ್ಲಾ ಪದಾರ್ಥಗಳಿಗೂ ಅನ್ವಯಿಸುತ್ತದೆ; ಹಾಗೂ ಸ್ಥಾವರ ಜಂಗಮಾತ್ಮಕ ಇಡೀ ಜಗತ್ತಿಗೇ ಅನ್ವಯಿಸುತ್ತದೆ. ಇದರಿಂದ ಜಗತ್ತಿನ ತುಂಬಾ ಪ್ರೇಮಶಕ್ತಿಯೇ ವ್ಯಾಪಿಸಿದೆಯೆಂದು ಸಿದ್ಧವಾಗುತ್ತದೆ.

ಇನ್ನು ಜಗತ್ತಿಗೆ ಆಧಾರವಾದ ಶಕ್ತಿ ಯಾವುದೆಂದು ಕೇಳಿದರೆ, **"ಧರ್ಮೋ ಹಿ ಜಗತಃ ಪ್ರತಿಷ್ಠಾ"** ಎಂಬ ಆರ್ಯೋಕ್ತಿಯು ಜಗತ್ತಿಗೆಲ್ಲಾ ಧರ್ಮವೇ ಅಂದರೆ ಧಾರಣಾಶಕ್ತಿಯೇ ಆಧಾರವೆಂದು ಹೇಳುತ್ತದೆ. ಭೌತಿಕಶಾಸ್ತ್ರವೂ ತನ್ನ ರೀತಿಯಿಂದ ಹೀಗೆಯೇ ಹೇಳುತ್ತದೆ. (Gravitation is the principle that all bodies attract each other with a force proportional directly to their masses and inversly .... .... ) ಪ್ರತಿಯೊಂದು ಪದಾರ್ಥವೂ ಇನ್ನೊಂದು ಪದಾರ್ಥವನ್ನು ತನ್ನಲ್ಲಿರುವ ಭೌತಿಕ ವಸ್ತುವಿಶೇಷದ ಘನತೆಗೂ ನಿಬಿಡತೆಗೂ ಗಾತ್ರಕ್ಕೂ ಅನುಗುಣವಾಗಿ ತನ್ನ ಕಡೆಗೆ ಸೆಳೆಯುತ್ತದೆಯೆಂದು ಹೇಳುತ್ತದೆ. ಭೂಮಿಗಿಂತಲೂ ಹದಿನಾಲ್ಕು ಲಕ್ಷ ಪಾಲು ದೊಡ್ಡದಾಗಿರುವ ಮಹಾಗ್ರಹವಾದ ಸೂರ್ಯನ ಆಕರ್ಷಣಶಕ್ತಿಯ ಆಧಾರದ ಮೇಲೆಯೇ ಈ ಸೌರವ್ಯೂಹದ ಎಲ್ಲಾ ಗ್ರಹಗಳೂ ನಿಂತು ನಿಯಮಿತವಾದ ವೇಗಗಳಿಂದ ಸುತ್ತುತ್ತಿವೆ. ಆದ್ದರಿಂದ ಆಕರ್ಷಣಶಕ್ತಿಯೇ ಜಗತ್ತಿಗೆಲ್ಲಾ ಆಧಾರವಾದು

ದೆಂದು ಸಿದ್ಧವಾಗುತ್ತಿದೆ. ಜೀವರಲ್ಲಿ ಪ್ರೇಮಶಕ್ತಿಯು ಆಕರ್ಷಣರೂಪದಿಂದಲೂ, ದ್ವೇಷಶಕ್ತಿಯು ವಿಕರ್ಷಣರೂಪದಿಂದಲೂ ವ್ಯಕ್ತವಾಗುವುದು ಅನುಭವಗಮ್ಯವಾಗಿದೆ. ಇದರಿಂದ ಪ್ರೇಮಶಕ್ತಿಯೇ ಜಗತ್ತಿಗೆಲ್ಲಾ ಆಧಾರವಾದುದೆಂದು ಸ್ಪಷ್ಟವಾಗುತ್ತದೆ.

ಇದುವರೆಗಿನ ಈ ಮೇಲಿನ ವಿಚಾರದಿಂದ ಚರಾಚರ ಜಗತ್ತಿನ ಒಳಹೊರಗೆ ಎಲ್ಲ ಕಡೆಯೂ ವ್ಯಾಪಿಸಿರುವುದು ಪ್ರೇಮಶಕ್ತಿಯೆಂದೂ. ಜಗತ್ತಿಗೇ ಆಧಾರವಾಗಿರುವುದು ಪ್ರೇಮಶಕ್ತಿಯೆಂದೂ ಸಿದ್ಧವಾಗುತ್ತದೆ. ಆದರೆ ಸರ್ವವ್ಯಾಪಕವೂ ಸರ್ವಾಧಾರವೂ ಆಗಿರುವ ಶಕ್ತಿಯು ಪರಮಾತ್ಮನೆಂದು ಶಾಸ್ತ್ರಪ್ರಸಿದ್ಧವು. ಆದ್ದರಿಂದ ಪ್ರೇಮವೇ ಪರಮಾತ್ಮನೆಂದು ಈ ವಿಚಾರದ ಸಿದ್ಧಾಂತವಾಗುತ್ತದೆ. ಭಕ್ತ್ಯಾಚಾರ್ಯರಾದ ನಾರದರೂ **" ಸ ಅನಿರ್ವಚನೀಯ ಪ್ರೇಮಸ್ವರೂಪಃ "** " ಭಗವಂತನು ವರ್ಣನೆಗೆ ಮೀರಿದ ಅಪಾರ ಪ್ರೇಮಸ್ವರೂಪನು " ಎಂದು ಹೇಳಿದ್ದಾರೆ. ತೈತ್ತಿರೀಯ ಉಪನಿಷತ್ತೂ **" ರಸೋ ವೈ ಸಃ, ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ "** " ಪರಮಾತ್ಮನು ರಸರೂಪನು, (ಅಂದರೆ ಪ್ರೇಮರಸ-ಆನಂದರಸರೂಪನು) ಆ ರಸವನ್ನು ಅನುಭವಿಸಿದವನು ಆನಂದವನ್ನು ಹೊಂದುತ್ತಾನೆ " ಎಂದು ಹೇಳುತ್ತಿದೆ.

ಪರಮಾತ್ಮನು ಅಪಾರ ಪ್ರೇಮಸ್ವರೂಪನಾದುದರಿಂದಲೇ ವಿಶಾಲ ಪ್ರಪಂಚದ ಉದಯವಾಯಿತು. ಹಿಂದೆ ವಿಚಾರಮಾಡಿರುವಂತೆ ಪ್ರೇಮವು ಸಾಪೇಕ್ಷಿಯಾದುದು; ಅಂದರೆ ಪ್ರೇಮವು ಇನ್ನೊಂದನ್ನು ಬಯಸುತ್ತದೆ. ಎರಡನೆಯದಿಲ್ಲದಿದ್ದ ಪರಮಾತ್ಮನು **" ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ । "** ಎಂದು ತೈತ್ತಿರೀಯೋಪನಿಷತ್ತು ಹೇಳುವಂತೆ ತಾನೇ ಬಹುರೂಪನಾಗಬೇಕೆಂದು ಬಯಸಿದ ಹಾಗೂ (ಜಗದ್ರೂಪನಾಗಿ) ಆಗಿ ಜನಿಸಿದ, ಉತ್ಪತ್ತಿಗೆ ಕಾರಣವಾದ ಪ್ರೇಮವೇ ಕಾಮವೆನ್ನಲ್ಪಡುವುದು. ಜಗತ್ತಿನ ಸ್ಥಿತಿ ಸಮಯದಲ್ಲಿ ಪ್ರೇಮವೇ ಸಮಾನ ಜೀವರಲ್ಲಿದ್ದರೆ ಸ್ನೇಹವೆನ್ನಿಸಿಕೊಳ್ಳುತ್ತದೆ. ಅದು ಅವಿಚಾರಜನ್ಯವೂ ಅತಿರೇಕವೂ ಆದರೆ ಮೋಹವೆನ್ನಿಸುತ್ತದೆ. ಹಿಂದೆ ಹೇಳಿರುವಂತೆ ಶ್ರೇಷ್ಠರಲ್ಲಿರುವ ಪ್ರೇಮವೇ ಗೌರವಯುಕ್ತವಾಗಿದ್ದರೆ ಭಕ್ತಿಯಾಗುತ್ತದೆ; ಕನಿಷ್ಠರಲ್ಲಿ ಅಥವಾ ಕಿರಿಯರಲ್ಲಿ ಅದೇ ಕರುಣಾ

ಪೂರ್ಣವಾಗಿದ್ದರೆ ವಾತ್ಸಲ್ಯವೆನಿಸುತ್ತದೆ; ಪ್ರಿಯ-ಪ್ರೇಯಸಿಯರಲ್ಲಿ ಸಹಜವಾಗಿರುವ ಮಧುರಮಯವಾದ ಒಲವೇ ಪ್ರಣಯವೆನ್ನಿಸುತ್ತದೆ.

'**ಜನ್ಮಾದ್ಯಸ್ಯಯತಃ**' ಎಂಬ ಬ್ರಹ್ಮಸೂತ್ರದಂತೆ ಜಗತ್ತಿನ ಜನ್ಮಾದಿಗಳಿಗೆ ಕಾರಣನಾದವನೇ ಈಶ್ವರನಾದ್ದರಿಂದಲೂ ತೈತ್ತಿರೀಯದಂತೆ ಈಶ್ವರಕಾಮ, ಈಶ್ವರಸಂಕಲ್ಪ ಅಥವಾ ಈಶ್ವರಪ್ರೇಮವೇ ಸೃಷ್ಟ್ಯಾದಿಗಳಿಗೆ ಕಾರಣವಾದ್ದರಿಂದಲೂ ಈಶ್ವರ ಅಥವಾ ಪರಮಾತ್ಮನೇ ಪ್ರೇಮಸ್ವರೂಪನು. ಹೀಗೆ ಜಗತ್ತಿನ ಉದಯಕ್ಕೆ ಈಶ್ವರನ ಸಂಕಲ್ಪಶಕ್ತಿಯೇ (Motive power) ಕಾರಣವಾಗಿದೆ.

ಈ ಪ್ರೇಮಶಕ್ತಿಯಿಂದ ಮುಂದೆ ಯಾವ ಕ್ರಿಯಾಶಕ್ತಿಯು (Active power) ಹೇಗೆ ಸೃಷ್ಟಿಮಾಡಿತೆಂಬುದನ್ನು ವೇದಶಾಸ್ತ್ರಗಳು ಹೇಳುವುದನ್ನೇ ಬ್ರಹ್ಮವಿದ್ಯಾಸಮಾಜದ (ಥಿಯಾಸಫಿಕಲ್ ಸೊಸೈಟಿಯ) ಸಂಸ್ಥಾಪಕರಾದ ಭಗವತೀ ಬ್ಲ್ಯಾವಟ್ಸ್ಕಿಯವರು ತಮ್ಮ 'ಗುಪ್ತವಿದ್ಯಾ' (ಸೀಕ್ರೆಟ್ ಡಾಕ್ಟ್ರಿನ್) ಎಂಬ ಅದ್ಭುತ ಗ್ರಂಥದಲ್ಲಿ ವೈಜ್ಞಾನಿಕ ರೀತಿಯಿಂದ ಹೇಳಿರುವುದೇನೆಂದರೆ,

" The active power,– 'the perpetual motion of the Great Breath' – only awakens Kosmos at the dawn of every new period, setting it into motion, by means of the two contrary forces, and thus causing it to become objective on the place of illuslon. In other words, that dual motion transfers Kosmos from the plane of the eternal ideal into that of finite manifestation or from the noumenal to the phenomenal plane. The two Forces are the centripetal and the centrifugal Forces which are male and female, positive and negative, physical and spiritual, the two being the one primordial Force."

" ವಿಶ್ವಪ್ರಾಣದ ನಿರಂತರ (ಪ್ರಾಣಾಪಾನ) ಗತಿಯ ಮಹಾ ಕ್ರಿಯಾಶಕ್ತಿಯು ಪ್ರತಿಯೊಂದು ಹೊಸ ಕಲ್ಪದ ಉದಯಕಾಲದಲ್ಲಿ ಎರಡು ವಿರುದ್ಧಶಕ್ತಿಗಳ

ಪ್ರಭಾವದಿಂದ ಸಂಚಾಲನೆ ಮಾಡಿ ವಿಶ್ವವನ್ನು ಜಾಗ್ರತೆಗೊಳಿಸುತ್ತದೆ ಮಾತ್ರ; ಹಾಗೂ ಮಾಯಾಫಲಕದಲ್ಲಿ ಅದನ್ನು ದೃಶ್ಯಮಾನಗೊಳಿಸುತ್ತದೆ. ಇನ್ನೊಂದು ರೀತಿಯಲ್ಲಿ ಹೇಳುವದಾದರೆ ಆ ದ್ವಂದ್ವಶಕ್ತಿಯು ವಿಶ್ವವನ್ನು ಸನಾತನವಾದ ಅವ್ಯಾಕೃತ ಭಾವಭೂಮಿಕೆಯಿಂದ ಖಂಡವಾದ ವ್ಯಕ್ತಸ್ವರೂಪಕ್ಕೆ ಅಥವಾ ದೃಗ್ರೂಪದಿಂದ ದೃಶ್ಯರೂಪಕ್ಕೆ ಪರಿವರ್ತಿಸುತ್ತದೆ. ಒಂದೇ ಮೂಲಶಕ್ತಿಯ ರೂಪಗಳಾಗಿರುವ ಆ ಎರಡು ಶಕ್ತಿಗಳು ಪುರುಷನೂ ಸ್ತ್ರೀಯೂ ಧನವೂ ಋಣವೂ ಆಧಿಭೌತಿಕವೂ ಆಧ್ಯಾತ್ಮಿಕವೂ ಆದ ಕೇಂದ್ರಾಭಿಕರ್ಷಕ ಕೇಂದ್ರಾಪಕರ್ಷಕ (ಕೇಂದ್ರೋತ್ಸಾರಕ) ಶಕ್ತಿಗಳಾಗಿವೆ."

ಹೀಗೆ ಜಗನ್ಮೂಲವಾದ ಪ್ರೇಮಶಕ್ತಿಯೇ

| | | |
|---|---|---|
| ಸೃಷ್ಟಿಶಕ್ತಿಯಾಗಿ | ಪ್ರಕೃತಿ-ಪುರುಷರ | ಸಮಷ್ಟಿತತ್ತ್ವಭೇದದಿಂದಲೂ |
| ಮಾಯಾಶಕ್ತಿಯಾಗಿ | ಆವರಣ-ವಿಕ್ಷೇಪರೂಪ | ಅವಿದ್ಯಾಭೇದದಿಂದಲೂ |
| ಪ್ರಜ್ಞಾಶಕ್ತಿಯಾಗಿ | ಜ್ಞಾನಾಜ್ಞಾನಗಳ | ಭಾವಭೇದದಿಂದಲೂ |
| ಪ್ರಾಣಶಕ್ತಿಯಾಗಿ | ಪ್ರಾಣಾಪಾನರೂಪ | ಗತಿಭೇದದಿಂದಲೂ |
| ಜೀವಶಕ್ತಿಯಾಗಿ | ಸ್ತ್ರೀಪುರುಷರ | ಲಿಂಗಭೇದದಿಂದಲೂ |
| ಭಾವಶಕ್ತಿಯಾಗಿ | ರಾಗದ್ವೇಷರೂಪ | ವೃತ್ತಿಭೇದದಿಂದಲೂ |
| ಕರಣಶಕ್ತಿಯಾಗಿ | ರಜಸ್ತಮೋರೂಪ | ಗುಣಭೇದದಿಂದಲೂ |
| ಕ್ರಿಯಾಶಕ್ತಿಯಾಗಿ | ಧರ್ಮಾಧರ್ಮರೂಪ | ಚೋದನಾಭೇದದಿಂದಲೂ |
| ಭೋಗಶಕ್ತಿಯಾಗಿ | ಸುಖದುಃಖರೂಪ | ವೇದನಾಭೇದದಿಂದಲೂ |
| ವಿದ್ಯುಚ್ಛಕ್ತಿಯಾಗಿ | ಋಣ-ಧನರೂಪ | ಧ್ರುವಭೇದದಿಂದಲೂ |
| ವಸ್ತುಶಕ್ತಿಯಾಗಿ | ಭೂತಚೇತನಾತ್ಮಕ | ಸ್ಥಿತಿಭೇದದಿಂದಲೂ |

ಸನಾತನವಾಗಿ ಈಕ್ಷಕಭಾವ (Ideal) ಭೂಮಿಕೆಯಲ್ಲಿರುವ ಬೀಜರೂಪವಾದ ವಿಶ್ವವನ್ನು ದೃಶ್ಯಮಾನ ಪ್ರತ್ಯಕ್ಷವಾಗಿ (ಹಗ್ಗವನ್ನು ಹಾವಿನೋಪಾದಿಯಲ್ಲಿ) ವಿವರ್ತಿಸಿ — ನೋಟದ ಹಂತದಲ್ಲಿರುವ ಗೂಢವಾದ ಸಂಸ್ಕಾರ ರೂಪ ಜಗತ್ತನ್ನು ಕಾಣುವ ಸ್ಪಷ್ಟವಾದ ನಾಮರೂಪಗಳ ಹಂತಕ್ಕಿಳಿಸಿ-ಸೃಷ್ಟಿ ಸ್ಥಿತಿ ಲಯರೂಪ ನಾಟಕ ರಂಗದಲ್ಲಿ ವಿಲಾಸಮಾಡುತ್ತಿದೆ.

ಇದುವರೆಗೆ ಸಂಗ್ರಹವಾಗಿರುವ ಇವಿಷ್ಟೂ ಪ್ರೇಮಶಕ್ತಿಯ ಪ್ರವೃತ್ತಿ ಮುಖದ ವಿಲಾಸವಾಗಿದೆ. ಇನ್ನು ಈಗ ಜ್ಞಾನ-ವೈರಾಗ್ಯಲಕ್ಷಣವುಳ್ಳ ನಿವೃತ್ತಿ ಮಾರ್ಗದಲ್ಲಿ ಪ್ರೇಮಶಕ್ತಿಯ ಅಂತರ್ಮುಖವಾದ ಸಾಧನೆಯನ್ನು ವಿಚಾರ ಮಾಡೋಣ.

ಇದು ಸಾಕಾರ-ಸಗುಣೋಪಾಸನೆಯೆಂದೂ ನಿರ್ಗುಣೋಪಾಸನೆಯೆಂದೂ ಎರಡು ಬಗೆ. ಇದು ರಾಜಯೋಗದ ಧಾರಣಾ-ಧ್ಯಾನ ಸಮಾಧಿಗಳ ಸೋಪಾನ ವೆನ್ನಬಹುದು. ಒಳಗಡೆಯ ಸಾಕಾರ-ಸಗುಣೋಪಾಸನೆಗೆ ಸಾಧನವಾಗಿ ಹೊರಗಡೆಯ ಪ್ರತೀಕೋಪಾಸನೆಯಿದೆ. ಉಪಾಸನೆಯೆಂದರೆ ತನು-ಮನ ಗಳಿಗೆ ಇಷ್ಟದೇವನ ಸಾನ್ನಿಧ್ಯವನ್ನು ಭಕ್ತಿಯಿಂದ ಸಾಧಿಸುವುದಾಗಿದೆ.

ನಿರ್ಗುಣವೂ ನಿರಾಕಾರವೂ ನಿರ್ವಿಕಲ್ಪವೂ ಆದ ಪರಬ್ರಹ್ಮವು ಮಾತಿನ ವರ್ಣನೆಗೂ ಮನಸ್ಸಿನ ಕಲ್ಪನೆಗೂ ಮೀರಿರುವುದರಿಂದ ಧ್ಯಾನಕ್ಕೆ ನಿಲುಕುವು ದಲ್ಲ. ಬ್ರಹ್ಮವು ನಿವೃತ್ತಿಸ್ವರೂಪವಾದುದರಿಂದ ಮನಸ್ಸು ವೃತ್ತಿರಹಿತವಾದರೆ ಮಾತ್ರ ಬ್ರಹ್ಮದ ಅನುಭವವುಂಟಾಗುವುದು. ವಿದ್ಯಾರಣ್ಯರು ತಮ್ಮ ಬ್ರಹ್ಮ ವಿದಾಶೀರ್ವಾದ ಪದ್ಧತಿಯಲ್ಲಿ ಈ ಅರ್ಥಕ್ಕೆ ಹೇಳಿರುವುದೇನೆಂದರೆ :—

**"ಮನೋವ್ಯಾಪಾರಾಭಾವ ಸಮಯೇ ಯತ್ಸುಖಂ ಭಾಸತೇ ತತ್ಸುಖಮಾತ್ಮಸ್ವರೂಪಮಿತಿ ಆತ್ಮನಿಶ್ಚಯಸ್ಸಮ್ಯಗ್ಭೂಯಾತ್ ।"**
"ಮನಸ್ಸಿನ ಚೆಲ್ಲಾಟವಿಲ್ಲದಿರುವ ಸಮಯದಲ್ಲಿ ಯಾವ ಸುಖವು ಸ್ಫುರಿಸು ವುದೋ ಆ ಸುಖವೇ ಆತ್ಮಸುಖರೂಪವೆಂದು ಆತ್ಮನಿಶ್ಚಯವು ಚೆನ್ನಾಗಿ ಆಗಲಿ" ಎಂದು.

ಮನಸ್ಸು ವೃತ್ತಿಶೂನ್ಯವಾಗಬೇಕಾದರೆ ಆದರಲ್ಲಿರುವ ಅನಂತ ವೃತ್ತಿಗಳು ಅಡಗಿ ಮೊದಲು ಒಂದೇ ವೃತ್ತಿಯು ನಿಲ್ಲಬೇಕು. ಮಿಕ್ಕ ಎಲ್ಲಾ ವೃತ್ತಿ ಗಳನ್ನೂ ತಡೆಗಟ್ಟಿ ಒಂದೇ ವೃತ್ತಿಯು ಮನಸ್ಸಿನಲ್ಲಿ ನಿಲ್ಲುವಂತೆ ಮಾಡಿಕೊಳ್ಳು ವುದು ಅತಿ ಕಷ್ಟವು. ಪ್ರೇಮವು ಸುಖಕರವಾದುದರಿಂದ ಮನಸ್ಸಿಗೆ ಪ್ರೇಮ ವೃತ್ತಿಯಷ್ಟು ಪ್ರಿಯವಾದುದು ಬೇರೊಂದಿಲ್ಲ. ಪ್ರಿಯವಸ್ತುವಿನ ನೆನಹು ಪ್ರಯತ್ನವೂ ಪ್ರಯಾಸವೂ ಇಲ್ಲದೆ ಮನಸ್ಸಿಗೆ ಸುಲಭವಾಗಿ ತಾನಾಗಿಯೇ ಬರುವುದು ಸ್ವಾಭಾವಿಕ. ಆದರೆ ಪ್ರೇಮವೃತ್ತಿಯು ವಿದ್ಯುಚ್ಛಕ್ತಿಯಂತೆ

ಅಥವಾ ಅಗ್ನಿಯಂತೆ ಯಾವುದೊಂದು ವಸ್ತುವನ್ನು ಅಥವಾ ರೂಪವನ್ನು ಹಿಡಿಯದೇ ಬೆಳಗಲಾರದು. ಆದ್ದರಿಂದ ಯಾವುದೊಂದು ಇಷ್ಟವಸ್ತುವಿನ ಸಂಬಂಧವಾಗಿಯೇ ನಮಗೆ ಪ್ರೇಮದ ಅನುಭವವುಂಟಾಗುವುದು.

ಯಾವುದೊಂದೇ ಪ್ರೇಮವೃತ್ತಿಯು ನಮ್ಮ ಮನಸ್ಸಿನಲ್ಲಿ ಉಳಿಯ ಬೇಕಾದರೆ ಜಗತ್ತಿನಲ್ಲಿ ಒಂದೇ ವಸ್ತುವು ನಮಗೆ ಅತ್ಯಂತ ಪ್ರಿಯವಾಗಬೇಕು. ನಮಗೆ ಅದೊಂದೇ ಬೇಕಾಗಬೇಕು; ಅದೊಂದೇ ಸಾಕಾಗಬೇಕು. ಅದೊಂದು ನಮ್ಮ ವಶವಾಗದೇ, ಸಕಲ ಲೋಕಗಳ ಐಶ್ವರ್ಯವು ನಮ್ಮ ವಶವಾದರೂ ವ್ಯರ್ಥವೆನಿಸಬೇಕು; ಅದೊಂದಿದ್ದರೆ ಇಂದ್ರಪದ-ಬ್ರಹ್ಮಪದಗಳೇ ನಮ ಗಿದ್ದಂತಾಗಬೇಕು. ಇಂಥಾ ಪರಮೋತ್ಕಟವೂ ಅನನ್ಯವೂ ಆದ ಪ್ರೇಮವು ಒಂದೇ ವಸ್ತುವಿನಲ್ಲಿ ಇದ್ದರೆ ಮಾತ್ರ ಮನಸ್ಸಿನಲ್ಲಿಯೂ ಅದರ ಸಂಬಂಧವಾದ ಒಂದೇ ವೃತ್ತಿಯು ಸರ್ವಕಾಲದಲ್ಲಿಯೂ ಅಖಂಡವಾಗಿರುವುದು. ಜಗತ್ತಿನಲ್ಲಿ ಇನ್ನೊಂದು ಯಾವ ವಸ್ತುವು ಹೆಚ್ಚು ಪ್ರಿಯವಾದರೂ ಚಿತ್ತವು ಅದರ ಕಡೆ ಹರಿಯುವುದರಿಂದ ಆ ವೃತ್ತಿಯು ಬಂದು ಅಖಂಡವಾದ ಒಂದೇ ವೃತ್ತಿಗೆ ಬಾಧೆ ಬರುತ್ತದೆ.

**ಮನೋಗತಿರವಿಚ್ಛಿನ್ನಾ ಯಥಾ ಗಂಗಾಂಭಸೋಂಬುಧೌ ।**
**ಲಕ್ಷಣಂ ಭಕ್ತಿಯೋಗಸ್ಯ ನಿರ್ಗುಣಸ್ಯ ಹ್ಯುದಾಹೃತಂ ॥**

" ತ್ರೈಲೋಕ್ಯಪಾವನಿಯಾದ ಮಂದಾಕಿನಿಯು ಹೇಗೆ ಅಖಂಡಪ್ರವಾಹದಿಂದ ಹರಿದುಹೋಗಿ ಸಮುದ್ರದಲ್ಲಿ ಸೇರಿ ತಾನೂ ಅಪಾರವಾಗುವುದೋ ಹಾಗೆಯೇ ಮನೋವೃತ್ತಿಯು ಅವಿಚ್ಛಿನ್ನವಾಗಿ ಪ್ರೇಮದಿಂದ ಹರಿದು ಅಪಾರಪ್ರೇಮ ಸ್ವರೂಪನಾದ ಪರಮಾತ್ಮನಲ್ಲಿ ಸೇರಿ ಒಂದಾಗುವುದೇ ನಿರ್ಗುಣಭಕ್ತಿಯೋಗದ ಲಕ್ಷಣವೆಂದು ಪ್ರತೀತವು. " ಹೀಗೆಂದು ಭಗವಾನ್ ವೇದವ್ಯಾಸರು ಹೇಳಿ ದ್ದಾರೆ. ಸಗುಣಭಕ್ತಿಯೋಗವಾಗಲೀ ನಿರ್ಗುಣಭಕ್ತಿಯೋಗವಾಗಲೀ ಸಾಧ್ಯ ಗಳಲ್ಲಿ ಭೇದವಿದೆಯೇ ಹೊರತು ಸಾಧನಗಳಲ್ಲಿ ಭೇದವಿಲ್ಲ.

ಯಾ ಪ್ರೀತಿರವಿವೇಕಾನಾಂ ವಿಷಯೇಷ್ವನಪಾಯಿನೀ ।
ತ್ವಾಮನುಸ್ಮರತಃ ಸಾ ಮೇ ಹೃದಯಾನ್ ಮಾಪಸರ್ಪತು ॥

" ಅವಿವೇಕಿಗಳಿಗೆ ವಿಷಯಗಳಲ್ಲಿ ಎಡೆಬಿಡದಿರುವ ಯಾವ ನಿಶ್ಚಲವಾದ ಪ್ರೀತಿ ಯಿದೆಯೋ ಅಂಥಾ ನನ್ನ ಪ್ರೀತಿಯು ನಿನ್ನನ್ನು ನೆನೆಯುವ ನನ್ನ ಹೃದಯ ವನ್ನು ಬಿಟ್ಟುಹೋಗದಿರಲಿ." ಹೀಗೆಂದು ಭಕ್ತಾಗ್ರೇಸರನಾದ ಪ್ರಹ್ಲಾದನು ಭಗವಂತನಲ್ಲಿ ಬೇಡಿಕೊಂಡಿದ್ದಾನೆ. (ವಿಷ್ಣುಪುರಾಣ)

**ಅನನ್ಯ ಮಮತಾ ವಿಷ್ಣೌ ಮಮತಾ ಪ್ರೇಮಸಂಗತಾ ।**
**ಭಕ್ತಿರಿತ್ಯುಚ್ಯತೇ ... ... .... ॥** (ನಾರದ ಪಾಂಚರಾತ್ರ)

ಸರ್ವವ್ಯಾಪಕವಾದ ಪರಮಾತ್ಮ ಚೈತನ್ಯದಲ್ಲಿ ಅನನ್ಯವೂ ಪ್ರೇಮಪೂರ್ಣವೂ ಆದ 'ನನ್ನದು-ನಾನು' ಎಂಬ ಅಭಿಮಾನವಿರಬೇಕು. ಇದೇ ಭಕ್ತಿಯೆನಿಸಿಸು ತ್ತದೆ. ಜಗತ್ತಿನಲ್ಲಿ ಬೇರೆ ಯಾವ ವಿಷಯದಲ್ಲಿಯೂ ಆಸಕ್ತಿಯಿಲ್ಲದೇ ದೇವ ನೊಬ್ಬನನ್ನೇ ತನ್ನವನೆಂಬ ಅವಿಭಾಜ್ಯವೂ ಉತ್ಕಟವೂ ಆದ ಪ್ರೇಮದಿಂದ ಅನುಭವ ಮಾಡುವುದೇ ಭಕ್ತಿಯಾಗಿದೆ.

ಪ್ರಸಿದ್ಧರಾದ ಅದ್ವೈತ ಶಿರೋಮಣಿ ಮಧುಸೂದನ ಸರಸ್ವತಿಗಳವರು ತಮ್ಮ ಭಕ್ತಿರಸಾಯನ ಗ್ರಂಥದಲ್ಲಿ,

**" ದ್ರವೀಭಾವ ಪೂರ್ವಿಕಾ ಹಿ ಮನಸೋ ಭಗವದಾಕಾರತಾ ಸವಿಕಲ್ಪಕ ವೃತ್ತಿರೂಪಾ ಭಕ್ತಿಃ । "**

" ಅನುರಾಗಜನ್ಯವಾದ ಆನಂದಾತಿರೇಕದಿಂದ ದ್ರವಿಸುವ ಮನಸ್ಸು ಭಗವಂತನ ಸಗುಣಸಾಕಾರವಾದ ರೂಪವನ್ನು ಹೊಂದುವುದೇ ಸವಿಕಲ್ಪಕವೃತ್ತಿರೂಪ ಅಥವಾ ಸಗುಣ-ಭಕ್ತಿಯೆನ್ನಿಸುತ್ತದೆ."

**ದ್ರುತಸ್ಯ ಭಗವದ್ಧರ್ಮಾದ್ಧಾರಾವಾಹಿಕತಾಂ ಗತಾ ।**
**ಸರ್ವೇಶೇ ಮನಸೋ ವೃತ್ತಿರ್ಭಕ್ತಿರಿತ್ಯಭಿಧೀಯತೇ ॥**

" ಉಜ್ಜ್ವಲಪ್ರೇಮಾವೇಗದಿಂದ ದ್ರವೀಭೂತವಾದ ಮನಸ್ಸು ಸರ್ವೇಶ್ವರನಲ್ಲಿ ಅಖಂಡ ಧಾರಾಕಾರಿಯಾದ ವೃತ್ತಿಯಿಂದ ಪ್ರವಹಿಸುವುದೇ ಭಕ್ತಿಯೆನಿಸು ತ್ತದೆ." (ಮ. ಸ. ಭಕ್ತಿರಸಾಯನ)

ಆದ್ದರಿಂದಲೇ ಶ್ರುತಿಯಲ್ಲಿ,

**ಭಕ್ತಿರೇವೇನಂ ನಯತಿ ಭಕ್ತಿರೇವೇನಂ ದರ್ಶಯತಿ ।**
**ಭಕ್ತಿವಶಃ ಪುರುಷೋ ಭಕ್ತಿರೇವ ಭೂಯಸೀ ॥**

“ಭಕ್ತಿಯಿಂದಲೇ ಪರಮಾತ್ಮಪ್ರಾಪ್ತಿ, ಭಕ್ತಿಯಿಂದಲೇ ಭಗವಂತನ ದರ್ಶನ, ಭಗವಂತನು ಭಕ್ತಿಗೇ ವಶನು; ಆದ್ದರಿಂದ ಭಕ್ತಿಯೇ ಶ್ರೇಷ್ಠ” ಎಂದು ಹೇಳಿದೆ.

ಚೆಲುವೆಯೂ ಸುಗುಣೆಯೂ ಆದ ಹೆಣ್ಣಿನಲ್ಲಿ ಉತ್ಕಟಪ್ರೇಮಾವಿರತಕ್ಕ ಪುರುಷನಿಗೂ ಮನಸ್ಸಿನಲ್ಲಿ ತನ್ನ ಆ ಪ್ರೇಯಸಿಯ ರೂಪವಾದ ಒಂದೇ ವೃತ್ತಿಯಿರಬಹುದು; ಅಥವಾ ಸುಂದರನೂ ಸದ್ಗುಣಿಯೂ ಸುಸಂಸ್ಕೃತನೂ ಆದ ಪುರುಷನಲ್ಲಿ ಅನನ್ಯ ಪ್ರೇಮವಿರತಕ್ಕ ಅನುರೂಪಳಾದ ಹೆಣ್ಣಿಗೂ ಮನಸ್ಸಿನಲ್ಲಿ ತನ್ನ ಪ್ರಿಯತಮನ ಆಕಾರವಾದ ಒಂದೇ ವೃತ್ತಿಯಿರಬಹುದು. ಇಂಥಾ ಸಂದರ್ಭಗಳಲ್ಲಿ ಪ್ರೇಮವು ಅನನ್ಯವೂ ಉತ್ಕಟವೂ ಆಗಿದ್ದರೆ, ವೃತ್ತಿಯೂ ಏಕಾಗ್ರವೂ ಅಖಂಡವೂ ಆಗಿರಬಹುದು. ಆದರೆ ಹೆಣ್ಣುಗಂಡುಗಳ ಸಾಂಸಾರಿಕ ಪ್ರೇಮವು ಸ್ವಾರ್ಥಪರವಾದುದರಿಂದಲೂ, ವಿರೋಧ-ವಿಯೋಗಾದಿಗಳ ಭಯ-ದುಃಖಗಳು ಇದರಲ್ಲಿರುವುದರಿಂದಲೂ, ಮತ್ಸರ ಸಂಶಯಾದಿಗಳ ಬಾಧೆಯಿರುವುದರಿಂದಲೂ, ಕ್ಷಣಿಕಸುಖವೇ ಫಲವಾದುದರಿಂದಲೂ, ನಶ್ವರ ದೇಹವನ್ನು ಅವಲಂಬಿಸಿರುವುದರಿಂದಲೂ ಶಾಶ್ವತವಾದ ನಿಜಸುಖಕ್ಕೆ ಸಾಧನವಾಗಲಾರದು. ವಿಷಯಸುಖವು ಕ್ಷಣಿಕವೂ ಕ್ಷುದ್ರವೂ ಅಪವಿತ್ರವೂ ಆದುದರಿಂದ ಪ್ರೇಮವು ಪವಿತ್ರವೂ ಅಪಾರವೂ ಆಗಬೇಕಾದರೆ ವೃತ್ತಿಯು (ವಿಷಯಸುಖದಲ್ಲಿ) ಏಕಾಗ್ರವಾದರೆ ಸಾಲದು. ಆ ಪ್ರೇಮವು ಭಗವದ್ಭಕ್ತಿಯಾಗಬೇಕು. ಭಗವದ್ಭಾವನೆಯಿಂದ ಕೂಡಿದರೆ ಮಾತ್ರ ಪ್ರೇಮವು ಭಗವದ್ಭಕ್ತಿಯಾಗುತ್ತದೆ.

ಹಾಗಲ್ಲದೆ ಮನೋವೃತ್ತಿಯು ಏಕಾಗ್ರವಾಗುವ ಮಾತ್ರದಿಂದಲೇ ಪರಮಾರ್ಥವು ಲಭಿಸುವ ಹಾಗಿದ್ದರೆ ಪರಮಾಣು ಶಕ್ತಿ ಶೋಧದಲ್ಲಿ ಅನೇಕ ವರ್ಷಗಳು ಏಕಾಗ್ರವಾಗಿ ತಪಸ್ಸುಮಾಡುವ ಅಣುವಿಜ್ಞಾನಿಯೂ ಮುಕ್ತನಾಗಬೇಕಾಗುತ್ತದೆ; ಮತ್ತು ಬೆಳಗಿನಿಂದ ಮಧ್ಯರಾತ್ರಿಯವರೆಗೂ ನದೀಮಧ್ಯದ ಶಿಲಾಪೀಠದಲ್ಲಿ ಅಚಲವಾಗಿ ಏಕಾಸನದಲ್ಲಿ ಕುಳಿತು ಗಾಳವನ್ನು ಹಾಕಿ ಮೀನು

ಗಳನ್ನು ಹಿಡಿಯುವ ಮಹಮ್ಮದೀಯ ತಪಸ್ವಿಗೂ ಧೀವರ (ಬೆಸ್ತ) ತಪಸ್ವಿಗೂ ಮುಕ್ತಿಯಾಗಬೇಕಾಗುತ್ತದೆ.

**" ತದ್ಭಕ್ತಿರ್ನಿಃಶ್ರೇಯಸಕರೀಂ "**

ಯಾವ ಪ್ರೇಮವು ಮೋಕ್ಷಾಪೇಕ್ಷೆಯಿಂದ ಕೂಡಿದುದೂ, ಮೋಕ್ಷಪ್ರದವೂ ಆಗಿದೆಯೋ ಅದೇ ಭಕ್ತಿಯೆಂದು ಅಂಗಿರಾ ದೈವೀ ಮೀಮಾಂಸಾ ದರ್ಶನ ಗ್ರಂಥದ ರಸಪಾದದಲ್ಲಿ ಹೇಳಿದೆ.

**ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಾ ।**
**ಸ್ನೇಹೋ ಭಕ್ತಿರಿತಿ ಪ್ರೋಕ್ತಸ್ತಯಾ ಮುಕ್ತಿರ್ನಚಾನ್ಯಥಾ ॥**

" ಭಗವಂತನ ಮಹಾಮಹಿಮೆಯನ್ನು ತಿಳಿದು, ಆ ಮಾಹಾತ್ಮ್ಯಜ್ಞಾನ ಪೂರ್ವಕ ಅವನಲ್ಲಿ ದೃಢತರವಾದ ಸ್ನೇಹವನ್ನು ಬೆಳೆಸುವುದೇ ಸರ್ವಕ್ಕೂ ಹೆಚ್ಚಿನ ಭಕ್ತಿಯೆನ್ನಿಸುತ್ತದೆ. ಇದರಿಂದಲೇ ಮುಕ್ತಿಯೇ ಹೊರತು ಬೇರೆ ಬಗೆಯಿಂದಲ್ಲ. " ಹೀಗೆಂದು ನಾರದ ಪಾಂಚರಾತ್ರಿಯಲ್ಲಿ ಹೇಳಿದೆ. ಇಂಥಾ ಭಕ್ತಿಯಿಂದ,

**ಸೃಷ್ಟೇರತೀತೋ ಬುದ್ಧೇಶ್ಚ ಪರಃ ಸ ಭಕ್ತಿಲಭ್ಯಃ ।**

" ಸೃಷ್ಟಿವಿಲಾಸವನ್ನೂ ಮೀರಿದ ಬುದ್ಧಿಗಿಂತಲೂ ಶ್ರೇಷ್ಠವಾದ ಸ್ಥಿತಿಯು ಭಕ್ತಿಯಿಂದ ಲಭಿಸುತ್ತದೆ. "

ನಾರದರು ತಮ್ಮ ಭಕ್ತಿಸೂತ್ರದಲ್ಲಿ, **" ತಸ್ಮಿನ್ ಅನನ್ಯತಾ ತದ್ವಿರೋಧಿಷು ಉದಾಸೀನತಾ "** " ಭಕ್ತಿಯು ನಿತ್ಯಾನಿತ್ಯ ವಸ್ತುವಿವೇಕ ಮತ್ತು ವೈರಾಗ್ಯಗಳನ್ನು ಕೂಡಿಕೊಂಡಿರಬೇಕು. ಇನ್ನೊಂದು ವಸ್ತುವಿಗೆ ಹರಿಯದೇ ಪರಮಾತ್ಮನಲ್ಲಿಯೇ ನೆಲೆಯಾಗಿ ನಿಲ್ಲುವ ಪ್ರೇಮವೂ ಅದಕ್ಕೆ ವಿರೋಧಿಯಾದುದರಲ್ಲಿ ಉದಾಸೀನತೆಯೂ ಭಕ್ತಿಯೆನಿಸುತ್ತದೆ. " ಎಂದು ಹೇಳಿದ್ದಾರೆ.

ಭಕ್ತಿಯಿಂದ ಮನಸ್ಸು ಒಂದು ರೂಪದಲ್ಲಿ ಏಕಕವಾಗುವುದಕ್ಕೆ ಸಹಾಯಕವಾಗಿ ಪ್ರತೀಕೋಪಾಸನೆಯಿದೆ.

ವಿದ್ಯುಚ್ಛಕ್ತಿಯ ವ್ಯವಸ್ಥೆಯಿರುವ ಸ್ಥಳಗಳಲ್ಲಿ ವಿದ್ಯುತ್ತು ತಂತಿಗಳಲ್ಲೆಲ್ಲಾ ತುಂಬಿದ್ದರೂ ಪ್ರಕಾಶಕೊಡುವುದಕ್ಕೆ ಬಲ್ಬುಗಳೇ ಬೇಕು. ಹಾಗೇ ಎಲ್ಲೆಲ್ಲಿಯೂ ತುಂಬಿರುವ ಪರಮಾತ್ಮನು ನಮ್ಮ ಹೃದಯಮಂದಿರದಲ್ಲಿ ಉಜ್ಜ್ವಲವಾಗಿ ಬೆಳಗುವುದಕ್ಕೆ ವೃತ್ತಿಯು ಇಷ್ಟದೇವತಾಕಾರವಾಗುವುದೇ ಪ್ರದೀಪ್ತಿ (ಬಲ್ಬು) ಸಾಧನವು.

ಆಚಾರ್ಯ ಶಂಕರರು ಉಪಾಸನೆಗಾಗಿ ಗಣನಾಥ, ಅಂಬಿಕಾ, ಶಿವ, ವಿಷ್ಣು ಮತ್ತು ಆದಿತ್ಯ ಎಂಬ ಪಂಚದೇವತೆಗಳ ಪಂಚಾಯತನವನ್ನು ಉಪದೇಶಿಸಿದ್ದಾರೆ. ಈ ಪಂಚಾಯತನದಲ್ಲಿ ಎಲ್ಲಾ ದೇವತೆಗಳೂ ಸಮಾನರೇ ಮತ್ತು ಪ್ರತಿಯೊಂದು ದೇವತೆಯೂ (**ಬ್ರಹ್ಮೈವ ಪಂಚಾಯತನಂ**) ಪೂರ್ಣಬ್ರಹ್ಮವೇ. ಈ ಐದು ದೇವತೆಗಳಲ್ಲಿ ಯಾವುದೊಂದನ್ನಾದರೂ ತನ್ನ ಇಷ್ಟದೇವತೆಯನ್ನಾಗಿ ಮಾಡಿಕೊಳ್ಳಬಹುದು. ಅಂತು ಒಬ್ಬ ಉಪಾಸಕನಿಗೆ ಜೀವಮಾನದಲ್ಲೆಲ್ಲಾ ಒಂದೇ ಇಷ್ಟದೇವತೆ ಇರಬೇಕು; ಇಷ್ಟವನ್ನು ಬದಲಾಯಿಸುತ್ತಿರಬಾರದು. 'ಉಪಾಸನಾತತ್ತ್ವ' ಎಂಬ ಗ್ರಂಥದಲ್ಲಿ,

**ಆದಿತ್ಯಂ ಗಣನಾಥಂ ಚ ದೇವೀಂ ರುದ್ರಂಚ ಕೇಶವಂ ।**
**ಪಂಚದೈವತಮಿತ್ಯುಕ್ತಂ ಸರ್ವಕರ್ಮಸು ಪೂಜಯೇತ್ ॥**

"ಎಲ್ಲಾ ಕರ್ಮಗಳಲ್ಲಿಯೂ ಪೂಜಿಸಬೇಕಾದ ಪಂಚದೈವತಗಳು ಯಾವುವೆಂದರೆ ಆದಿತ್ಯ, ಗಣನಾಥ, ದೇವಿ, ರುದ್ರ ಮತ್ತು ವಿಷ್ಣು" ಎಂದು ಹೇಳಿದೆ.

**ಆಕಾಶಸ್ಯಾಧಿಪೋ ವಿಷ್ಣುರಗ್ನೇಶ್ಚೈವ ಮಹೇಶ್ವರೀ ।**
**ವಾಯೋಃ ಸೂರ್ಯಃಕ್ಷಿತೇರೀಶೋ ಜೀವನಸ್ಯ ಗಣಾಧಿಪಃ ॥**

"ಆಕಾಶಕ್ಕೆ ವಿಷ್ಣುವೂ, ಅಗ್ನಿಗೆ ಮಹೇಶ್ವರಿಯೂ, ವಾಯುವಿಗೆ ಸೂರ್ಯನೂ, ಭೂಮಿಗೆ ಈಶ್ವರನೂ, ಜಲಕ್ಕೆ ಗಣಪತಿಯೂ ಅಧಿದೇವತೆಗಳು." ಈ ಐದು ದೇವತೆಗಳ ಲಕ್ಷಣಗಳೂ ಸೇರಿ ಬ್ರಹ್ಮನ ಲಕ್ಷಣವೇ ಆಗುತ್ತದೆ.

ಈ ಪಂಚಾಯತನದಲ್ಲಿ ತನ್ನ ಇಷ್ಟದೇವತೆಗೆ ಮಿಕ್ಕ ದೇವತೆಗಳು ಅಧೀನ ದೇವತೆಗಳು ಅಥವಾ ಪರಿವಾರ ದೇವತೆಗಳು. ಸಕ್ಕರೆಯು ಪಾಕವನ್ನು ಬೇರೆ

ಬೇರೆ ಅಚ್ಚುಗಳಲ್ಲಿ ಹೊಯಿದು ಯಾವ ಯಾವ ಆಕೃತಿಗಳನ್ನು ಮಾಡಿದರೂ ಸಕ್ಕರೆಯೆಂಬ ದೃಷ್ಟಿಯಿಂದಲೂ, ಸವಿಯ ದೃಷ್ಟಿಯಿಂದಲೂ ಎಲ್ಲಾ ವಿಗ್ರಹ ಗಳೂ ಒಂದೇ ಆಗಿರುವಂತೆ ಪಂಚಾಯತನದಲ್ಲಿ ಸಾರದಲ್ಲಿಯೂ ಮೂಲ ದಲ್ಲಿಯೂ ಎಲ್ಲಾ ದೇವತೆಗಳೂ ಒಂದೇ ಸಚ್ಚಿದಾನಂದ ವಸ್ತುವಿನ ಬೇರೆ ಬೇರೆ ರೂಪಗಳಾಗಿವೆ.

ಎಲ್ಲಾ ದೇವತೆಗಳಲ್ಲಿ "**ಆದೌ ಪೂಜ್ಯೋ ಗಣಾಧಿಪಃ**" ಗಣಾಧಿಪನು ಮೊದಲು ಪೂಜ್ಯನು. ಗಣಾಧಿಪನೆಂದರೆ ಸಮಸ್ತ ತತ್ತ್ವಗಣಗಳಿಗೂ ನಾಯಕ ನಾದ ಈಶ್ವರನು.

**ಯಂ ಬ್ರಹ್ಮ ವೇದಾಂತವಿದೋ ವದಂತಿ ।**
**ಪರಂ ಪ್ರಧಾನಂ ಪುರುಷಂ ತಥಾನ್ಯೇ ॥**
**ವಿಶ್ವೋದ್ಗತೇಃ ಕಾರಣಮೀಶ್ವರಂ ವಾ ।**
**ತಸ್ಮೈ ನಮೋ ವಿಘ್ನವಿನಾಶನಾಯ ॥**

ಇವನನ್ನೇ ವೇದಾಂತಿಗಳು ಬ್ರಹ್ಮವೆನ್ನುತ್ತಾರೆ. ಅನ್ಯರು ಇವನನ್ನೇ ಶ್ರೇಷ್ಠ ವಾದ ಪ್ರಧಾನವೆಂದೂ ಪರಮಪುರುಷನೆಂದೂ ತಿಳಿಯುತ್ತಾರೆ. ವಿಶ್ವದ ಸೃಷ್ಟ್ಯಾದಿಗಳಿಗೆ ಕಾರಣನಾದ ಈಶ್ವರನೆಂದೂ ಹೇಳುತ್ತಾರೆ. ಈ ಗಣಾಧಿಪ ನನ್ನೇ ವಿಘ್ನೇಶ್ವರನೆಂದೂ ವಿಘ್ನವಿನಾಶಕನೆಂದೂ ಕರೆಯುತ್ತಾರೆ. ಎಲ್ಲಾ ದೇವತೆಗಳ ಪೂಜೆಗೂ ಪ್ರಾರಂಭದಲ್ಲಿಯೇ ವಿಘ್ನದ ಕಲ್ಪನೆಯೂ ಅದರ ನಾಶದ ಅಪೇಕ್ಷೆಯೂ ಬರುವುದಕ್ಕೆ ಕಾರಣವೇನೆಂದು ವಿಚಾರಮಾಡಬೇಕು.

ಯಾವ ಇಚ್ಛೆಗಾದರೂ ಕರ್ಮಕ್ಕಾದರೂ ಬರುವ ವಿರೋಧಭಾವವನ್ನೇ ವಿಘ್ನವೆನ್ನುತ್ತೇವೆ. ಜಗತ್ತಿನಲ್ಲಿ ಪ್ರತಿಯೊಂದಕ್ಕೂ ಪ್ರತಿಕೂಲಭಾವವೊಂದಿರು ವುದು ಸ್ವಾಭಾವಿಕ. ಪ್ರಕಾಶದಲ್ಲಿರುವ ವಸ್ತುವಿನ ಬೆಳಕಿಗೆದುರಾದ ಮುಖವು ಬೆಳಗುತ್ತಿದ್ದರೂ ಮರೆಯಾದ ಮುಖವು ನೆರಳಿನಲ್ಲಿರುವಂತೆ ಸ್ವಯಂಪ್ರಕಾಶ ನಾದ ಆತ್ಮನಿಗೆ ಅಭಿಮುಖವಾದ ಭಾವವು ಜ್ಞಾನವಾಗಿಯೂ ವಿಮುಖವಾದ ಭಾವವು ಅಜ್ಞಾನವಾಗಿಯೂ ಅನುಕೂಲವಾದ ವೃತ್ತಿಯು ಸತ್ಸಂಕಲ್ಪ ವಾಗಿಯೂ (ಪ್ರೇಮ ಅಥವಾ) ರಾಗವಾಗಿಯೂ ಪ್ರತಿಕೂಲವೃತ್ತಿಯು ವಿಕಲ್ಪ ವಾಗಿಯೂ ದ್ವೇಷವಾಗಿಯೂ, ಸಾಧಕವಾದ ಕರ್ಮವು ಪುಣ್ಯವಾಗಿಯೂ,

ಬಾಧಕವಾದುದು ಪಾಪವಾಗಿಯೂ, ಇಷ್ಟವಾದ ಸಂವೇದನೆಯು ಸುಖವಾಗಿಯೂ ಅನಿಷ್ಟವಾದುದು ದುಃಖವಾಗಿಯೂ ತೋರುತ್ತಿವೆ. ಆಚಾರ್ಯ ಶಂಕರರು **"ವಿಷಯಾನುಕೂಲ್ಯೇ ಸೌಖ್ಯಂ ದುಃಖಂ ತದ್ವಿಪರ್ಯಯೇ"** ಇಷ್ಟವಿಷಯದಿಂದಾಗುವ ಸಂವೇದನೆಯು ಸುಖವೆಂದೂ ಅದಕ್ಕೆ ವಿಪರೀತವಾದುದು ದುಃಖವೆಂದೂ ಹೇಳಿದ್ದಾರೆ. ಪ್ರತಿಯೊಂದು ಸಂಕಲ್ಪಕ್ಕೂ ಒಂದು ವಿಕಲ್ಪವಿರುವಂತೆ ಒಂದೊಂದು ಕ್ರಿಯೆಗೂ ಒಂದೊಂದು ಪ್ರತಿಕ್ರಿಯೆಯುಂಟು. ನಮ್ಮ ಬುದ್ಧಿಯಲ್ಲಿ ಒಮ್ಮೆ ಜ್ಞಾನವೂ ಮತ್ತೊಮ್ಮೆ ಅಜ್ಞಾನವೂ ತುಂಬಿರುವವರೆಗೂ ವೃತ್ತಿಯಲ್ಲಿ ರಾಗದ್ವೇಷಗಳೂ, ಕರ್ಮದಲ್ಲಿ ಪುಣ್ಯಪಾಪಗಳೂ, ಅನುಭವದಲ್ಲಿ ಸುಖದುಃಖಗಳೂ ತಪ್ಪುವಂತಿಲ್ಲ. ಪ್ರಪಂಚ ಜೀವನವೆಲ್ಲಾ ಸುಖದುಃಖ ಮಿಶ್ರವಾಗಿ ದ್ವಂದ್ವಾತ್ಮಕವಾಗಿದೆ.

ಪ್ರಯತ್ನವಿರುವಲ್ಲೆಲ್ಲಾ ಪ್ರತಿಬಂಧವೂ, ಪ್ರತಿಬಂಧವಿರುವುದರಿಂದಲೇ ಪೌರುಷವು ಪ್ರಯತ್ನಶೀಲವೂ ಆಗಿದೆ. (Ressistance makes effort possible.) ಪ್ರಯತ್ನವನ್ನು ನಿಲ್ಲಿಸಿ ಪ್ರಗತಿಯನ್ನು ತಡೆಗಟ್ಟುವಷ್ಟು ಪ್ರತಿಬಂಧವು ಪ್ರಬಲವಾದರೆ ವಿಘ್ನವೆನಿಸುತ್ತದೆ. ನದಿಗೆ ಎರಡು ತೀರಗಳ ಪ್ರತಿಬಂಧವಿರುವುದರಿಂದಲೇ ನದೀಜಲವು ತನ್ನ ಪಾತ್ರದಲ್ಲಿ ಸರ್ವದಾ ಹರಿಯುತ್ತಿರುವುದು. ನದಿಯು ಸಮುದ್ರಕ್ಕೆ ಸೇರಿದ ಅನಂತರ ಅಲ್ಲಿ ದಂಡೆಗಳ ಪ್ರತಿಬಂಧವಿಲ್ಲದಿರುವುದರಿಂದ ನಿರ್ಮಲವಾಗಿ ಪ್ರವಹಿಸುವ ನಿತ್ಯನೂತನವಾದ ನದಿಯೂ ಇರುವುದಿಲ್ಲ ಹರಿದುಬರುವ ನೀರಿಗೆ ಪ್ರತಿಬಂಧವಾಗಿ ಪ್ರಚೋದಿಸಿ ಪ್ರವಹಿಸುವಂತೆ ಮಾಡುವ ಎರಡು ದಂಡೆಗಳಿಲ್ಲದಿರುವುದರಿಂದಲೇ ಕೆರೆಗಳಲ್ಲಿಯೂ ಕೊಂಡಗಳಲ್ಲಿಯೂ ನೀರು ಮಲೆತು ಕೊಳೆತು ಹುಳುವಾಗಲು ಆಸ್ಪದವಾಗುತ್ತದೆ. ಆದ್ದರಿಂದ ಜೀವನವು (ಜಲವು) ಶುದ್ಧವಾಗಿ (ಪ್ರವಾಹಿಯಾಗಿರಬೇಕಾದರೆ) ಪ್ರಗತಿಶೀಲವಾಗಿರಬೇಕಾದರೆ ಪ್ರಚೋದಕವಾದ ಪ್ರತಿಬಂಧವೂ ಹಿತಕರವೇ ಆಗುತ್ತದೆ. ಹಗುರವಾದ ಹುಲ್ಲುಕಡ್ಡಿಯನ್ನೆತ್ತುವುದು ಸುಲಭವಾದರೂ ಅದರಿಂದ ರಟ್ಟೆಯ ಮಾಂಸಖಂಡಗಳಿಗೆ ಶಕ್ತಿಯು ಬರುವುದಿಲ್ಲ. ಆದರೆ ಭಾರವಾದ ಗದಾದಂಡಗಳನ್ನೆತ್ತುವುದು ಕಷ್ಟವಾದರೂ ಬಾಹುದಂಡಕ್ಕೆ ಅದರಿಂದಲೇ ಶಕ್ತಿಯೂ ಪುಷ್ಟಿಯೂ ದೊರಕುತ್ತವೆ. ಭೂಮಿಯಲ್ಲಿ ಕಾಠಿಣ್ಯವೂ ಘರ್ಷಣೆಯೂ ಪ್ರತಿರೋಧವೂ ಇರುವುದರಿಂದಲೇ ಸೈಕಲ್ಲು ಬಸ್ಸು ಮೊದಲಾದ

ವಾಹನಗಳು ಪ್ರತಿ ಅಂಗುಲಕ್ಕೂ ಇರುವ ಭೂಮಿಯ ಅಡ್ಡಿಯನ್ನು ಮೀರಿ ಮೀರಿ ಮುಂದೆ ಮುಂದೆ ಓಡುತ್ತವೆ. ಆತಂಕವಿಲ್ಲವಾದರೆ ಅತಿಕ್ರಮಣವೂ ಮಾರ್ಗಕ್ರಮಣವೂ ಸಹ ಇರಲಾರದು. ಅಡ್ಡಿಯೇ ಇಲ್ಲದಿರುವ ಆಕಾಶದಲ್ಲಿ ಸೈಕಲ್ ಮುಂತಾದ ವಾಹನಗಳು ಹೋಗಲಾರವು. ಆಕಾಶದಲ್ಲಿ ವಿಮಾನವಾದರೂ ಹೋಗುವುದಲ್ಲಾ ಎಂದರೆ, ಅಲ್ಲಿ ವಾಯುಮಂಡಲದ ಪ್ರತಿರೋಧವಿರುವುದರಿಂದಲೇ ವಿಮಾನವು ವಾಯುವನ್ನು ಕೊರೆಕೊರೆದು ಸೀಳಿಕೊಂಡು ಮುಂದೆ ಸಾಗುವುದು. ವಾಯುವೂ ಇಲ್ಲದ ಅನೇಕ ಸಾವಿರ ಅಡಿಗಳ ಮೇಲುಗಡೆ ವಿಮಾನವೂ ಹೋಗಲು ಸಾಧ್ಯವಾಗದಿರಬಹುದು. ಒಂದು ವೇಳೆ ಜೆಟ್ ಮೊದಲಾದವುಗಳಿಗೆ ಸಾಧ್ಯವಾದರೆ ಎದುರಾಳಿಯಾದ ಗುರುತ್ವಾಕರ್ಷಣಶಕ್ತಿಯಾದರೂ ಸಾಧನವಾಗುತ್ತದೆ.

ಹೀಗೆ ನಮ್ಮೊಳಗೂ ಹೊರಗೂ ಎಲ್ಲಾ ಕಡೆಯೂ ಸೃಷ್ಟಿಯಲ್ಲಿ ಪ್ರತಿಯೋಗವೂ ಪ್ರತಿರೋಧವೂ ಇರುವುದು ಪ್ರಗತಿ-ವಿಕಾಸಗಳಿಗೆ ಅಗತ್ಯವೂ ಅನಿವಾರ್ಯವೂ ಆಗಿವೆ.

ಭಗವತೀ ಬ್ಲವೆಟ್ಸ್ಕಿಯವರು ತಮ್ಮ 'ಗುಪ್ತವಿದ್ಯೆ'(ಸೀಕ್ರೆಟ್ ಡಾಕ್ಟ್ರಿನ್) ಎಂಬ ಗ್ರಂಥದಲ್ಲಿ ಸೃಷ್ಟಿವಿಲಾಸದಲ್ಲಿರುವ ಅನಿವಾರ್ಯವೂ ಅತ್ಯಗತ್ಯವೂ ಆಗಿರುವ ದ್ವಂದ್ವಾತ್ಮಕವಾದ ವಿರೋಧಕ್ಕೆ ವೈಜ್ಞಾನಿಕವಾಗಿ ಮಾಡಿರುವ ವ್ಯಾಖ್ಯಾನವು ಗಮನಾರ್ಹವಾಗಿದೆ.

"Indeed! Evil is but an antagonizing blind force in nature; it is reaction, opposition and contrast,—evil for some, good for others. There is only the shadow of light, without which light could have no existence, ever in our perceptions. If evil disappeared, good would disappear along with it from Earth.

In human nature, evil denotes only the polarity of matter and spirit, a struggle for life

between the two manifested principles, in Space and Time, which principles are one *per-se* (among themselves) in as much they are rooted in the Absolute. In Kosmos, the equilibrium must be preserved. The operations of the two contraries produce hormony, like the centripetal and centrifugal forces, which are necessary to each other, —mutually interdependent—" in order that both should live ". If one is arrested, the action of the other will become immediately self-destructive ".

" ನಿಜವಾಗಿಯೂ, ಕೆಡುಕೆಂಬುದು ಪ್ರಕೃತಿಯಲ್ಲಿರುವ ವಿರೋಧಿಯಾದ (ಆಸುರೀ) ಕುರುಡುಶಕ್ತಿಮಾತ್ರವಾಗಿದೆ; ಅದು (action and reaction are equal and opposite: ಕ್ರಿಯೆಯೂ ಪ್ರತಿಕ್ರಿಯೆಯೂ ಸಮಾನವೂ ವಿರೋಧವೂ ಆಗಿವೆ ಎಂಬ ವೈಜ್ಞಾನಿಕ ಸತ್ಯದಂತೆ, ಪ್ರತಿಯೊಂದು ಕ್ರಿಯೆಗೂ ತಪ್ಪದೇ ಇರುವ) ಪ್ರತಿಕ್ರಿಯೆಯೂ (ಅಥವಾ ಪ್ರತೀಕಾರವೂ) ಪ್ರತಿರೋಧವೂ (ಅಥವಾ ವಿಘ್ನವೂ) ಮತ್ತು (ವೈಪರೀತ್ಯವೂ, ವೈಲಕ್ಷಣ್ಯವೂ) ವ್ಯತಿರೇಕವೂ ಆಗಿದೆ; – ಅದು ಕೆಲವರಿಗೆ ಕೆಡುಕಾಗಿರಬಹುದು, ಇತರರಿಗೆ ಒಳಿತಾಗಿರಬಹುದು. ಯಾವುದಿಲ್ಲದಿದ್ದರೆ ಪ್ರಕಾಶವೂ ನಮ್ಮ ಸಂವೇದನೆಗಳಲ್ಲಿರುತ್ತಿರಲಿಲ್ಲವೋ ಅಂಥಾ ಬೆಳಕಿನ ನೆರಳೇ (ಛಾಯೆಯೇ) ಅದಾಗಿದೆ. ಕೆಡುಕು (ಆಸುರೀಭಾವ–ಪಾಪ) ಕಣ್ಮರೆಯಾದರೆ ಅದರ ಜೊತೆಗೆ ಒಳಿತೂ (ದೈವೀಭಾವ–ಪುಣ್ಯ) ಜಗತ್ತಿನಿಂದ ಮೈದೆಗೆಯುತ್ತಿತ್ತು.

ಪರಬ್ರಹ್ಮದಲ್ಲಿಯೇ ಬೇರುಬಿಟ್ಟು ನೆಲೆಸಿರುವುದರಿಂದ ಒಂದೇ ಆಗಿರುವ, ದೇಶಕಾಲಗಳಲ್ಲಿ ಅಭಿವ್ಯಕ್ತವಾದ ಎರಡು ತತ್ತ್ವಗಳ ಜೀವನ ಹೋರಾಟವೇ (ಪ್ರಕೃತಿ–ಪುರುಷರ) ಧ್ರುವಾಭಿಮುಖತ್ವವೆಂಬುದನ್ನು ಮನುಷ್ಯಸ್ವಭಾವದಲ್ಲಿರುವ ಪಾಪವು ಸೂಚಿಸುತ್ತದೆ. ವಿಶ್ವದಲ್ಲಿ ಸಮತೂಕವು (ಸಮತಾವಸ್ಥೆಯು) ರಕ್ಷಿತವಾಗಬೇಕು. ಎರಡೂ ಜೀವಿಸಲು ಅನ್ಯೋನ್ಯಾಶ್ರಯಭಾವದಿಂದ ಒಂದಕ್ಕೊಂದು ಆಗತ್ಯವಾದ ಕೇಂದ್ರಾಭಿಕರ್ಷಕ ಮತ್ತು ಕೇಂದ್ರಾಪಕರ್ಷಕ ಶಕ್ತಿ

ಗಳ ಹಾಗೆ ಎರಡು ವಿರೋಧಶಕ್ತಿಗಳ ಪ್ರವೃತ್ತಿಯು (ವಿಶ್ವದಲ್ಲಿ) ಇಂಪನ್ನೇ (Hormony) ಹುಟ್ಟಿಸುತ್ತದೆ. ಒಂದನ್ನು ತಡೆಗಟ್ಟಿದರೆ ಇನ್ನೊಂದರ ವ್ಯಾಪಾರವೂ ತತ್‌ಕ್ಷಣವೇ ಸ್ವನಾಶಕರವಾಗುತ್ತದೆ.".

ಹೀಗೆ ವಿದ್ಯಾಶಕ್ತಿಗೆ ಅವಿದ್ಯಾಶಕ್ತಿಯೂ, ಸಂಕಲ್ಪಶಕ್ತಿಗೆ ವಿಕಲ್ಪ ಶಕ್ತಿಯೂ, ರಾಗವೃತ್ತಿಗೆ ದ್ವೇಷವೃತ್ತಿಯೂ, ಪುಣ್ಯಬಲಕ್ಕೆ ಪಾಪಬಲವೂ, ಸುಖಭೋಗಕ್ಕೆ ದುಃಖಭೋಗವೂ ವಿರೋಧವಾದುದೂ ಒಂದರ ಉಳಿವೆಗೆ ಇನ್ನೊಂದು ಅಗತ್ಯವಾದುದೂ ಆಗಿವೆ. ನಿಜವಾದ ಸ್ವರೂಪಜ್ಞಾನವನ್ನು ಪಡೆಯುವುದಕ್ಕೆ ಮಾಯಾವಿಲಾಸಿಗಳಾದ ಈ ಎರಡು ಶಕ್ತಿಗಳೂ ವಿಘ್ನಗಳೇ ಆಗಿವೆ. ಒಂದು ಬಗೆಯ ಶಕ್ತಿಯು ಜೀವನವನ್ನು ಒಂದು ಕಡೆಗೆ ಎಳೆದರೆ, ಅದರ ಎದುರಾಳೀ ಶಕ್ತಿಯು ಅವನನ್ನು ಇನ್ನೊಂದೆಡೆಗೆ ಸೆಳೆಯುತ್ತದೆ. ಒಂದು ಶಕ್ತಿಯ ಪ್ರತಿಕ್ರಿಯೆಯೇ ಇನ್ನೊಂದು ಶಕ್ತಿಯಾದ್ದರಿಂದ ಇವುಗಳಲ್ಲಿ ಯಾವುದೊಂದನ್ನು ಆಶ್ರಯಿಸಿರುವವರೆಗೂ ತುಯ್ಯಾಟ ತೂಗಾಟಗಳೂ, ಅಶಾಂತಿಯೂ ತಪ್ಪುವುದಿಲ್ಲ.

ದುಃಖಪ್ರದವಾದ ಅವಿದ್ಯಾಶಕ್ತಿಯನ್ನು ನಾಶಮಾಡುವುದಕ್ಕಾಗಿ ವಿದ್ಯಾ ಶಕ್ತಿಯನ್ನೂ, ದ್ವೇಷಭಾವವನ್ನು ಕಳೆಯುವುದಕ್ಕಾಗಿ ಪ್ರೇಮಭಾವವನ್ನೂ, ಪಾಪಕರ್ಮವನ್ನು ಪರಿಹರಿಸುವುದಕ್ಕಾಗಿ ಪುಣ್ಯಕರ್ಮವನ್ನೂ ಆಶ್ರಯಿಸು ವುದೂ ಶಾಸ್ತ್ರೀಯ ಸಾಧನವೇ ಆಗಿದೆ. ಇದೇ ಎಲ್ಲಾ ಮತಗಳಲ್ಲಿಯೂ ಇರುವ ಧರ್ಮಸಾಧನೆಯಾಗಿದೆ. ಆದರೆ ಈ ಧರ್ಮಸಾಧನದಲ್ಲಿ ಇದರ ಪ್ರತಿಕ್ರಿಯಾ ತ್ಮಕವಾದ ವಿರೋಧಶಕ್ತಿಯ ಭಯವೂ ಬಿಗಿತವೂ (Tension) ಘರ್ಷಣೆಯೂ ಪ್ರತಿಭಟನೆಯೂ ತಪ್ಪುವುದಿಲ್ಲವಾದ್ದರಿಂದ ಪುಣ್ಯಾಪುಣ್ಯ, ವಿದ್ಯಾವಿದ್ಯೆಗಳ ಗೊಂದಲವನ್ನೇ ಬಿಟ್ಟು ಅವುಗಳ ಹೆಚ್ಚಿನ ಗೋಜಿಗೆ ಹೋಗದೇ ಆ ದ್ವಂದ್ವ ಶಕ್ತಿಗಳ ಏಕಮೂಲವಾದ ಆ ಮಹಾದಿವ್ಯಶಕ್ತಿಯನ್ನು ಗೌರವ ಪ್ರೇಮದಿಂದ ಆಶ್ರಯಿಸುವ ಭಕ್ತಿಯೋಗವೇ ಧರ್ಮಸಾಧನಕ್ಕಿಂತಲೂ ಶ್ರೇಷ್ಠಸಾಧನವಾಗಿದೆ.

ಪರಸ್ಪರ ಪ್ರತಿಕ್ರಿಯಾತ್ಮಕವಾದ ದ್ವಂದ್ವಶಕ್ತಿಗಳ ಮಾಯಾ ವಿಘ್ನವನ್ನು ಮೀರುವ ಜಾಣತನವುಳ್ಳ ಭಕ್ತನ ಅನನ್ಯಶರಣಾಗತಿಯ ಭಾವವನ್ನು ಭರ್ತೃಹರಿ ಮಹರ್ಷಿಯು ಸ್ವಾರಸ್ಯವಾಗಿ ಹೀಗೆ ಹೇಳಿದ್ದಾನೆ:

**ಸಂಧ್ಯಾವಂದನ ಭದ್ರಮಸ್ತು ಭವತೇ**
**ಭೋ ಸ್ನಾನ ತುಭ್ಯಂ ನಮಃ ।**
**ಹೇ ದೇವಾಃ ಪಿತರಶ್ಚ ತರ್ಪಣವಿಧೌ**
**ನಾಹಂ ಕ್ಷಮಃ ಕ್ಷಮ್ಯತಾಂ ॥**
**ಯತ್ರ ಕ್ವಾಪಿ ನಿಷದ್ಯ ಯಾದವಕುಲೋ-**
**ತ್ತಂಸಸ್ಯ ಕಂಸದ್ವಿಷಃ ।**
**ಸ್ಮಾರಂ ಸ್ಮಾರಮಘಂ ಹರಾಮಿ ತದಲಂ**
**ಮನ್ಯೇ ಕಿಮನ್ಯೇನ ಮೇ ॥**

"ಹೇ ಸಂಧ್ಯಾವಂದನೆಯೇ! ನಿನಗೆ ಮಂಗಳವಾಗಲಿ; ಎಲೈ ಸ್ನಾನವೇ! ನಿನಗೆ ನಮಸ್ಕಾರ; ಎಲೈ ದೇವತೆಗಳೇ! ಪಿತೃಗಳೇ! ನಿಮಗೆ ತರ್ಪಣಾದಿಗಳನ್ನು ಕೊಟ್ಟು ತೃಪ್ತಿಪಡಿಸಲು ನಾನು ಸಮರ್ಥನಲ್ಲ; ಕ್ಷಮಿಸಿರಿ. ಎಲ್ಲಿಯಾದರೂ ಕುಳಿತು ಯಾದವಶ್ರೇಷ್ಠನಾದ ಕಂಸಾರಿ (ವಿಷ್ಣು) ಯನ್ನು ನೆನೆನೆನೆದು ಪಾಪವನ್ನು ಕಳೆಯುತ್ತೇನೆ; ಇಷ್ಟೇ ಸಾಕು, ಇನ್ನಾವುದರಿಂದ ಏನಾಗಬೇಕು ನನಗೆ? ಎಂದು ಭಾವಿಸುತ್ತೇನೆ."

ಗೀತೆಯ ಕೊನೆಯಲ್ಲಿ ಭಗವಂತನೂ,

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥**

"ಅರ್ಜುನ! ನಿನ್ನ ಎಲ್ಲಾ ಧರ್ಮಗಳನ್ನೂ ಬಿಟ್ಟು ಸರ್ವಾತ್ಮನೂ ಅಚ್ಯುತನೂ ಜನ್ಮಕರ್ಮಾದಿಗಳಿಲ್ಲದವನೂ ಈಶ್ವರನೂ ಆದ ನನ್ನ ಹೊರತು ಬೇರೆ ಇಲ್ಲವೆಂದು ತಿಳಿದು ಶರಣು ಬಾ. ನಿನ್ನನ್ನು ನಾನು ಎಲ್ಲಾ ಬಗೆಯ ಪಾಪಗಳಿಂದಲೂ ರಕ್ಷಿಸುತ್ತೇನೆ; ಶೋಕಿಸಬೇಡ!" ಎಂದು ಹೇಳಿದ್ದಾನೆ.

ಏಕೆಂದರೆ, ಯಾವುದೊಂದು ಈಶ್ವರಶಕ್ತಿಯಿಂದ ದ್ವಂದ್ವಾತ್ಮಕವಾದ ಸಮಸ್ತ ವಿರೋಧಶಕ್ತಿಗಳ ಮಹಾಪಿಷ್ಟವು ಉದಯವಾಗಿರುವುದೋ ಆ ಮಹಾ ಮೂಲಶಕ್ತಿಯೇ ಅದನ್ನು ನುಂಗಿಕೊಂಡಿರುವ ಹಾಗೂ ಮೀರಿದ ಸುಂಗುವ ಸಾಮರ್ಥ್ಯವುಳ್ಳುದು. ಪ್ರಕೃತಿ ಪುರುಷರ ವಿಲಾಸವಾದ ಸೃಷ್ಟಿಯು ದ್ವಂದ್ವಾ

ತ್ಮಕವಾದುದು. ಇದು ಅನಿತ್ಯ, ಅಸತ್ಯ, ಆಭಾಸ ಅಂದರೆ ತೋರಿಕೆ ಮಾತ್ರವಾದುದು; ತೋರಿ ಅಳಿಯತಕ್ಕುದು. ಇದು ಸತ್ಯವೆಂಬ ಭ್ರಮೆಯೇ ವಿಘ್ನರೂಪವೂ ದುಃಖಕಾರಕವೂ ಆಗಿದೆ. ದೂರದ ಬಯಲಿನ ಬಿಸಿಲ ಝಳದಲ್ಲಿ ತೋರುವ ಜಲತರಂಗವನ್ನು ಸತ್ಯವೆಂದು ತಿಳಿಯುವುದರಿಂದ ನೀರುಕುಡಿಯಲು ಅಲ್ಲಿಗೆ ಓಡಿಹೋಗುವ ಪ್ರಯತ್ನವೂ ಪ್ರಯಾಸವೂ ತಪ್ಪುವುದಿಲ್ಲ. ತೋರಿಕೆಯ ನೀರನ್ನು ನಿಜವಾದ ನೀರೆಂದು ನಂಬುವುದೇ ದುಃಖಕರವೂ, ಬಿಸಿಲ ಝಳವೆಂದು (ನಿಜವನ್ನು) ತಿಳಿಯುವುದಕ್ಕೆ ವಿಘ್ನಕಾರಿಯೂ ಆಗಿದೆ. ಈ ವಿಘ್ನವು ವಿನಾಶವಾಗುವವರೆಗೂ ಸತ್ಯಜ್ಞಾನವಾಗುವುದಿಲ್ಲ. ಸತ್ಯಸ್ವರೂಪದ ಜ್ಞಾನವೇ ಮಾಯಾವಿಘ್ನವನ್ನು ವಿನಾಶಮಾಡುವ ಶಕ್ತಿಯುಳ್ಳುದೂ ಸುಖಪ್ರದವೂ ಆಗಿದೆ

ವಿಘ್ನೇಶ್ವರ, ವಿಘ್ನವಿನಾಶಕ, ವಿನಾಯಕ ಮೊದಲಾದ ಅನ್ವರ್ಥಕನಾಮವುಳ್ಳ ಗಜಾನನ ದೇವನ ತತ್ತ್ವವೇ ಇದಾಗಿದೆ. ಮಹಾ ಮಹಾ ವೃಕ್ಷಗಳನ್ನೂ ಮುರಿದು ನುಂಗುವ ಮಹಾಶಕ್ತಿಯುಳ್ಳ ಬೃಹತ್‌ಪ್ರಾಣಿಯಾದ ಆನೆಯ ಮುಖವೇ ವಿಘ್ನೇಶ್ವರ ದೇವನಿಗೆ ಕಲ್ಪಿತವಾಗಿರುವುದು ಮಾಯಾಮಹಾವಿಘ್ನವನ್ನು ಮುರಿದು ನುಂಗುವ ಸಾಮರ್ಥ್ಯವುಳ್ಳವನೆಂಬ ತತ್ತ್ವದ ರೂಪಕವಾಗಿದೆ. ಆನೆಗೆ ಸೂಕ್ಷ್ಮಬುದ್ಧಿಯಿರುವುದು ಪ್ರಸಿದ್ಧ. ಇದರಿಂದ ಗಜಮುಖನು ಜ್ಞಾನಸ್ವರೂಪನೆಂದೂ, ಭಕ್ತನು ಶುದ್ಧವೂ ತೀಕ್ಷ್ಣವೂ ಆದ ಬುದ್ಧಿಯಿಂದ ಅವನನ್ನು ಅರಿಯಬೇಕೆಂದೂ ಸಂಕೇತವು. ಒಟ್ಟಿನ ಮೇಲೆ ಗಣೇಶನೆಂದರೆ ಪಂಚವಿಂಶತಿತತ್ತ್ವಗಣನಾಯಕನೂ ಸೃಷ್ಟಿ ಸ್ಥಿತಿ ಲಯಕರ್ತನೂ ಆದ ಈಶ್ವರನು.

ಯೋಗಶಾಸ್ತ್ರದ ಪ್ರತಿಕ್ರಿಯೆಯಂತೆ ನಮ್ಮ ದೇಹದಲ್ಲಿ ಮೂಲಾಧಾರಚಕ್ರವೇ ಗಣಪತಿಯ ಅಧಿಕಾರ-ಸಾನ್ನಿಧ್ಯಗಳ ಸ್ಥಾನ. ಪರಮಾತ್ಮನನ್ನು ವಿಘ್ನೇಶ್ವರನೆಂದು ಉಪಾಸಿಸುವುದರಿಂದ ಮಾಯಾಜನ್ಯ ವಿಘ್ನಗಳೆಲ್ಲಾ ಪರಿಹಾರವಾಗಿ ಬ್ರಹ್ಮಸಾಕ್ಷಾತ್ಕಾರವಾಗುವುದು.

ಗಣಪತ್ಯುಪನಿಷತ್ತಿನಲ್ಲಿ. “ತ್ವಂ ಬ್ರಹ್ಮಾ ತ್ವಂ ವಿಷ್ಣುಸ್ತ್ವಂ ರುದ್ರಸ್ತ್ವಮಿಂದ್ರಸ್ತ್ವಮಗ್ನಿಸ್ತ್ವಂ ವಾಯುಸ್ತ್ವಂ ಸೂರ್ಯಸ್ತ್ವಂ ಚಂದ್ರಮಾಸ್ತ್ವಂ ಬ್ರಹ್ಮ ಭೂರ್ಭುವಸ್ಸುವರೋಂ” “ಏತ್ತೈ ಗಣಪತ

ದೇವನೇ ! ನೀನೇ ಚತುರ್ಮುಖ ಬ್ರಹ್ಮನೂ, ನೀನೇ ವಿಷ್ಣುವೂ, ನೀನೇ ರುದ್ರನೂ ಇಂದ್ರನೂ ಅಗ್ನಿಯೂ ವಾಯುವೂ, ನೀನೇ ಸೂರ್ಯನೂ ಚಂದ್ರನೂ, ನೀನೇ ಪ್ರಣವರೂಪ ಸಮಸ್ತ ಲೋಕಗಳೂ ಪರಬ್ರಹ್ಮನೂ ಆಗಿದ್ದೀ. ”

**ಭಕ್ತಾನುಕಂಪಿನಂ ದೇವಂ ಜಗತ್ಕಾರಣಮಚ್ಯುತಂ ।**
**ಆವಿರ್ಭೂತಂ ಚ ಸೃಷ್ಟ್ಯಾದೌ ಪ್ರಕೃತೇಃಪುರುಷಾತ್ಪರಂ ॥**

“ ಜಗತ್ತಿನ ಉತ್ಪತ್ತ್ಯಾದಿಗಳಿಗೆ ಕಾರಣನೂ, ನಾಶರಹಿತನೂ, ಪ್ರಕೃತಿಗೂ ಪುರುಷನಿಗೂ ಶ್ರೇಷ್ಠನಾದವನೂ, ಸೃಷ್ಟಿಗೆ ಮೊದಲೇ ಆವಿರ್ಭವಿಸಿದವನೂ ಭಕ್ತರಿಗೆ ಕರುಣಾಕರನೂ ಆದ ಗಣಪತಿದೇವನನ್ನು ವಂದಿಸುತ್ತೇನೆ ” ಎಂದು ಹೇಳಿದೆ.

ಇನ್ನು ಶಕ್ತಿದೇವತೆಯ ವಿಚಾರವನ್ನು ತೆಗೆದುಕೊಳ್ಳೋಣ. ಸೃಷ್ಟಿಯು ಹೇಗಾಯಿತೆಂಬುದಕ್ಕೆ ತೈತ್ತಿರೀಯ ಶ್ರುತಿಯು “ **ಸೋಽಕಾಮಯತ**........” “ ಅವನು (ಭಗವಂತನು) ಬಹುರೂಪನಾಗಬೇಕೆಂದು ಬಯಸಿದನು, ಹಾಗೆಯೇ ಆಗಿ ಜನಿಸಿದನು ” ಎಂದು ಹೇಳಿದೆ. ನಾನು ಬಹುರೂಪನಾಗಬೇಕು ಎಂದು ಬಯಸುವುದಕ್ಕೆ ಮೊದಲು ‘ ನಾನಿದ್ದೇನೆ ’ ಎಂಬ ಜ್ಞಾನವು ಬೇಕು. ಅಂದರೆ, ಬ್ರಹ್ಮದಲ್ಲಿ ಇಚ್ಛಾಶಕ್ತಿಗೆ ಮೊದಲು ಜ್ಞಾನಶಕ್ತಿಯಿರಬೇಕು. ಆ ಚಿಚ್ಛಕ್ತಿಯೇ ಮೂಲ ಮಾಯಾ ಜಗನ್ಮಾತೆ. ಈಕೆಯೇ ದೇವಿ. ಈಕೆ ಬ್ರಹ್ಮ, ವಿಷ್ಣು, ಶಿವರಿಗೂ ತಾಯಿಯಾದವಳು. ಏಕೆಂದರೆ, ಬ್ರಹ್ಮ ವಿಷ್ಣು ಶಿವರು ಚಿಚ್ಛಕ್ತಿಯಲ್ಲಿ ಪ್ರತಿಫಲಿತ ಚೈತನ್ಯರು. ಪರಬ್ರಹ್ಮ ಸ್ವರೂಪಿಣಿಯಾದ ಶ್ರೀ ದೇವಿಯೇ ಸೃಷ್ಟಿ-ಸ್ಥಿತಿ-ಲಯಾದಿ ಕಾರ್ಯಗಳಿಗೋಸ್ಕರ ಬ್ರಹ್ಮ ವಿಷ್ಣು ರುದ್ರರ ಮತ್ತು ಇವರ ಶಕ್ತಿಗಳಾದ ಶಾರದಾ ಲಕ್ಷ್ಮೀ ಪಾರ್ವತಿಯರ ಸ್ವರೂಪಳಾಗಿರುವಳು.

ಸವಮಕ್ಕಳು ತನ್ನ ಗರ್ಭದಲ್ಲಿ ಧರಿಸಿ ಪ್ರಸವಿಸಿ ಪರಿಪೋಷಣ ಲಾಲನಗಳನ್ನು ಮಾಡುವ ತಾಯಿಯೇ ತಂದೆಗಿಂತಲೂ ಮುಖ್ಯಳು. ತಾಯಿಯಿಂದಲೇ ತಂದೆಯು ಗುರುತಾಗುವುದರಿಂದ ತಾಯಿಯೇ ಮೊದಲಿನವಳು. ವೇದವೂ “ **ಮಾತಾ ಪೂರ್ವರೂಪಂ ಪಿತೋತ್ತರ ರೂಪಂ** ” ಎಂದೂ, “ **ಮಾತೃದೇವೋ ಭವ, ಪಿತೃದೇವೋ ಭವ** ” ಎಂದೂ ಹೇಳುತ್ತಿದೆ.

ಲೋಕದ ತಂದೆತಾಯಿಗಳಾದ ತ್ರಿಮೂರ್ತಿಗಳಿಗೂ ತ್ರಿಶಕ್ತಿಗಳಿಗೂ ಮಹಾ ಮಾತೆಯಾಗಿರುವುದರಿಂದಲೇ ಪರಬ್ರಹ್ಮಸ್ವರೂಪಿಣಿಯಾದ ಶ್ರೀ ದೇವಿಯನ್ನೇ ಸರ್ವಶ್ರೇಷ್ಠಳನ್ನಾಗಿ ಉಪಾಸಿಸಬೇಕು.

ಪ್ರೇಮರೂಪವಾದ ಭಕ್ತಿಯೋಗದಲ್ಲಿ ಪ್ರಾಪ್ತಿಮಾಡಿಕೊಳ್ಳಬೇಕಾದ ಪರ ಮಾತ್ಮನೂ ಅನಿರ್ವಚನೀಯ ಪ್ರೇಮಸ್ವರೂಪನೇ ಆಗಿದ್ದಾನೆ. ಪ್ರೇಮ ಮತ್ತು ಜ್ಞಾನಗಳಲ್ಲಿ ಪ್ರೇಮವು ಹೆಣ್ಣು, ಜ್ಞಾನವು ಗಂಡು. ಏಕೆಂದರೆ, ಪ್ರೇಮವು ಮೃದುವೂ ಮಧುರವೂ ಕೋಮಲವೂ ಲಲಿತವೂ ಕರುಣಾ ಮಯವೂ ಆದುದು. ಜ್ಞಾನಾನಂದ ಸ್ವರೂಪವಾದ ಪರಬ್ರಹ್ಮದಲ್ಲಿ ಪ್ರೇಮ ರೂಪವಾದ ಆನಂದವೇ ಜ್ಞಾನದ ಶಕ್ತಿಯು ಅಥವಾ ಚಿಚ್ಛಕ್ತಿಯು.

ಅನಂತ ಕಲ್ಯಾಣಗುಣಗಳು ತುಂಬಿರುವ ಪರಮಾತ್ಮನಲ್ಲಿ ಈಶ್ವರ ಕಾರುಣ್ಯವನ್ನು ಅಪೇಕ್ಷಿಸುವ ಭಕ್ತನು ಪ್ರೇಮಮಯವೂ ಕರುಣಾಮಯವೂ ಆದ ಮಹೋತ್ಕೃಷ್ಟ ಗುಣವನ್ನು ನೋಡಿ, ಪರಮಾತ್ಮನನ್ನು ಅದಕ್ಕನುಗುಣ ವಾದ ಜಗಜ್ಜನನಿಯ ರೂಪದಿಂದ ಉಪಾಸಿಸುತ್ತಾನೆ. ಇದೇ ದೇವಿಯು ಅಥವಾ ಶಕ್ತಿಯ ತತ್ತ್ವ.

ಜಗತ್ತಿನಲ್ಲಿರುವ ಮುಖ್ಯವಾದ ಬೇರೆ ಧರ್ಮಗಳ ಉಪಾಸನಾವಿಧಿ ಗಳನ್ನು ನೋಡಿದರೆ, ವೈದಿಕ ಧರ್ಮದಲ್ಲಿ ಮಾತ್ರ ದೇವರನ್ನು ಲೋಕಮಾತೆ ಯನ್ನಾಗಿ ಭಾವಿಸುವ ಉದಾತ್ತಕಲ್ಪನೆಯಿರುವುದೂ, ಹೆಣ್ಣನ್ನೇ ಶಕ್ತಿಯನ್ನಾಗಿ ಗುರುತಿಸಿ ಗೌರವಿಸುವುದೂ ಕಂಡುಬರುತ್ತದೆ.

ಈ ಗೌರವದ ಪರಮಾವಧಿಯನ್ನು ಹೇಳಬೇಕೆಂದರೆ ದ್ವಿಜತ್ವವು ಪ್ರಾಪ್ತಿ ಯಾಗುವುದೇ ಉಪನಯನದಲ್ಲಾಗುವ ಗಾಯತ್ರೀ ಮಾತೆಯ ಉಪಾಸನಾ ದೀಕ್ಷೆಯ ಮೂಲಕವಾಗಿದೆ. ಗಾಯತ್ರಿಯು ವೇದಜನನಿಯಾಗಿಯೂ, ಇಪ್ಪತ್ತುನಾಲ್ಕು ತತ್ತ್ವಗಳುಳ್ಳ ಮಂತ್ರಸ್ವರೂಪಳಾಗಿಯೂ, ಪರಾ, ಪಶ್ಯಂತೀ, ಮಧ್ಯಮಾ, ವೈಖರೀ ಸ್ವರೂಪಳೂ ಆಗಿ ಓಂಕಾರ ಗಾನದಿಂದ ಉಪಾಸಿಸು ವವರನ್ನು ರಕ್ಷಿಸತಕ್ಕವಳು. ವೈದಿಕ ಮತದಲ್ಲಿ ಯಾವನೂ ಶೈವನಲ್ಲ, ಯಾವನೂ ವೈಷ್ಣವನಲ್ಲ, ಗಾಣಾಪತ್ಯನೂ ಅಲ್ಲ, ಸೌರನೂ ಅಲ್ಲ. ಎಲ್ಲರೂ ತಾಯಿಯ ಬಸಿರಿಂದಲೇ ಹುಟ್ಟಬರುವಂತೆ ಸರ್ವರೂ ಶಾಕ್ತರು. ಶಕ್ತಿಯಿಂದಲೇ ಶಕ್ತರಾದ ವಿಷ್ಣು, ಶಿವ ಮೊದಲಾದವರು ತಮ್ಮ ಲೋಕರಕ್ಷಣಾದಿ ಕರ್ತವ್ಯ

ಗಳನ್ನು ಮಾಡಬಲ್ಲರು. ಶಕ್ತಿಯಿಲ್ಲವಾದರೆ ಶಿವನೂ ಶವರೂಪನೇ ಆಗುವನು ಇದನ್ನು ಆಚಾರ್ಯ ಶಂಕರರು ತಮ್ಮ ದೇವ್ಯಪರಾಧಕ್ಷಮಾಪಣ ಸ್ತೋತ್ರದಲ್ಲಿ ಅಲಂಕಾರಿಕವಾಗಿ ಬಹಳ ಸ್ವಾರಸ್ಯವಾಗಿ ಹೇಳಿದ್ದಾರೆ:

**".ಚಿತಾಭಸ್ಮಾಲೇಪೋ ಗರಳಮಶನಂ ದಿಕ್ಪಟಧರೋ । ಜಟಾಧಾರೀ ಕಂಠೇ ಭುಜಗಪತಿಹಾರೀ ಪಶುಪತಿಃ । ಕಪಾಲೀ ಭೂತೇಶೋ ಭಜತಿ ಜಗದೀಶೈಕಪದವೀಂ । ಭವಾನಿ ತ್ವತ್ಪಾಣಿಗ್ರಹಣ ಪರಿಪಾಟೀ ಫಲಮಿದಂ ॥ "**

" ಮಸಣದಲ್ಲಿ ಮೈಗೆಲ್ಲಾ ಹೆಣದ ಬೂದಿಯನ್ನು ಹಚ್ಚಿಕೊಂಡಿರುವವನೂ, ವಿಷವೇ ಆಹಾರವಾಗಿ ಉಳ್ಳವನೂ, ದಿಗಂಬರನೂ, ಜಟೆಯನ್ನುಳ್ಳವನೂ, ನಾಗಾಭರಣನೂ, ಪಶುಗಳಿಗೆಲ್ಲಾ ಯಜಮಾನನೂ, ತಲೆಯ ಬುರುಡೆಯನ್ನೇ ಭಿಕ್ಷಾಪಾತ್ರೆಯಾಗಿ ಹಿಡಿದಿರುವವನೂ ಭೂತಪ್ರೇತ ಪಿಶಾಚಾದಿಗಳ ಒಡೆಯನೂ ಆದ ರುದ್ರನು ಜಗದೀಶ್ವರ ಪದವಿಯನ್ನು ಅಲಂಕರಿಸಿರುವುದು ಹೇ ಭವಾನೀ ದೇವಿಯೇ! ಕೇವಲ ನಿನ್ನ ಕೈಹಿಡಿದಿರುವ ಪುಣ್ಯಪ್ರಭಾವದ ಫಲವೇ ಆಗಿದೆ."

ಶಕ್ತಿಯಿಲ್ಲದೇ ಯಾವ ಕಾರ್ಯವೂ ನಡೆಯುವುದಿಲ್ಲವೆಂಬುದು ಪ್ರಸಿದ್ಧ. ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳು ನಡೆಯುವುದಕ್ಕೂ ಮಹಾಶಕ್ತಿಯ ಅಗತ್ಯವಿರುವುದು ಸ್ವಾಭಾವಿಕವಾಗಿದೆ. ಸೃಷ್ಟ್ಯಾದಿಗಳಿಗೆ ಆದಿಯಲ್ಲಿರುವುದು ಪರಬ್ರಹ್ಮ ಒಂದೇ. ಆದುದರಿಂದ ಚೈತನ್ಯಮಯಿಯಾದ ಆ ಬ್ರಾಹ್ಮೀಶಕ್ತಿಯೇ ಜಗಜ್ಜನನಿಯಾದ ತ್ರಿಪುರಸುಂದರೀ ಶ್ರೀ ಲಲಿತಾದೇವಿಯು.

ಲೋಕಮಾತೆಯಾದ ಮಹಾಮಾಯಾ ಆದಿಶಕ್ತಿಯೇ ಸೃಷ್ಟಿಯಲ್ಲಿ ಏಳು ಬಗೆಯಾದ ಶಕ್ತಿಗಳಾಗಿ ಅಭಿವ್ಯಕ್ತವಾಗಿದ್ದಾಳೆ. ಇದಕ್ಕೇ ಸಪ್ತಮಾತೃಕಾ ಶಕ್ತಿಗಳೆಂದು ಹೆಸರು. ಸಪ್ತವ್ಯಾಹೃತಿಗಳಾಗಿಯೂ ಸಪ್ತಲೋಕಗಳಾಗಿಯೂ ಆಗಿರುವುದು ಇದೇ ಶಕ್ತಿ. ನಮ್ಮ ದೇಹದಲ್ಲಿ ಮೂಲಾಧಾರಾದಿ ಸಹಸ್ರಾರಾಂತವಾದ ಸಪ್ತಚಕ್ರಗಳು, ಸಪ್ತಮಾತೃಕಾ ಶಕ್ತಿಗಳೂ (ಭೂರ್ಭುವಸ್ಸುವರಾದಿ) ಸಪ್ತವ್ಯಾಹೃತಿಗಳೂ (ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ) ಸಪ್ತಲೋಕಗಳೂ ತತ್ತ್ವತಃ ಪ್ರಕಾಶಿಸುವ ಕೇಂದ್ರಗಳು.

ಸೃಷ್ಟಿಯಲ್ಲಿರುವ ಈ ಸಪ್ತಶಕ್ತಿಗಳಾವುವೆಂದರೆ, (ದಿ ಸೀಕ್ರೆಟ್ ಡಾಕ್ಟ್ರಿನ್) I. 292

1. **ಪರಾಶಕ್ತಿ :** ಅತ್ಯಂತ ಶ್ರೇಷ್ಠವಾದ ಶಕ್ತಿ. ಇದು ತಾಪ-ಪ್ರಕಾಶಗಳ ಶಕ್ತಿಗಳನ್ನು ಒಳಗೊಂಡಿದೆ.

2. **ಜ್ಞಾನಶಕ್ತಿ :** ಇದೇ ಮೇಧಾಶಕ್ತಿ, ಬುದ್ಧಿಶಕ್ತಿ ಅಥವಾ ವಿದ್ಯಾಶಕ್ತಿ. ಇದು ಎರಡು ಬಗೆಯಾಗಿದೆ. ಭೌತಿಕ ಉಪಾಧಿಗಳ ಪ್ರಭಾವಕ್ಕೊಳಗಾದಾಗ ಅಥವಾ ಅಧೀನವಾದಾಗ ಇವೇ ಅದರ ಕೆಲವು ಅಭಿವ್ಯಕ್ತಿಗಳು :

   i] (ಕ) ನಮ್ಮ ಸಂವೇದನೆಗಳನ್ನು ಅರ್ಥಮಾಡಿಕೊಳ್ಳುವುದರಲ್ಲಿ ಇರುವ ಮನಸ್ಸಿನ ಶಕ್ತಿ.

   (ಖ) ಹಿಂದಿನ ಭಾವಗಳನ್ನು ನೆನೆಯುವುದಕ್ಕೂ ಮುಂದಿನ ಕಾಂಕ್ಷೆಗಳನ್ನು ಎತ್ತುವುದಕ್ಕೂ ಅದಕ್ಕಿರುವ ಶಕ್ತಿ.

   (ಗ) ಬಾಹ್ಯವಿಷಯದ ಭಾವನೆಯನ್ನು ಹುಟ್ಟಿಸುವಂಥ ವಿವಿಧ ಸಂವೇದನಾ ಸಮೂಹಗಳಿಗೂ ಸಂವೇದನಾ ಸಂಭವಗಳಿಗೂ ಸ್ಥಾಯಿಯಾದ ಸಂಬಂಧವನ್ನು ಕಲ್ಪಿಸುವುದಕ್ಕೆ ಸಾಧ್ಯವಾಗಿ ಮಾಡುವ ಆಧುನಿಕ ಮನಶ್ಶಾಸ್ತ್ರಜ್ಞರಿಂದ ಹೇಳಲ್ಪಡುವ 'ಸಹವಾಸ ನಿಯಮ'ಗಳಲ್ಲಿ ಪ್ರಕಟವಾಗುವ ಶಕ್ತಿ.

   (ಘ) ಗೂಢವಾದ ಸ್ಮೃತಿಶಕ್ತಿಯ ಯೋಗದಿಂದ ನಮ್ಮ ಭಾವನೆಗಳನ್ನು ಒಟ್ಟುಗೂಡಿಸಿ ಆತ್ಮಪ್ರತ್ಯಯವನ್ನು ಅಥವಾ ವ್ಯಕ್ತಿಭಾವನೆಯನ್ನು ಉತ್ಪತ್ತಿಮಾಡುವ ಅದರ ಶಕ್ತಿ.

   ii] ಭೌತಿಕವಾದ ಉಪಾಧಿಗಳಿಂದ ಬಿಡುಗಡೆ ಹೊಂದಿದಾಗ ಪ್ರಕಾಶವಾಗುವ ಅದರ ಕೆಲವು ಮಹಿಮೆಗಳು ;

   (ಕ) ದಿವ್ಯದರ್ಶನ ಸಿದ್ಧಿ. (ಖ) ಮನೋಭಿಜ್ಞತಾ ಸಿದ್ಧಿ.

3. **ಇಚ್ಛಾಶಕ್ತಿ :** ಇದೇ (ಪ್ರಚಂಡವಾದ) ಸಂಕಲ್ಪಶಕ್ತಿ. ಉದ್ದಿಷ್ಟ ಕಾರ್ಯಸಾಧನೆಗಾಗಿ ಅಗತ್ಯವಾದ ಮಾಂಸಖಂಡಗಳನ್ನು ಕ್ರಿಯಾಶೀಲ

ವಾಗಿ ಮಾಡುವಂಥ ವಿಶಿಷ್ಟ ನಾಡೀವಾಹಿನಿಯನ್ನು ಸಂಜನಿಯಿಸುವ ಅದರ ಸರ್ವಸಾಧಾರಣವಾದ ಶಕ್ತಿ.

4. **ಕ್ರಿಯಾಶಕ್ತಿ** : ತನ್ನಲ್ಲಿರುವ ಸಹಜವಾದ ಶಕ್ತಿಯಿಂದ ಹೊರಗೆ ಕಾಣುವ ಭೌತಿಕ ಫಲವನ್ನು ಸಾಧಿಸುವ ಯೋಗ್ಯತೆಯುಳ್ಳ ಗಹನವಾದ ಭಾವನಾ ಶಕ್ತಿ. ಒಬ್ಬನ ಲಕ್ಷ್ಯವು ಅವನ ಯಾವುದೊಂದು ಭಾವನೆಯ ಮೇಲೆಯೇ ತೀವ್ರವಾಗಿ ಸಂಯಮಿತವಾದರೆ, ಆ ಭಾವನೆಯು ಬಾಹ್ಯದಲ್ಲಿ ತಾನಾ ಗಿಯೇ ಪ್ರತ್ಯಕ್ಷ ಸಿದ್ಧವಾಗುವುದೆಂದು ಪೂರ್ವಿಕರು ತಿಳಿದಿದ್ದರು. ಹಾಗೆಯೇ ಉತ್ಕಟವಾದೊಂದು ಸಂಕಲ್ಪವು ಇಷ್ಟಸಿದ್ಧಿಯನ್ನು ಹೊಂದು ತ್ತದೆ.

ಒಬ್ಬ ಯೋಗಿಯು ಇಚ್ಛಾಶಕ್ತಿ ಮತ್ತು ಕ್ರಿಯಾಶಕ್ತಿಗಳ ಪ್ರಭಾವ ದಿಂದ ತನ್ನ ಚಮತ್ಕಾರಗಳನ್ನು ಮಾಡಿ ತೋರಿಸುತ್ತಾನೆ.

5. **ಕುಂಡಲಿನೀ ಶಕ್ತಿ** : ಅಂದರೆ ಕುಂಡಲಾಕಾರವಾದ ಪಥದಲ್ಲಿ ಚಲಿಸುವ ಶಕ್ತಿ. ಪ್ರಕೃತಿಯಲ್ಲಿ ಎಲ್ಲೆಡೆಯಲ್ಲಿಯೂ ವ್ಯಕ್ತವಾಗುವ ವಿಶ್ವವ್ಯಾಪಕ ವಾದ ಪ್ರಾಣತತ್ತ್ವವೇ ಅದು. ಆಕರ್ಷಣ–ವಿಕರ್ಷಣ ರೂಪ ಎರಡು ಮಹಾ ಶಕ್ತಿಗಳನ್ನು ಈ ಕುಂಡಲಿನೀ ಶಕ್ತಿಯು ಒಳಗೊಂಡಿದೆ. ವಿದ್ಯು ಚ್ಛಕ್ತಿಯೂ ಚುಂಬಕಶಕ್ತಿಯೂ ಅದರ ಅಭಿವ್ಯಕ್ತಿಮಾತ್ರವಾಗಿವೆ. ಹರ್ಬರ್ಟ್ ಸ್ಪೆನ್ಸರ್ ಮತದಂತೆ ಜೀವನಸಾರವೆಂದೆನಿಸುವ " ಹೊರಗಿನ ಋಣಸಂಬಂಧಗಳಿಗೆ ಒಳಗಿನ ಕರ್ಮಸಂಬಂಧಗಳನ್ನು ನಿರಂತರವಾಗಿ ಸರಿಹೊಂದಿಸು"ತ್ತಿರುವ, ಹಾಗೂ ಪ್ರಾಚೀನ ವೈದಿಕ ತತ್ತ್ವಜ್ಞರ ಸಿದ್ಧಾಂತದಂತೆ ಜೀವರ ಜನ್ಮಾಂತರ ಗತಿಗಳಿಗೆ ಆಧಾರವೆನಿಸುವ " ಒಳಗಿನ ಕರ್ಮಸಂಬಂಧಗಳಿಗೆ ಹೊರಗಿನ ಋಣಾನುಬಂಧಗಳನ್ನು ಅವಿಚ್ಛಿನ್ನವಾಗಿ ಸರಿಜೋಡಿಸು"ತ್ತಿರುವ ಶಕ್ತಿಯೇ ಅದು. ಮೋಕ್ಷ ವನ್ನು ಹೊಂದುವುದಕ್ಕೆ ಮೊದಲು ಯೋಗಿಯು ಈ ಶಕ್ತಿಯನ್ನು ಸಂಪೂರ್ಣವಾಗಿ ನಿಗ್ರಹ ಮಾಡಬೇಕು.

6. **ಮಂತ್ರಶಕ್ತಿ** : ಇದು ಅಕ್ಷರಗಳ ಅಥವಾ ಶಬ್ದಗಳ ಅಥವಾ ಗಾನದ ಶಕ್ತಿಯು. ಈ ಶಕ್ತಿಯ ಎಲ್ಲಾ ವ್ಯಕ್ತರೂಪಗಳೂ ಮಂತ್ರಶಾಸ್ತ್ರದ

ಮುಖ್ಯ ವಿಷಯವಾಗಿದೆ. ಗಾನಮಾಧುರ್ಯದ ಪ್ರಭಾವವು ಅದರ ಸಾಮಾನ್ಯ ವ್ಯಕ್ತರೂಪಗಳಲ್ಲಿ ಒಂದಾಗಿದೆ. ಪರಮಾತ್ಮನ ದಿವ್ಯನಾಮದ ಮಹಿಮೆಯು ಈ ಶಕ್ತಿಯ ಮುಕುಟಪ್ರಾಯವು.

ಆಧುನಿಕ ವಿಜ್ಞಾನವು ಮೇಲೆ ಹೇಳಿರುವ ಶಕ್ತಿಗಳ ಮೊದಲನೇ, ಎರಡನೇ ಮತ್ತು ಐದನೇ ಶಕ್ತಿಗಳನ್ನು ಮಾತ್ರ ಕೇವಲ ಅಂಶತಃ ಶೋಧನ ಮಾಡಿದೆ ಆದರೆ ಮಿಕ್ಕ ಶಕ್ತಿಗಳ ಸಂಬಂಧದಲ್ಲಿ ಪೂರ್ಣವಾಗಿ ಕತ್ತಲೆಯಲ್ಲಿದೆ.

7. ಮೇಲಿನ ಆರು ಶಕ್ತಿಗಳ ಏಕಮೂಲವೂ ಸಾರವೂ ಆದುದೇ ಏಳನೆಯದೆನಿಸುವ, '**ದೈವೀ ಪ್ರಕೃತಿ**' ಎನ್ನುವ ಮಹಾಶಕ್ತಿ.

ಈ ಶಕ್ತಿಗಳಲ್ಲಿ ಪ್ರತಿಯೊಂದಕ್ಕೂ ಅಧಿಪತಿಯಾಗಿ ಒಂದೊಂದು ಸಜೀವವೂ ಪ್ರಜ್ಞಾಪೂರ್ಣವೂ ಆದ ದೇವತೆಯಿದೆ. ಆಯಾ ದೇವತೆಯಿಂದ ಉದಿಸುವ ಆಯಾ ಶಕ್ತಿಗಳೇ ಅವಾಗಿವೆ. ಕೇವಲ ಭೌತಿಕ ದೃಷ್ಟಿಯುಳ್ಳ ವಿಜ್ಞಾನಿಗಳು ವೈದಿಕ ಧರ್ಮದ ದೇವತಾಶಕ್ತಿಗಳ ಕಲ್ಪನೆಗಾಗಿ ನಗಬಹುದೆಂದು ಬ್ಲ್ಯಾವೆಟ್ಸ್ಕಿಯವರು ತಮ್ಮ 'ಗುಪ್ತವಿದ್ಯೆ'ಯಲ್ಲಿ ಹೇಳಿರುವುದೇನೆಂದರೆ,

"There can be no possible conflict between the teachings of occult and so called exact Science, where the conclusions of the latter are grounded on a substratum of unassailable fact. It is only when its more ardent exponents, over-stepping the limits of observed phenomena in order to penetrate into the arena of Being, attempt to wrench the formation of Kosmos and its living Forces from Spirit, and attribute all to blind matter, that the occultists claim the right to dispute and call in question their theories. (P. 478) When its high

priests resolve consciousness into a secretion from the grey matter of the brain, and everything else in nature into a mode of motion, we protest against the doctrine as being unphilosophical, self-contradictory, and simply absurd, from a *scientific* point of view, as much and even more than from the accult aspect of the esoteric knowledge. (P. 296) The ancient knowledge teaches belief in conscious Powers and Spiritual Entities; in terrestrial, semi-intelligent, and highly intellectual Forces on other planes; and in Beings that dwell around us in spheres imperceptible, whether through telescope or microscope. (P. 478)

"ಎಲ್ಲಿ ಆಕ್ಷೇಪಣೀಯವಲ್ಲದ ವಸ್ತುಸ್ಥಿತಿಯು ಅಧಿಷ್ಠಾನದ ಮೇಲೆ ವಿಜ್ಞಾನ ಸಿದ್ಧಾಂತಗಳು ಆಧರಿಸಿವೆಯೋ ಅಲ್ಲಿ ಗುಪ್ತವಿದ್ಯೆಯ ಮತ್ತು ನಿರ್ದುಷ್ಟವೆನಿಸಿದ ವಿಜ್ಞಾನಶಾಸ್ತ್ರದ ಬೋಧೆಗಳಿಗೆ ವಿರೋಧವು ಸಂಭವಿಸಲಾರದು. ವಿಜ್ಞಾನ ಶಾಸ್ತ್ರದ ಅತೀವ ಉತ್ಸಾಹಿಗಳಾದ ವಾದಿಗಳು 'ಇರುವಿಕೆ'ಯ ಗೂಢದಲ್ಲಿ ತೂರುವುದಕ್ಕಾಗಿ ಪ್ರತ್ಯಕ್ಷವಾದ ಪ್ರಕೃತಿವಿಲಾಸದ ಪರಿಮಿತಿಯನ್ನು ಮೇಲ್ವಾಯ್ದು ಹೋಗಿ, ವಿಶ್ವದ ರಚನೆಯನ್ನೂ ಅದರ ಸಜೀವ ಶಕ್ತಿಗಳನ್ನೂ ಚೈತನ್ಯಸಂಬಂಧದಿಂದ ಕತ್ತರಿಸಲು ಪ್ರಯತ್ನಿಸಿ, ಅಂಧವಾದ ಜಡಭೌತಿಕ ತತ್ತ್ವಕ್ಕೇ ಸರ್ವವನ್ನೂ ಅನ್ವಯಿಸಿದಾಗ ಮಾತ್ರ, ಅಧ್ಯಾತ್ಮಿಗಳು (ಗುಪ್ತವಿದ್ಯಾ ಪರಿಣತರು) ಅವರ ವಾದಗಳನ್ನು ಪ್ರಶ್ನಿಸಲೂ ಪ್ರತಿಭಟಿಸಲೂ ನ್ಯಾಯವಾದ ತಮ್ಮ ಹಕ್ಕನ್ನು ಸಾಧಿಸುತ್ತಾರೆ. ಅವರ ಆಚಾರ್ಯ ವರಿಷ್ಠರು ಪ್ರಜ್ಞಾನವನ್ನು ಮೆದುಳಿನ ಧೂಸರ ವಸ್ತುವಿನ ರಸವಿಶೇಷವೆಂದೂ ಪ್ರಕೃತಿಯಲ್ಲಿ ಮಿಕ್ಕ ಎಲ್ಲವುಗಳನ್ನೂ ಚಲನವಿಶೇಷವೆಂದೂ ನಿರ್ಧರಿಸಿದಾಗ ಆ ಸಿದ್ಧಾಂತವು ವೈಜ್ಞಾನಿಕ ದೃಷ್ಟಿಯಿಂದ ಹೇಗೋ ಹಾಗೆ, ಇನ್ನೂ ಹೆಚ್ಚಾಗಿ, ಗುಪ್ತವಿದ್ಯೆಯ ಗೂಢವಾಯ

ದೃಷ್ಟಿಯಿಂದಲೂ (ಅದು) ಅತಾತ್ತ್ವಿಕವೆಂದೂ ಸ್ವವಿರೋಧಕವೆಂದೂ (ವಿರೋಧಾಭಾಸವೆಂದೂ) ಕೇವಲ ಅಸಂಬದ್ಧವೆಂದೂ ನಾವು ಅದನ್ನು ಪ್ರತಿಭಟಿಸುತ್ತೇವೆ. ಚಿನ್ಮಯವಾದ ಶಕ್ತಿಗಳಲ್ಲಿಯೂ ಮತ್ತು ಚೈತನ್ಯಮಯ ಸತ್ತೆಗಳಲ್ಲಿಯೂ ಭೂಲೋಕದಲ್ಲಿರುವ ಅರಿಜಾಣವೂ, ಬೇರೆ ಲೋಕಗಳಲ್ಲಿರುವ ವಿಶೇಷ ಧೀ ಸಂಪನ್ನವೂ ಆದ ಶಕ್ತಿಗಳಲ್ಲಿಯೂ, ದೂರದರ್ಶಕದಿಂದಾಗಲೀ ಅಣುದರ್ಶಕದಿಂದಾಗಲೀ ಕಾಣಲಸಾಧ್ಯವಾದ ನಮ್ಮ ಸುತ್ತಲ ವಲಯುಗಳಲ್ಲಿರುವ ಜೀವಿಗಳಲ್ಲಿಯೂ ಸನಾತನ ವಿದ್ಯೆಯು ವಿಶ್ವಾಸವನ್ನು ಬೋಧಿಸುತ್ತದೆ. "

ಸೀತೋಪನಿಷತ್ತಿನಲ್ಲಿ ಹೇಳಿರುವುದೇನೆಂದರೆ,

**ಸಾ ದೇವೀ ತ್ರಿವಿಧಾ ಭವತಿ ಶಕ್ತ್ಯಾತ್ಮನಾ ।**
**ಇಚ್ಛಾಶಕ್ತಿಃ ಕ್ರಿಯಾಶಕ್ತಿಸ್ಸಾಕ್ಷಾಚ್ಛಕ್ತಿರಿತಿ ॥**

ಯೋಗಚೂಡಾಮಣ್ಯುಪನಿಷತ್ತಿನಲ್ಲಿ ಹೇಳಿರುವುದೇನೆಂದರೆ,

**ಕ್ರಿಯಾ ಇಚ್ಛಾ ತಥಾ ಜ್ಞಾನಂ ।**
**ಬ್ರಾಹ್ಮೀ ರೌದ್ರೀ ಚ ವೈಷ್ಣವೀ ॥**

" ಕ್ರಿಯಾಶಕ್ತಿಯೇ ಬ್ರಾಹ್ಮೀಶಕ್ತಿಯಾದ ಸರಸ್ವತೀ (ಪ್ರಣವಸ್ವರೂಪಿಣೀ), ಇಚ್ಛಾಶಕ್ತಿಯೇ ರೌದ್ರೀಶಕ್ತಿಯಾದ ಮಹಾತ್ರಿಪುರಸುಂದರೀ ಪರಮೇಶ್ವರೀ (ಲಲಿತಾ), ಜ್ಞಾನಶಕ್ತಿಯೇ ವೈಷ್ಣವೀಶಕ್ತಿಯಾದ ಮಹಾಲಕ್ಷ್ಮೀ.

ಸಪ್ತಮಾತೃಕಾ ಶಕ್ತಿಗಳು ಯಾವುವೆಂದರೆ,

**ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ।**
**ವಾರಾಹೀ ಚೈವ ಚೇಂದ್ರಾಣಿ ಚಾಮುಂಡಾ ಸಪ್ತಮಾತರಃ ॥**

ಈಗ ಈಶ, ಮಹೇಶ, ಮಹಾದೇವ, ರುದ್ರ, ಭವ, ಶಿವ ಇತ್ಯಾದಿ ನಾಮಗಳುಳ್ಳ ಈಶ್ವರ ತತ್ತ್ವದ ವಿಚಾರಮಾಡೋಣ.

ಸತ್ತ್ವ, ರಜ, ತಮಗಳೆಂಬ ಮೂರು ಗುಣಗಳುಳ್ಳ ಚಿನ್ಮಯಿಯಾದ ಮಾಯೆ ತಮೋಗುಣದಲ್ಲಿ ಪ್ರತಿಫಲಿಸಿದಾದ ಬ್ರಹ್ಮಚೈತನ್ಯವೇ ಈಶ್ವರತತ್ತ್ವವು.

(ಸ್ಥೂಲಶರೀರದ ಸಂಬಂಧವುಳ್ಳ) ವಿಶ್ವನೆಂಬ ಆತ್ಮನೂ (ವಿಶ್ವದ ಸಮಸ್ತವಾದ ಸ್ಥೂಲವಸ್ತುಗಳ ಸಂಬಂಧವುಳ್ಳ) ವೈಶ್ವಾನರನೆಂಬ ಆತ್ಮನೂ ಒಂದಾಗಿರುವಂತೆ (ಸೂಕ್ಷ್ಮವಾದ ಮನಸ್ಸಿನ ಸಂಬಂಧವುಳ್ಳ) ತೈಜಸನೆಂಬ ಆತ್ಮನೂ (ಸಮಸ್ತವಾದ ಮನಸ್ಸುಗಳ ಸಂಬಂಧವುಳ್ಳ) ಹಿರಣ್ಯಗರ್ಭನೆಂಬ ಆತ್ಮನೂ ಒಂದಾಗಿಯೂ ಮತ್ತು (ಎಲ್ಲಾ ಸಂಬಂಧಗಳನ್ನೂ ನುಂಗಿಕೊಂಡಿರುವ) ಪ್ರಾಜ್ಞನೆಂಬ ಆತ್ಮನೂ (ಸಮಸ್ತವಾದ ಬ್ರಹ್ಮಾಂಡದ ಸಂಬಂಧಗಳನ್ನೂ ನುಂಗಿರುವ) ಅವ್ಯಾಕೃತ–ಅಜ್ಞಾತ–ಸ್ವರೂಪನಾದ ಈಶ್ವರನೆಂಬ ಆತ್ಮನೂ ಒಂದೇ ಆಗಿದ್ದಾರೆ.

ಮಾಂಡೂಕ್ಯೋಪನಿಷತ್ತಿನಲ್ಲಿ ಈಶ್ವರತತ್ತ್ವದ ವಿಚಾರವಾಗಿ ಬಂದಿರುವುದೇನೆಂದರೆ,

**“ ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋಹ್ಯಾನಂದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥ ೫ ॥**

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಂತರ್ಯಾಮ್ಯೇಷಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ ॥ ೬ ॥ ”**

“ ಗಾಢನಿದ್ರೆಯೆಂಬ ಸ್ಥಾನದಲ್ಲಿರುವವನಾಗಿಯೂ (ಎಲ್ಲವೂ ಸೇರಿ) ಒಂದಾದವನಾಗಿಯೂ (ಎಲ್ಲಾ) ಜ್ಞಾನಗಳ ಗಟ್ಟಿಯೇ ಆಗಿಯೂ ಆನಂದಮಯನಾಗಿಯೂ ಆನಂದವನ್ನು ಅನುಭವಿಸುವವನಾಗಿಯೂ ಜ್ಞಾನಕ್ಕೆ ದಾರಿಯಾಗಿಯೂ ಇರುವ ಪ್ರಾಜ್ಞನು ಮೂರನೆಯ ಪಾದವು. ॥ 5 ॥

ಈತನು ಎಲ್ಲಕ್ಕೂ ಈಶ್ವರನು, ಈತನು ಎಲ್ಲವನ್ನೂ ತಿಳಿದವನು, ಈತನೇ ಅಂತರ್ಯಾಮಿಯು, ಈತನು ಎಲ್ಲಕ್ಕೂ ಕಾರಣನು, ಎಲ್ಲಾ ಪ್ರಾಣಿಗಳಿಗೂ ಉತ್ಪತ್ತಿಯೂ ಲಯವೂ (ಈತನೇ). ” ॥ 6 ॥

ತನ್ನ ರೂಪದಲ್ಲಿರುವ ಈತನೇ ಎಲ್ಲಕ್ಕೂ ಈಶ್ವರನು (ಒಡೆಯನು). ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕ ಇವೆಲ್ಲವನ್ನೂ ಆಳುವ ಈಶ್ವರನು, ಈತನೇ ಎಲ್ಲರ ಎಲ್ಲಾ ಬಗೆಯ ಅವಸ್ಥೆಯಲ್ಲಿಯೂ ಅರಿಯುವಾತನು ; ಆದುದರಿಂದ ಸರ್ವಜ್ಞನು. ಈತನೇ ಅಂತರ್ಯಾಮಿ ಎಂದರೆ, ಎಲ್ಲಾ ಪ್ರಾಣಿಗಳೊಳಗೂ

ಹೊಕ್ಕು ಹಿಡಿತದಲ್ಲಿಟ್ಟಿರುವವನು. ಈತನಿಂದಲೇ ಹಿಂದೆ ಹೇಳಿದ ಎಚ್ಚರ-ಕನಸುಗಳಲ್ಲಿ ಕಾಣುವ ಬಗೆಬಗೆಯಾದ ಜಗತ್ತು ಹುಟ್ಟುವುದಾದುದರಿಂದ ಎಲ್ಲಕ್ಕೂ ಕಾರಣನು. ಹೀಗಿರುವುದರಿಂದ ಪ್ರಾಣಿಗಳಿಗೆ (ಕುಂಬಾರನಂತಲ್ಲದೆ) ಉತ್ಪತ್ತಿಸ್ಥಾನವೂ ಲಯಸ್ಥಾನವೂ ಈತನೇ. ಪ್ರಾಜ್ಞನಿಂದ ಸಿಜವಾಗಿ ಎಲ್ಲಾ ಪ್ರಪಂಚವೂ ಉಂಟಾಗುವುದರಿಂದ ಅವನಿಗೂ ಅಂತರ್ಯಾಮಿಯಾದ ಈಶ್ವರನಿಗೂ ಭೇದವಿಲ್ಲವೆಂದು ವೇದಾಂತದ ಸಿದ್ಧಾಂತವು.

**“ನಾಂತಃಪ್ರಜ್ಞಂ ನ ಬಹಿಷ್ಪ್ರಜ್ಞಂ ನೋಭಯತಃ ಪ್ರಜ್ಞಂ ಪ್ರಜ್ಞಾನಘನಂ ನಪ್ರಜ್ಞಂ ನಾಪ್ರಜ್ಞಂ । ಅದೃಷ್ಟಮವ್ಯವಹಾರ್ಯ-ಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೇಕಾತ್ಮ ಪ್ರತ್ಯಯಸಾರಂ ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ॥ ೭ ॥**

“ಒಳಗಿನ ವಿಷಯವನ್ನು ಅರಿಯದ, ಹೊರಗಿನ ವಿಷಯಗಳನ್ನೂ ಅರಿಯದ. ಎರಡನ್ನೂ ಅರಿಯದ ಜ್ಞಾನದ ಗಟ್ಟಿ ಅಲ್ಲದ ಅರಿಯುವನಲ್ಲದ, ಅರಿಯದವನಲ್ಲದ, ಕಾಣದ, ವ್ಯವಹಾರಕ್ಕೆ ಸಿಕ್ಕದ, ಹಿಡಿಯುವುದಕ್ಕೆ ಬರದ, ಹೆಗ್ಗುರುತಿಲ್ಲದ, ಯೋಚಿಸುವುದಕ್ಕಾಗದ, ಹೀಗೆಂದು ಹೇಳುವುದಕ್ಕೆ ಬರದ ಆತ್ಮಬುದ್ಧಿಯೊಂದೇ ಸಾರವಾಗಿರುವ ಪ್ರಪಂಚವಿಲ್ಲದ, ಶಾಂತನಾದ, (ಮಂಗಳಸ್ವರೂಪನಾದ) ಅದ್ವಿತೀಯ **ಶಿವನನ್ನು** ನಾಲ್ಕನೆಯವನೆಂದು ತಿಳಿಯುವರು; ಅವನು ಆತ್ಮನು, ಅವನನ್ನು ತಿಳಿಯಬೇಕು.”

ಆದರೆ ಗೌಡಪಾದರು ತಮ್ಮ ಕಾರಿಕೆಯಲ್ಲಿ ತುರ್ಯನನ್ನೇ ಈಶ್ವರನೆಂದಿದ್ದಾರೆ.

**ನಿವೃತ್ತೇಸ್ಸರ್ವದುಃಖಾನಾಮೀಶಾನಃ ಪ್ರಭುರವ್ಯಯಃ ।**
**ಅದ್ವೈತಸ್ಸರ್ವಭಾವಾನಾಂ ದೇವಸ್ತುರ್ಯೋ ವಿಭುಸ್ಸ್ಮೃತಃ ॥**

“ತುರ್ಯನು, ಎಲ್ಲಾ ದುಃಖಗಳೂ ಹೋಗುವುದಕ್ಕೆ ಈಶ್ವರನೂ ಒಡೆಯನೂ ನಾಶವಿಲ್ಲದವನೂ ಎರಡನೆಯದಿಲ್ಲದವನೂ ಎಲ್ಲಾ ವಸ್ತುಗಳಿಗೂ ದೇವನೂ ಸರ್ವವ್ಯಾಪಿಯೂ ಎಂದು ತಿಳಿಯುವರು.”

ಗೀತೆಯಲ್ಲಿಯೂ ಭಗವಂತನು,

**ಈಶ್ವರಸ್ಸರ್ವ ಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥**

"ಎಲೈ ಅರ್ಜುನನೇ! ಅಂತರ್ಯಾಮಿಯಾದ ಈಶ್ವರನು ಈ ಶರೀರವೆಂಬ ಯಂತ್ರವನ್ನು ಹತ್ತಿರುವ ದೇಹಾಭಿಮಾನಿಗಳಾದ ಜೀವರನ್ನು ತನ್ನ ಶಕ್ತಿಯಿಂದ ಸೂತ್ರದ ಗೊಂಬೆಗಳಂತೆ ಸಂಚಾಲಿಸುವವನಾಗಿ ಸಕಲ ಪ್ರಾಣಿಗಳ ಹೃದಯ ಪ್ರದೇಶದಲ್ಲಿ ನೆಲೆಸಿರುವನು." ಎಂದು ಹೇಳಿದ್ದಾನೆ.

ರುದ್ರತತ್ತ್ವವು ಮಾಯೆಯ ತಮೋಗುಣದಲ್ಲಿ ಪ್ರತಿಫಲಿತವಾದ ಬ್ರಹ್ಮ ಚೈತನ್ಯವಾದ್ದರಿಂದ ಅದರ ಹೊರಮೈಯು (ತೃತೀಯಪಾದನಾದ) ಅವ್ಯಾಕೃತ ಪ್ರಾಣನಾದ ಈಶ್ವರನಾಗಿಯೂ ಒಳಮೈಯು (ತುರೀಯಪಾದನಾದ) ಅದ್ವಿತೀಯ ಶಿವನಾಗಿಯೂ ಇದೆ.

ಪ್ರಾಜ್ಞನಲ್ಲಿ ಪ್ರಪಂಚದ ಬೀಜವಿರುವಂತೆ ಈಶ್ವರನಲ್ಲಿ ದುಃಖಮಯವಾದ ಪ್ರಪಂಚದ ಮಾಯಾ ವಿಷಬೀಜವು ಗೂಢವಾಗಿರುವುದನ್ನು ತೋರಿಸುವುದಕ್ಕಾಗಿಯೇ ಅವನು ವಿಷಕಂಠನೂ ಸರ್ಪಾಭರಣನೂ ಆಗಿದ್ದಾನೆ. ಈಶ್ವರನ ವಿಲಯಗುಣ, ನಿವೃತ್ತಿಧರ್ಮಗಳ ಸಂಕೇತವಾಗಿಯೇ ಅವನು ಅಗ್ನಿನೇತ್ರನೂ ಶ್ಮಶಾನವಾಸಿಯೂ ದಿಗಂಬರನೂ ಚಿತಾಭಸ್ಮಾಂಕಿತ ಗಾತ್ರನೂ ಕಪಾಲಿಯೂ ಭಿಕ್ಷುವೂ ಆಗಿದ್ದಾನೆ. ಯೋಗದಿಂದ ಉತ್ಥಾಪಿತವೂ ಪ್ರಫುಲ್ಲಿತವೂ ಆಗುವ ಕುಂಡಲಿನೀ ಶಕ್ತಿಯೇ ಸರ್ಪಾಭರಣವು.

ಲಯಕಾರ್ಯಕ್ಕಾಗಿ ತೋರುವ ಆ ಅಘೋರನ ಕ್ರೋಧವೂ ಭೂತಾದಿಗಳ ಪರಿವಾರವೂ ಭೈರವನ ಉತ್ಪತ್ತಿಯೂ ಪ್ರಳಯನರ್ತನೋನ್ಮತ್ತ ನಟರಾಜ ಮೂರ್ತಿಯೂ ರುಂಡಮಾಲೆಯೂ ಅವನ ತಮೋಗುಣದ ದ್ಯೋತಕವಾಗಿವೆ. ಇವನಿಗೆ ಸರಿಯಾದ ಶಕ್ತಿಯೇ ಸಿಂಹವಾಹಿನಿಯಾದ ಕಾಲಾಕ್ಷೀ ಘೋರ ಕಾಳಿಯು. ಅವ್ಯಾಕೃತ ಈಶ್ವರನು ಜಗತ್ತಿನ ಬೀಜರೂಪನೆಂಬು ತಿಳಿಯುವುದಕ್ಕಾಗಿಯೇ ಅವನನ್ನು ಲಿಂಗರೂಪದಿಂದ ಆರಾಧಿಸುವುದಾಗಿದೆ. ಅವ್ಯಾಕೃತ ತತ್ತ್ವದಲ್ಲಿ ಗೂಢವಾಗಿರುವ ಪ್ರಕೃತಿ ಪುರುಷರು—(matter-spirit)

ಅವಿಭಾಜ್ಯರಾಗಿರುವುದರಿಂದ ಈಶ್ವರನು ಅರ್ಧನಾರೀಶ್ವರನಾಗಿದ್ದಾನೆ. ಸ್ವಯಂಭೂವಾದ ಲಿಂಗದಲ್ಲಿ ಅರ್ಧನಾರೀಶ್ವರನು ಗುಪ್ತವಾಗಿದ್ದಾನೆ.

ಜಗದ್ಬೀಜನಾದ ಈಶ್ವರನು ಸ್ವರೂಪದಿಂದ ಸದಾಶಿವನಾಗಿದ್ದಾನೆ. ಶಿವನೆಂದರೆ ಮಂಗಳಸ್ವರೂಪನು. ದುಃಖವೇ ಅಮಂಗಳವೂ ಆನಂದವೇ ಮಂಗಳವೂ ಆಗಿದೆ. ಪರಮಾತ್ಮನ ಸತ್ಯಜ್ಞಾನಾನಂದ ಸ್ವರೂಪದಲ್ಲಿರುವ ಆನಂದಲಕ್ಷಣವೇ ಶಿವತತ್ತ್ವವು. ಅನುಭವಕ್ಕೆ ಬರುವ ಪವಿತ್ರವೂ ಶೀತಲವೂ ರಸಾತ್ಮಕವೂ ಅಮೃತವೂ ಕಲಾಪೂರ್ಣವೂ ಆದ ಶಾಂತಿಮಯಾನಂದದ ಸಂಕೇತವಾಗಿಯೇ ಶಿವನು ಗಂಗಾಧರನೂ ಚಂದ್ರಶೇಖರನೂ ಆಗಿದ್ದಾನೆ.

ಶಿವೋಪಾಸನೆಗಾಗಿ ದಿವ್ಯವಾದ ಈ ತತ್ತ್ವಗುಣಗಳನ್ನು ಮೂರ್ತಿಗೊಂಡಿರುವ ಭವ್ಯವಾದ ಸಾಕಾರಕಲ್ಪನೆ ಯಾವುದೆಂದರೆ,

**ಶಾಂತಂ ಪದ್ಮಾಸನಸ್ಥಂ ಶಶಿಧರಮುಕುಟಂ**
**ಪಂಚವಕ್ತ್ರಂ ತ್ರಿನೇತ್ರಂ ।**
**ಶೂಲಂ ವಜ್ರಂ ಚ ಖಡ್ಗಂ ಪರಶುಮಭಯುತಾಂ**
**ದಕ್ಷಭಾಗೇವಹಂತಂ ॥**
**ನಾಗಂ ಪಾಶಂ ಚ ಘಂಟಾಂ ಪ್ರಳಯಹುತವಹಂ**
**ಸಾಂಕುಶಂ ವಾಮಭಾಗೇ ।**
**ನಾನಾಲಂಕಾರಯುಕ್ತಂ ಸ್ಫಟಿಕಮಣಿನಿಭಂ**
**ಪಾರ್ವತೀಶಂ ನಮಾಮಿ ॥**

"ಶಾಂತರೂಪನೂ, ಪದ್ಮಾಸನದಲ್ಲಿ ಕುಳಿತವನೂ. ಚಂದ್ರಮೌಳಿಯೂ. ಪಂಚಮುಖಗಳುಳ್ಳವನೂ, ತ್ರ್ಯಂಬಕನೂ. ಬಲಭಾಗದಲ್ಲಿ ಶೂಲ ವಜ್ರ ಖಡ್ಗ ಪರಶು ಇವುಗಳನ್ನೂ ಅಭಯಹಸ್ತವನ್ನೂ ಧರಿಸಿರುವವನೂ, ಎಡಭಾಗದಲ್ಲಿ ಸರ್ಪ ಪಾಶ ಘಂಟಾ ಪ್ರಳಯಾಗ್ನಿ ಅಂಕುಶ ಇವುಗಳನ್ನು ವಹಿಸಿರುವವನೂ. ನಾನಾಲಂಕಾರಗಳಿಂದ ಕೂಡಿದವನೂ. ಸ್ಫಟಿಕಮಣಿಯಂತೆ ಪ್ರಕಾಶಮಾನನಾದವನೂ. ಪಾರ್ವತೀವಲ್ಲಭನೂ ಆದ ಶಿವನನ್ನು ನಮಿಸುತ್ತೇನೆ."

ಹೀಗೆ (ರುದ್ರೇಶ್ವರ) ಸದಾಶಿವನ ಉಪಾಸನೆಯಿಂದ ಅವಿದ್ಯೆಯ ನಾಶ

ವಾಗಿ ಉಪಾಸಕನು ಅದ್ವಿತೀಯ ಶಿವಾನುಭವದಿಂದ ಆನಂದವನ್ನು ಹೊಂದಿ ಮುಕ್ತನಾಗುತ್ತಾನೆ.

ಈಗ ವಿಷ್ಣುತತ್ತ್ವದ ವಿಚಾರವನ್ನು ಮಾಡೋಣ. ವಿಷ್ಣುವೆಂದರೆ ವ್ಯಾಪಕ ಚೈತನ್ಯ. ಮಾಯೆಯ ಸತ್ತ್ವಗುಣದಲ್ಲಿ ಪ್ರತಿಫಲಿತವಾದ ಬ್ರಹ್ಮ ಚೈತನ್ಯವೇ ವಿಷ್ಣುವು. ವಿಶ್ವವ್ಯಾಪಕವೂ, ವಿಶ್ವಾಧಾರವೂ, ವಿಶ್ವೋತ್ಪತ್ತಿ-ಸ್ಥಿತಿ-ಲಯಗಳಿಗೆ ಕಾರಣವೂ ಆದ ಜ್ಞಾನವೇ ವಿಷ್ಣು. ವಿಷ್ಣುವೇ ನಾರಾಯಣ.

ನಾರಾಯಣೋಪನಿಷತ್ತಿನಲ್ಲಿ,

**“ ಅಥ ನಿತ್ಯೋ ನಾರಾಯಣಃ । ಬ್ರಹ್ಮಾ ನಾರಾಯಣಃ । ಶಿವಶ್ಚ ನಾರಾಯಣಃ । ನಾರಾಯಣ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ । ನಿಷ್ಕಲಂಕೋ ನಿರಂಜನೋ ನಿರ್ವಿಕಲ್ಪೋ .... .... ಶುದ್ಧೋ ದೇವ ಏಕೋ ನಾರಾಯಣೋ ನ ದ್ವಿತೀಯೋಸ್ತಿ ಕಶ್ಚಿತ್ । ಯ ಏವಂ ವೇದ ಸ ವಿಷ್ಣುರೇವ ಭವತಿ ಸ ವಿಷ್ಣುರೇವ ಭವತಿ ।**

“ ನಾರಾಯಣನು ನಿತ್ಯನು. ನಾರಾಯಣನೇ ಬ್ರಹ್ಮನು, ಶಿವನೂ ಕೂಡ ನಾರಾಯಣನೇ. ಹಿಂದಾದುದೂ ಮುಂದಾಗುವುದೂ ಈ ಸರ್ವವೂ ನಾರಾಯಣನೇ. ಕಳಂಕವಿಲ್ಲದವನೂ ರಂಜನೆಯಿಲ್ಲದವನೂ ವಿಕಲ್ಪವಿಲ್ಲದವನೂ ಶುದ್ಧನೂ ಆದ ದೇವನು ನಾರಾಯಣನೊಬ್ಬನೇ ಎರಡನೆಯದೇನೂ ಇಲ್ಲ. ಹೀಗೆ ತಿಳಿದವನು ಸರ್ವವ್ಯಾಪಕ ಚೈತನ್ಯನಾದ ವಿಷ್ಣುವೇ ಆಗುತ್ತಾನೆ; ವಿಷ್ಣುವೇ ಆಗುತ್ತಾನೆ. ”

ವಿಷ್ಣುಸಹಸ್ರನಾಮದ ಶಾಂಕರಭಾಷ್ಯದಲ್ಲಿರುವುದೇನೆಂದರೆ,

**“ ವ್ಯಾಪ್ನೋತೀತಿ ವಿಷ್ಣುಃ । ........ವಿಷ್ಣುರಿತಿ ದೇಶಕಾಲವಸ್ತು ಪರಿಚ್ಛೇದ ಶಬ್ದಶೂನ್ಯ ಇತ್ಯರ್ಥಃ । ”**

“ ವ್ಯಾಪಕನಾದ್ದರಿಂದ ವಿಷ್ಣುವು. ವಿಷ್ಣುವೆಂದರೆ ದೇಶಕಾಲವಸ್ತು ಎಂಬ ಭೇದಕಲ್ಪನೆಯೂ ಶಬ್ದವೂ ಇಲ್ಲದವನು; ಅಂದರೆ ದೇಶ ಕಾಲ ವಸ್ತು ಮೊದಲಾದ ಕಲ್ಪನೆಗಳಿಗೆ ಆಧಾರನಾದವನು. ”

ಶ್ರುತಿಯಲ್ಲಿ ಹೇಳಿರುವುದೇನೆಂದರೆ,

**“ ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಸ್ಥಿತಃ । ”**

“ ಏನೇನನ್ನು ಕಾಣುತ್ತೇವೋ ಕೇಳುತ್ತೇವೋ ಆ ಎಲ್ಲ ಜಗತ್ತಿನ ಒಳಹೊರಗೆಲ್ಲಾ ನಾರಾಯಣನೇ ವ್ಯಾಪಿಸಿದ್ದಾನೆ. ”

ಆತ್ಮಬೋಧೋಪನಿಷತ್ತಿನಲ್ಲಿ,

**“ ಸರ್ವಭೂತಸ್ಥಮೇಕಂ ನಾರಾಯಣಂ ಕಾರಕರೂಪಮೇಕಾಕಾರಂ ಪರಂಬ್ರಹ್ಮ ಶೋಕಮೋಹ ವಿನಿರ್ಮುಕ್ತಂ ವಿಷ್ಣುಂ ಧ್ಯಾಯನ್ ನಾಸೀದತಿ । ”**

“ ಸರ್ವ ಪ್ರಾಣಿಗಳಲ್ಲಿಯೂ ಜಗತ್ಕಾರಣನಾಗಿಯೂ ಒಬ್ಬನಾಗಿಯೂ ಏಕಾಖಂಡವಾದ ಪರಬ್ರಹ್ಮವಾಗಿಯೂ ಶೋಕಮೋಹಗಳಿಲ್ಲದವನಾಗಿಯೂ ಇರುವ ವಿಷ್ಣುವನ್ನು ಧ್ಯಾನಿಸಿದರೆ ದುಃಖಹೊಂದುವುದಿಲ್ಲ. ”

ಗೀತೆಯಲ್ಲಿ,

**ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ।**

“ ಸರ್ವವೂ ವಾಸುದೇವರೂಪವೇ ಎಂದು ತಿಳಿಯುವವನೇ ಮಹಾತ್ಮನು ; ಅಂಥವನು ಬಹಳ ದುರ್ಲಭನು. ”

ಪದ್ಮಪುರಾಣದಲ್ಲಿ,

**ವಾಸುದೇವಃ ಪರಬ್ರಹ್ಮ ಪರಮಾತ್ಮಾ ಪರಾತ್ಪರಃ ।**
**ಪರಂ ಧಾಮ ಪರಂಜ್ಯೋತಿಃ ಪರಂ ತತ್ತ್ವಂ ಪರಂ ಪದಂ ॥**

“ ವಾಸುದೇವನೇ (ವಿಷ್ಣುವೇ) ಪರಬ್ರಹ್ಮ, ಪ್ರಕೃತಿ ಪುರುಷರಿಗೂ ಶ್ರೇಷ್ಠನಾದ ಪರಮಾತ್ಮಾ. ಅವನೇ ಶ್ರೇಷ್ಠವಾದ ಸ್ಥಾನವೂ ಅತ್ಯಂತ ಶ್ರೇಷ್ಠವಾದ ಪ್ರಕಾಶವೂ ತತ್ತ್ವವೂ ಪದವಿಯೂ ಆಗಿದ್ದಾನೆ. ”

ಅರ್ಧನಾರೀಶ್ವರನಾದ ಶಿವನಲ್ಲಿ ಅವಿಭಾಜ್ಯರಾದ ಪ್ರಕೃತಿ–ಪುರುಷರು ( Matter-Spirit ) ವಿಷ್ಣುವಿನಲ್ಲಿ ಸ್ಪಷ್ಟವಾಗಿ ಪ್ರತ್ಯೇಕವಾದ್ದರಿಂದ

ಲಕ್ಷ್ಮಿಯು (ಪ್ರಕೃತಿಯು) ವಿಷ್ಣುವಿನ ವಕ್ಷಸ್ಥಳದಲ್ಲಿ—ಜಡ-ಚೇತನ ಭೇದವು ಸ್ಫುಟವಾಗಿ—(Matter *and* Spirit ಆಗಿ) ಶೋಭಿಸುತ್ತಾಳೆ. ಜ್ಞಾನದಲ್ಲಿ ವಿವೇಚನೆಯೂ ವಿಭಜನೆಯೂ, ಆನಂದದಲ್ಲಿ ಸಂಯುಕ್ತವೂ ಏಕರಸವೂ ಇರುವುದೂ ಸಹಜವಾಗಿದೆ. ಸತ್ಯಜ್ಞಾನಾನಂದ ರೂಪನಾದ ಪರಬ್ರಹ್ಮದಲ್ಲಿರುವ ಜ್ಞಾನಲಕ್ಷಣವೇ ವಿಷ್ಣುವೂ ಆನಂದ ಲಕ್ಷಣವೇ ಶಿವನೂ ಆಗಿದ್ದಾರೆ.

ಅಗ್ನಿಯಲ್ಲಿ ಪ್ರಕಾಶವೂ ಶಾಖವೂ ಇರುವಂತೆ ಪರಮಾತ್ಮನಲ್ಲಿ ಜ್ಞಾನಾನಂದಗಳಿವೆಯೆನ್ನಬಹುದು. ಜ್ಞಾನವು ಆನಂದಮಯವಾಗಿಯೂ ಆನಂದವು ಜ್ಞಾನಮಯವಾಗಿಯೂ ಇರುವಂತೆ,

**“ಯಥಾ ಶಿವಮಯೋ ವಿಷ್ಣುಃ । ಏವಂ ವಿಷ್ಣುಮಯಶ್ಶಿವಃ ॥”**

“ವಿಷ್ಣುವು ಹೇಗೆ ಶಿವರೂಪನಾಗಿದ್ದಾನೆಯೋ ಹಾಗೇ ಶಿವನು ವಿಷ್ಣುರೂಪನಾಗಿದ್ದಾನೆ.”

ವಿಷ್ಣುತತ್ತ್ವ-ಗುಣಗಳ ಉಪಾಸನೆಗಾಗಿ ವಿಷ್ಣುಮೂರ್ತಿಯ ಸಾಕಾರ ಧ್ಯಾನವು ಯಾವುದೆಂದರೆ,

**ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ ।**
**ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಂ ॥**
**ಲಕ್ಷ್ಮೀಕಾಂತಂ ಕಮಲನಯನಂ ಯೋಗಿಹೃದ್ಧ್ಯಾನಗಮ್ಯಂ ।**
**ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಂ ॥**

“ಶಾಂತರೂಪನೂ, ಶೇಷಶಾಯಿಯೂ, ನಾಭಿಯಲ್ಲಿ ಬ್ರಹ್ಮನಿಗೆ ಪೀಠವಾದ ಕಮಲವುಳ್ಳವನೂ, ದೇವತೆಗಳಿಗೆ ಪ್ರಭುವೂ, ವಿಶ್ವಕ್ಕೇ ಆಧಾರನಾದವನೂ, ಆಕಾಶದಂತೆ ವ್ಯಾಪಕನೂ, ನಿಸ್ಸಂಗನೂ, ಅನಂತನೂ, ಮೇಘದಂತೆ ನೀಲವರ್ಣವುಳ್ಳವನೂ, ಮಂಗಳಾಂಗನೂ, ಲಕ್ಷ್ಮೀಪತಿಯೂ, ಕಮಲನೇತ್ರನೂ, ಯೋಗಿಗಳ ಹೃದಯದಲ್ಲಿ ಧ್ಯಾನದಿಂದ ಸ್ಫುರಿಸುವವನೂ, ಸಮಸ್ತ ಲೋಕಗಳಿಗೂ ಒಬ್ಬನೇ ಇರುವ ಪ್ರಭುವೂ, ಸಂಸಾರಭಯನಾಶಕನೂ ಆದ ವಿಷ್ಣುವನ್ನು ನಮಸ್ಕರಿಸುವೆನು.”

ಪಿಂಡಾಂಡದಲ್ಲಿ ಮನ, ಬುದ್ಧಿ, ಚಿತ್ತಾಹಂಕಾರ ವೃತ್ತಿಗಳುಳ್ಳ ಅಂತಃಕರಣವೇ ಸೃಷ್ಟಿಶಕ್ತಿಯುಳ್ಳ ಚತುರ್ಮುಖ ಬ್ರಹ್ಮ. ಅಂತಃಕರಣಕ್ಕೆ ಸಾಕ್ಷಿ

ಯಾವ ಚೈತನ್ಯವೇ ವಿಷ್ಣುತತ್ತ್ವ. ಸಾಕ್ಷಿಯೂ ಅಡಗಿದ ಅಧಿಷ್ಠಾನ ಚೈತನ್ಯವೇ ಪರಶಿವನು.

ಈಗ ಕೊನೆಯಲ್ಲಿ ಸೂರ್ಯತತ್ತ್ವದ ವಿಚಾರವನ್ನು ಮಾಡೋಣ.

ಸೃಷ್ಟಿ–ಸ್ಥಿತಿ–ಲಯಾದಿಗಳಿಗೆ ಕಾರಣನಾದವನೇ ಪರಮಾತ್ಮನೆಂದು ಬಾದರಾಯಣರು ತಮ್ಮ ಬ್ರಹ್ಮಸೂತ್ರಗಳಲ್ಲಿ **'ಜನ್ಮಾದ್ಯಸ್ಯಯತಃ'** ಎಂಬ ಎರಡನೇ ಸೂತ್ರದಿಂದ ತಿಳಿಸಿದ್ದಾರೆ. ದೇವರ ಇರುವಿಕೆಯನ್ನು ಒಪ್ಪದಿರುವ ಭೌತಿಕವಾದಿಗಳಿಗೂ ನಾಸ್ತಿಕವಾದಿಗಳಿಗೂ ಸೃಷ್ಟಿ-ಸ್ಥಿತಿ–ಲಯಗಳಿಗೆ ಕಾರಣವಾದ ಒಂದು ಮಹಾವಸ್ತುವನ್ನು ವಿಚಾರಸಮ್ಮತವಾಗುವಂತೆ ವ್ಯಕ್ತಜಗತ್ತಿನಲ್ಲಿ ತೋರಿಸಬಹುದೆಂದರೆ, ಅದು ಸೂರ್ಯಗ್ರಹವನ್ನೇ! ಸೂರ್ಯದೇವನ ಶಕ್ತಿಯನ್ನೇ! ಏಕೆಂದರೆ ಆಧುನಿಕ ಖಗೋಳಶಾಸ್ತ್ರದ ನಂಬಿಕೆಯಂತೆ ಹಲವು ಕೋಟಿ ವರ್ಷಗಳ ಹಿಂದೆ ನಮ್ಮ ಭೂಮಿಯು ಹುಟ್ಟುವುದಕ್ಕೂ ಪೂರ್ವದಲ್ಲಿ ಒಂದು ಮಹಾನಕ್ಷತ್ರವು ತನ್ನ ಅಂಧಭ್ರಮಣೆಯಲ್ಲಿ ಇಂದಿನ ಸೂರ್ಯಗೋಳಕ್ಕಿಂತಲೂ ಬಹಳ ದೊಡ್ಡ ಗ್ರಹವಾಗಿದ್ದ ಆ ನಮ್ಮ ಸೂರ್ಯನನ್ನು ಅಕಸ್ಮಾತ್ತಾಗಿ ಸಮೀಪಿಸುವ ಅತ್ಯಂತ ವಿರಳವಾದ ಸಂದರ್ಭವೊದಗಿತು. ಆಗ ಚಂದ್ರನು ಭೂಮಿಯ ಸಮುದ್ರಜಲದಲ್ಲಿ ಅಲೆಗಳ ಉಬ್ಬರವನ್ನು ಏರಿಸುವಂತೆ ಆ ಬೃಹನ್ನಕ್ಷತ್ರದ ಸಮೀಪಿಸುವಿಕೆಯ ಮಹಾಕರ್ಷಣ ಶಕ್ತಿಯು, ಸೂರ್ಯಮಂಡಲದಲ್ಲಿರುವ ವಸ್ತುವಿಶೇಷಗಳಲ್ಲಿ ಪರ್ವತಾಕಾರವಾದ ಉಬ್ಬರವನ್ನು ಎಬ್ಬಿಸಿ, ಹತ್ತಿರ ಹತ್ತಿರಕ್ಕೆ ಬಂದಂತೆ ಅಧಿಕಾಧಿಕ ಮಹೋನ್ನತವಾಗಿ ಆ ಉಬ್ಬರವನ್ನು ಬೆಳೆಸಿ, ಪುನಃ ದೂರಸರಿಯುವುದರೊಳಗೆ, ಅದನ್ನು ಪರಮಾವಧಿಗೆ ಮುಟ್ಟಿಸಿ, ಉಕ್ಕೇರಿದ ಅಲೆಯು ತುಂತುರುಗಳನ್ನು ಎಸೆಯುವಂತೆ, ಆ ಸೂರ್ಯಗೋಳವು ಚೂರುಚೂರಾಗಿ ಸಿಡಿಯುವಂತೆ ಮಾಡಿತು. ಅಂದಿನಿಂದಲೂ ಆ ತುಣುಕುಗಳು (ಗ್ರಹಗಳು) ತಮ್ಮ ಮಹಾಜನಕನಾದ ಸೂರ್ಯನ ಸುತ್ತಲೂ ಸುತ್ತುತ್ತಿವೆ. ಸಣ್ಣದೊಡ್ಡ ಗ್ರಹಗಳಾದ ಆ ತುಣುಕುಗಳಲ್ಲಿಯೇ ನಮ್ಮ ಭೂಮಿಯೂ ಒಂದಾಗಿದೆ. ಈ ಸೌರವ್ಯೂಹದ ಗ್ರಹೋಪಗ್ರಹಗಳ ಮತ್ತು ನಮ್ಮ ಭೂಮಿಯ ಉತ್ಪತ್ತಿಯು ಈ ರೀತಿಯಲ್ಲಿ ಆಗಿರುತ್ತದೆ.

ಸೂರ್ಯನೂ ಉಳಿದ ನಕ್ಷತ್ರಗಳೂ ತಮ್ಮಲ್ಲಿ ಸಸ್ಯಗಳಾಗಲೀ ಪ್ರಾಣಿಗಳಾಗಲೀ ಉದಯವಾಗುವುದಕ್ಕೆ ಅಸಾಧ್ಯವಾದಷ್ಟು ಶಾಖವುಳ್ಳವುಗಳಾಗಿವೆ.

ಸೂರ್ಯನಿಂದ ಸಿಡಿದ ಈ ಭೂಮಿಯೇ ಮೊದಲಾದ ಗ್ರಹೋಪಗ್ರಹಗಳು ಮೊದಲು ಅಷ್ಟೇ ಸುಡುತ್ತಿದ್ದವು ಮೆಲ್ಲಮೆಲ್ಲನೆ ಇವುಗಳ ಕಾವೆಲ್ಲಾ ಆರುತ್ತಾ ಬಂದು ಈಗ ತಮ್ಮದೇ ಆದ ಕಾವು ಬಹಳ ಸ್ವಲ್ಪ ಉಳಿದು, ಸೂರ್ಯನಿಂದಲೇ ಸಮಸ್ತ ಶಾಖವನ್ನೂ ಪಡೆಯುತಕ್ಕವುಗಳಾಗಿವೆ. ಕಾಲಾಂತರದಲ್ಲಿ ಹಾಗೆ ಆರುತ್ತಾ ಬಂದ ತುಣುಕುಗಳಲ್ಲಿ ಒಂದಾದ ನಮ್ಮ ಭೂಮಿಯು ಹೇಗೋ, ಏಕೋ, ಎಂದೋ ಜೀವರಾಶಿಗಳಿಗೆ ಜನ್ಮ ಕೊಟ್ಟಿತು. ಆದ್ದರಿಂದ ಈ ಭೂಮಿಗೆ ಸೂರ್ಯನೇ ಜನಕ. ಇಲ್ಲಿರುವುದೆಲ್ಲಾ ಸೂರ್ಯನಿಂದಲೇ ಬಂದುದು. ಸೂರ್ಯನಿಂದಲೇ ಬದುಕಬೇಕು, ಸೂರ್ಯನಿಂದಲೇ ಬೆಳೆಯಬೇಕು. ಸೂರ್ಯ ಶಕ್ತಿಯು ಸ್ವಲ್ಪ ಹೆಚ್ಚುಕಡಿಮೆಯಾದರೂ ಸಾಯಬೇಕಾಗಬಹುದು.

ಡಾಕ್ಟರ್ ಎಸ್. ಹೆಚ್. ಬೆಲ್ಫ್ರೇಜ್ ಎಂ. ಡಿ. ಎಂಬುವರು "ಯಾವುದು ಶ್ರೇಷ್ಠವಾದ ಆಹಾರ ?" ಎಂಬ ತಮ್ಮ ಪುಸ್ತಕದಲ್ಲಿ ಹೇಳಿರುವುದೇನೆಂದರೆ. "ಪ್ರಾಣಿವರ್ಗವನ್ನೆಲ್ಲಾ ಆವರಿಸಿಕೊಂಡಿರುವ ವಿದ್ಯುಚ್ಛಕ್ತಿಯು ಪ್ರಕಾಶ ಮತ್ತು ಶಾಖದ ರೂಪದಲ್ಲಿ ಸೂರ್ಯನಿಂದ ಒದಗಿಸಲ್ಪಡುತ್ತದೆ. ಸೂರ್ಯನು ಒದಗಿಸುವ ಈ ಶಕ್ತಿಯಿಂದಲೇ ಪ್ರಪಂಚದ ಅಚೇತನ ವಸ್ತುಗಳಿಗೆ ಸಾಕಾದಷ್ಟು ಚೈತನ್ಯವುಂಟಾಗಿ ಅವು ಚೇತನವಸ್ತುಗಳಾಗಿ ಪರಿಣಮಿಸುವುದು. ಅದ ಕಾರಣ, ಸಸ್ಯಗಳ ಮೇಲೆ ಬಿಸಿಲು ಬಿದ್ದಲ್ಲಿ ಅವು ಆಮ್ಲಜನಕ ಜಲಜನಕ ಮತ್ತು ಸಾರಜನಕ ವಾಯುಗಳನ್ನೂ ಕಬ್ಬಿಣ, ರಂಜಕ ಮೊದಲಾದ ಅಚೇತನ ವಸ್ತುಗಳನ್ನೂ ಹೀರಿಕೊಂಡು ಸಮ್ಮಿಶ್ರರೂಪದಲ್ಲಿ ಪ್ರಾಣಿಗಳ ಶರೀರ ರಚನೆಗೆ ಸಹಾಯವಾಗುವುವು. ಈ ರೀತಿ ವಿದ್ಯುಚ್ಛಕ್ತಿಯು ಸಸ್ಯಗಳಲ್ಲಿ ಅಪಾರವಾಗಿ ಶೇಖರವಾಗಿ ಆಹಾರರೂಪದಲ್ಲಿ ಪ್ರಾಣಿಗಳ ಶರೀರಕ್ಕೆ ಹೋಗಿ ಸೇರುವುದು. ಆದಕಾರಣ ನಾವು ಪ್ರತಿಕ್ಷಣವೂ ವೆಚ್ಚಮಾಡುತ್ತಿರುವ ಕ್ರಿಯಾಶಕ್ತಿಯನ್ನು ಸೂರ್ಯದೇವನೇ ಸದಾ ಒದಗಿಸುತ್ತಿರಬೇಕಾಗಿದೆ."

ಅನೇಕ ಗ್ರಂಥಗಳನ್ನು ರಚಿಸಿರುವ ಛಾರ್ಲ್ಸ್ ಎಫ್. ಹಾನಲ್‌ರವರು ಹೇಳಿರುವುದೇನೆಂದರೆ, "ಈ ಪ್ರಪಂಚದಲ್ಲಿ (ಚೇತನ ಅಥವಾ ಅಚೇತನ) ಸಮಸ್ತ ಪದಾರ್ಥಗಳಲ್ಲಿರುವ ಕ್ರಿಯಾಶಕ್ತಿಯೂ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸೂರ್ಯನಿಂದಲೇ ಒದಗಿಸಲ್ಪಡುತ್ತಿದೆ. ಹರಿಯುವ ನೀರು,

ಬೀಸುವ ಗಾಳಿ, ಸಂಚರಿಸುವ ಮೋಡಗಳು, ಗುಡುಗುವ ಗುಡುಗು, ಹೊಳೆಯುವ ಮಿಂಚು ಮತ್ತು ಬೀಳುವ ಮಳೆ, ಹಿಮ, ಆನೇಕಲ್ಲು, ಸಸ್ಯಾದಿಗಳ ಅಭಿವೃದ್ಧಿ. ಪ್ರಾಣಿಗಳ ಮತ್ತು ಮನುಷ್ಯರ ಶಾಖ ಮತ್ತು ಚಲನೆ, ಸೌದೆ ಅಥವಾ ಇದ್ದಿಲು ಉರಿಯುವುದು ಇವೆಲ್ಲವೂ ಸ್ಫುಟವಾದ ಸೂರ್ಯಶಕ್ತಿಯಲ್ಲದೆ ಬೇರೆ ಏನು ?."

ಗಾರ್ಡನರ್ ರೋನಿಯವರು 1926ನೇ ಜುಲೈ ತಿಂಗಳ 'ಫಿಸಿಕಲ್ ಕಲ್ಚರ್' ಎಂಬ ಮಾಸಪತ್ರಿಕೆಯಲ್ಲಿ ಹೇಳಿರುವುದೇನೆಂದರೆ 'ನಿಮ್ಮ ಶರೀರಕ್ಕೆ ಬಿಸಿಲಿನ ಸ್ನಾನವನ್ನು ಕೊಡಿ. ರೋಗವನ್ನು ಗುಣಪಡಿಸುವುದರಲ್ಲಿ ಬಿಸಿಲಿಗೆ ಸಮಾನವಾದ ಔಷಧವು ಮತ್ತಾವುದೂ ಇರದು. ಆರೋಗ್ಯಭಾಗ್ಯದ ಗಣಿಯೇ ಸೂರ್ಯನು."

ರೊಗಗಳನ್ನು ಗುಣಮಾಡುವ ವಿಷಯದಲ್ಲಿ ಅಮೇರಿಕಾ ಖಂಡದಲ್ಲೆಲ್ಲಾ ಯಾರ ಮಾತು ಶ್ರೇಷ್ಠವಾದ ಪ್ರಮಾಣವಾಗಿರುವುದೋ ಅಂಥಾ ಡಾಕ್ಟರ್ ಹೆಸ್‌ರವರು ಹೇಳಿರುವುದೇನೆಂದರೆ "ಎಲ್ಲಾ ಆಹಾರಪದಾರ್ಥಗಳಿಗೂ ಆಧಾರಭೂತವಾದ ಬಿಸಿಲು, ರೋಗಗಳನ್ನು ಗುಣಪಡಿಸುವುದರಲ್ಲಿಯೂ ಅನ್ಯಾದೃಶವಾಗಿದೆ. ಅದು ಆರೋಗ್ಯಕ್ಕೆ ಮುಖ್ಯವಾದುದೆಂಬುದನ್ನು ಜನಗಳಿಗೆ ಚೆನ್ನಾಗಿ ತಿಳಿಯಪಡಿಸಿದರೆ, ಮಾನವಕೋಟಿಯ ಸ್ಥಿತಿಯೂ ಆರೋಗ್ಯವೂ ಸುಖ ಸಂತೋಷಗಳೂ ಅಭಿವೃದ್ಧಿಯಾಗುವುವು." ಜರ್ಮನೀದೇಶದ ಶಾಸ್ತ್ರಜ್ಞರೂ ನಾಸ್ತಿಕರಲ್ಲಿ ಅಗ್ರಗಣ್ಯರೂ ಆದ ಅರ್ನೆಸ್ಟ್ ಹೇಕಲ್‌ರವರು, "ದಿ ರಿಡ್ಲ್ ಆಫ್ ದಿ ಯೂನಿವರ್ಸ್" ಎಂಬ ತಮ್ಮ ಗ್ರಂಥದಲ್ಲಿ ಹೇಳಿರುವುದೇನೆಂದರೆ "ಸೂರ್ಯನಿಂದಲೇ ತಮಗೆ ಬೆಳಕೂ ಶಾಖವೂ ಉಂಟಾಗಬೇಕಾಗಿದೆ. ಪ್ರಾಣಿವರ್ಗಕ್ಕೆಲ್ಲಾ ಸೂರ್ಯನೇ ಆಧಾರಭೂತನಾದವನು. ಆಸ್ತಿಕ ಮತದ ರೂಪಾಂತರಗಳಲ್ಲೆಲ್ಲಾ ಸೂರ್ಯೋಪಾಸನೆಯೇ ಶ್ರೇಷ್ಠವಾದುದೆಂದು ಆಧುನಿಕ ಶಾಸ್ತ್ರಜ್ಞರಿಗೆ ತೋರುತ್ತದೆ. ಈಗಿನ ಏಕತ್ವವಾದಕ್ಕೆ ಇದೇ ಕೇವಲ ಸಮಂಜಸವಾಗಿರುವುದು. ಭೂಮಿಯು ಸೂರ್ಯನಿಂದ ಹೊರಪಟ್ಟ ಒಂದು ಚೂರಾಗಿರುವುದೆಂದೂ ಪರ್ಯವಸಾನದಲ್ಲಿ ಪುನಃ ಸೂರ್ಯಮಂಡಲಕ್ಕೇ ಹೋಗಿ ಸೇರುವುದೆಂದೂ ಭೂನಿರ್ಮಾಣಶಾಸ್ತ್ರದಿಂದ ಗೊತ್ತಾಗುತ್ತದೆ. ಎಲ್ಲಾ ಧಾತುವಸ್ತುಗಳ ಚೈತನ್ಯ

ಅಂತೆಯೇ ನಮ್ಮ ಶರೀರ ಮತ್ತು ಮನಸ್ಸಿನ ಚೈತನ್ಯಕ್ಕೂ ಸಹ ಆಧಾರವಾದ ಪರಾತ್ಪರ ವಸ್ತುವು ಸೂರ್ಯನೇ ಆಗಿರುತ್ತಾನೆ. ಆದಕಾರಣ ಕೇವಲ ತಾರ್ಕಿಕ ದೃಷ್ಟಿಯಿಂದ ಎಲ್ಲಾ ಮತಗಳಿಗಿಂತಲೂ ಸೂರ್ಯೋಪಾಸನೆಯು ಮತವೇ ಶ್ರೇಷ್ಠವಾದುದು. ವಾಸ್ತವವಾಗಿ ಸೂರ್ಯನನ್ನು ಪೂಜಿಸತಕ್ಕವರು ಇತರ ನಾಸ್ತಿಕ ಮತಾನುಯಾಯಿಗಳಿಗಿಂತಲೂ ಸಾವಿರಾರು ವರ್ಷಗಳ ಮುಂಚೆ ಜ್ಞಾನಮಾರ್ಗದಲ್ಲಿಯೂ ಶಿಷ್ಟಾಚಾರದಲ್ಲಿಯೂ ಅತ್ಯುನ್ನತ ಸ್ಥಿತಿಯಲ್ಲಿದ್ದರು. 1881 ನೇ ಇಸವಿಯಲ್ಲಿ ಬೊಂಬಾಯಿ ನಗರದಲ್ಲಿ ನಾನಿದ್ದ ಕಾಲದಲ್ಲಿ ಪಾರ್ಸೀ ಮತಸ್ಥರು ಸೂರ್ಯನು ಉದಯಿಸುವಾಗಲೂ ಅಸ್ತಮಿಸುವಾಗಲೂ ಸಮುದ್ರ ತೀರದಲ್ಲಿ ಸೂರ್ಯದೇವನಿಗೆ ಪೂಜೆಯನ್ನು ಅರ್ಪಿಸುತ್ತಿದ್ದುದನ್ನು ನೋಡಿ ನನಗೆ ರೋಮಾಂಚನ ಉಂಟಾಗುತ್ತಿದ್ದಿತು. "

ತೈತ್ತಿರೀಯೋಪನಿಷತ್ತಿನಲ್ಲಿಯೂ ಹೇಳಿರುವುದೇನೆಂದರೆ, **" ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ ।"** " ಈ ಪುರುಷನಲ್ಲಿಯೂ ಆದಿತ್ಯನಲ್ಲಿಯೂ ಇರುವುದು ಒಂದೇ. "

ಸೂರ್ಯೋಪನಿಷತ್ತಿನಲ್ಲಿ ಹೇಳಿರುವುದೇನೆಂದರೆ,

**ಸವಿತಾ ಸರ್ವಭೂತಾನಾಂ ಸರ್ವಭಾವಾಂಶ್ಚ ಸೂಯತೇ ।**
**ಸವನಾತ್ ಪ್ರೇರಣಾಚ್ಚೈವ ಸವಿತಾ ತೇನ ಚೋಚ್ಯತೇ ॥**
**ಸೂರ್ಯಾದ್‌ಭವಂತಿ ಭೂತಾನಿ ಸೂರ್ಯೇಣ ಪಾಲಿತಾನಿ ಚ ।**
**ಸೂರ್ಯೇ ಲಯಂ ಪ್ರಾಪ್ನುವಂತಿ ಯಃ ಸೂರ್ಯಃ**
**ಸೋಹಮೇವ ಚ ॥**

" ಸರ್ವ ಜಗತ್ತಿಗೂ ಅಂತರ್ಯಾಮಿಯಾಗಿರುವುದರಿಂದಲೂ ಸರ್ವ ಜಗತ್ತನ್ನೂ ಸೃಷ್ಟಿಮಾಡುವುದರಿಂದಲೂ ಸೃಷ್ಟಿಗೂ ಪ್ರೇರಣೆಗೂ ಕಾರಣವಾದ್ದರಿಂದಲೇ ಸೂರ್ಯನು 'ಸವಿತಾ' ಎನ್ನಿಸಿಕೊಳ್ಳುತ್ತಾನೆ.

" ಸೂರ್ಯನಿಂದಲೇ ಪ್ರಾಣಿಗಳು ಉತ್ಪನ್ನವಾಗುತ್ತವೆ, ಸೂರ್ಯನಿಂದಲೇ ರಕ್ಷಿತವಾಗುತ್ತವೆ, ಸೂರ್ಯನ ತೇಜಸ್ಸಿನಲ್ಲಿಯೇ ವಿಲಯವನ್ನು ಹೊಂದುತ್ತವೆ. ಹೀಗೆ ಯಾವ ಸೂರ್ಯನಿದ್ದಾನೋ ಅವನೇ ನಾನಾಗಿದ್ದೇನೆ. "

**ಆದಿತ್ಯೋಽಹ್ಯಾದಿ ಭೂತತ್ವಾತ್ ಪ್ರಸೂತ್ಯಾ ಸೂರ್ಯ ಉಚ್ಯತೇ ।**
**ಪರಂಜ್ಯೋತಿಃ ತಮಃಪಾರೇ ಸೂರ್ಯೋಽಯಂ ಸವಿತೇತಿ ಚ ॥**

" ಸರ್ವಪ್ರಾಣಿಗಳಿಗೂ ಭೌತಿಕವಾದ ಸರ್ವ ಜಗತ್ತಿಗೂ ಆದಿಯಾದುದರಿಂದಲೇ ಆದಿತ್ಯನೆಂದೂ ಸೃಷ್ಟಿಶಕ್ತಿಯುಳ್ಳವನಾದುದರಿಂದ ಸೂರ್ಯನೆಂದೂ ಅಂಧಕಾರ ವನ್ನು ನಾಶಮಾಡತಕ್ಕ ಶ್ರೇಷ್ಠವಾದ ಪ್ರಕಾಶರೂಪನಾದುದರಿಂದ ಸವಿತೃ ವೆಂದೂ ಸೂರ್ಯನು ಕರೆಯಲ್ಪಡುತ್ತಾನೆ. "

'**ಯದ್ಭಾವಂ ತದ್ಭವತಿ**' ಎಂಬ ತತ್ತ್ವದಂತೆ, ಧ್ಯಾನಬಲದಿಂದ ಧ್ಯೇಯವಸ್ತುಪ್ರಭಾವವು ಧ್ಯಾನಾಸಕ್ತನನ್ನು ಸೇರುವುದರಿಂದ 'ಜಗದೇಕ ಚಕ್ಷು'ವೂ 'ಲೋಕಸಾಕ್ಷಿ'ಯೂ 'ವಿರಿಂಚಿ-ನಾರಾಯಣ-ಶಂಕರಾತ್ಮ'ನೂ ಆದ ಸೂರ್ಯದೇವನನ್ನು ಧ್ಯಾನಿಸಬೇಕು.—

**ಧ್ಯೇಯಸ್ಸದಾ ಸವಿತೃಮಂಡಲ ಮಧ್ಯವರ್ತೀ ।**
**ನಾರಾಯಣಸ್ಸರಸಿಜಾಸನ ಸನ್ನಿವಿಷ್ಟಃ ॥**
**ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ ।**
**ಹಾರೀ ಹಿರಣ್ಮಯ ವಪುಃ ಧೃತಶಂಖ ಚಕ್ರಃ ॥**

" ಸೂರ್ಯಮಂಡಲ ಮಧ್ಯದಲ್ಲಿರುವ ಕಮಲಾಸನದಲ್ಲಿ ಶೋಭಿಸುವಂತೆ ಕುಳಿತಿರುವ ಕೇಯೂರ-ಮಕರಕುಂಡಲ-ಕಿರೀಟ ಹಾರಗಳೊಡನೆ ಕೂಡಿರುವ ಸುವರ್ಣಮಯವಾದ ಶರೀರವುಳ್ಳ ಶಂಖಚಕ್ರಗಳನ್ನು ಧರಿಸಿದವನಾಗಿರುವ ಶ್ರೀಮನ್ನಾರಾಯಣನೇ ಸರ್ವದಾ ಧ್ಯಾನಿಸಲ್ಪಡತಕ್ಕವನು. "

ಈಶೋಪನಿಷತ್ತಿನಲ್ಲಿ,

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।**
**ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥**

" ಸತ್ಯದ ಮುಖವು (ದ್ವಾರವು) ಚಿನ್ನದ ಪಾತ್ರೆಯಿಂದ ಮುಚ್ಚಲ್ಪಟ್ಟಿದೆ. ಎಲೈ ಸೂರ್ಯದೇವನೇ ! ಸತ್ಯೋಪಾಸಕನಾದ ನಾನು ನಿನ್ನಲ್ಲಿರುವ ಸತ್ಯವನ್ನು ನೋಡಬೇಕಾದರೆ ಅದರ ಮುಸುಕನ್ನು ತೆರೆ ! "

**“ ಪೂಷಣೇ ಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ಸಮೂಹ । ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥**

“ ಎಲೈ ಸೂರ್ಯನೇ ! ಸ್ವರ್ಲೋಕದ ಏಕೈಕ ಪ್ರವಾಸಿಯೇ, ಸರ್ವನಿಯಾಮಕನೇ, ಪ್ರಜಾಪತಿ ಪುತ್ರನೇ , ನಿನ್ನ ಕಿರಣಗಳನ್ನು ಉಪಸಂಹಾರ ಮಾಡು. ಉರಿಯುವ ನಿನ್ನ ಕಿರಣಗಳನ್ನು ಸೇರಿಸಿ ಸೆಳೆದುಕೋ. ನಿನ್ನ ದಿವ್ಯರೂಪ ವನ್ನು ನೋಡುತ್ತೇನೆ. ನಿನ್ನಲ್ಲಿರುವ ಪುರುಷನೇ ನಾನು. ”

ವಿಜ್ಞಾನಿಗಳಿಗೆ ಕೇವಲ ಭೌತಿಕವಸ್ತುವಾಗಿ ಕಾಣುವ ಸೂರ್ಯಮಂಡಲ ದಲ್ಲಿ ವೇದಧರ್ಮವು ಚೈತನ್ಯಪೂರ್ಣ ದೇವತಾಪುರುಷನನ್ನು ಗುರುತಿಸಿ ಪೂಜಾ ಪ್ರಾರ್ಥನಾದಿಗಳನ್ನು ಅರ್ಪಿಸುವ ವಿಚಾರದಲ್ಲಿ ಭಗವತೀ ಬ್ಲ್ಯವಟ್ಸ್ಕಿಯವರು ತಮ್ಮ ‘ಗುಪ್ತವಿದ್ಯೆಯಲ್ಲಿ ಹೇಳಿರುವುದೇನೆಂದರೆ,

“ The Sun is matter, and the Sun is Spirit. Our ancestors—the ‘heathen’,—along with their modern successors, the Parsis – were, and are, wise enough in their generation to see in it the symbol of Divinity, and at the same time to sense within, cancealed by the physical Symbol, the bright God of Spiritual and terrestrial Light. Such belief is now regarded as a superstition only by rank materialism, which denies Diety, Spirit, Soul, and admits no intelligence outside the mind of man. But if too much wrong superstition bred by ‘Churchianity’–as Lawrence Oliphant calls it–‘renders a man a fool’, too much scepticism makes him mad. We prefer the charge of folly in believing too much, to that of a madness which denies

everything, as do Materialism and Idealism. Hence, the Occultists are fully prepared to receive their dues from Materialism, and to meet the adverse criticism which will be poured on this work, not for writing it, but for believing in that which it contains."

"ಸೂರ್ಯನು ಭೌತಿಕ ವಸ್ತುವಾಗಿದ್ದಾನೆ ಮತ್ತು ಸೂರ್ಯನು ಚೈತನ್ಯವೂ ಆಗಿದ್ದಾನೆ. ನಮ್ಮ ಪೂರ್ವಿಕರು—ಆ 'ಪಾಮರ ವಿಗ್ರಹಾರಾಧಕರು'—ಅವರ ಆಧುನಿಕ ಸಂತತಿಯವರಾದ ಪಾರ್ಸಿಗಳೊಡನೆ, ಆ ಸೂರ್ಯನಲ್ಲಿ ದೇವತ್ವದ ಸಂಕೇತವನ್ನು ಕಾಣುವುದಕ್ಕೂ ಸಮಕಾಲದಲ್ಲಿಯೇ ಆ ಭೌತಿಕ ಸಂಕೇತದಿಂದ ಮರೆಯಾಗಿರುವ ಆಧ್ಯಾತ್ಮಿಕ ಹಾಗೂ ಆಧಿಭೌತಿಕ ಪ್ರಕಾಶದ ಉಜ್ಜ್ವಲನಾದ ದೇವನನ್ನು ಅಂತರ್ಯದಲ್ಲಿ ಗುರುತಿಸುವುದಕ್ಕೂ ತಮ್ಮ ಪೀಳಿಗೆಯಲ್ಲಿಯೇ ಸಾಕಷ್ಟು ಜಾಣರಾಗಿದ್ದರು ಮತ್ತು ಆಗಿದ್ದಾರೆ. ದೇವತ್ವವನ್ನೂ ಚೈತನ್ಯವನ್ನೂ ಆತ್ಮವನ್ನೂ ಅಲ್ಲಗಳೆಯುವ ಮತ್ತು ಮಾನವನ ಮನಸ್ಸಿಗಿಂತಲೂ ಹೊರಗಡೆ ಯಾವ ಚಿನ್ಮಯಸತ್ತೆಯನ್ನೂ ಒಪ್ಪದಿರುವ ಉದ್ದಾಮ ಭೌತಿಕವಾದದಿಂದ ಮಾತ್ರ ಅಂಥಾ ನಂಬಿಕೆಯು ಅಂಧಭ್ರಮೆಯೆಂದು ಗಣಿಸಲ್ಪಟ್ಟಿದೆ. ಲಾರೆನ್ಸ್ ಆಲಿಫ್ಯಂಟರು ಕರೆಯುವಂತೆ, 'ಚರ್ಚ್‌ಮತ'ದಿಂದ ('ಕ್ರಿಸ್ತಮತ'ದಿಂದಲ್ಲ) ಪರಿಪುಷ್ಟವಾದ ತಪ್ಪಾದ ಭ್ರಾಂತಿಯ ಅತಿರೇಕವು ಮನುಷ್ಯನನ್ನು 'ಪೆಚ್ಚ'ನನ್ನಾಗಿ ಮಾಡಿದರೆ, ಸಂಶಯಾತ್ಮಕತೆಯ (ಅವಿಶ್ವಾಸದ) ಅತಿವಾದವು ಅವನನ್ನು ಹುಚ್ಚನನ್ನಾಗಿ ಮಾಡುತ್ತದೆ. ಭೌತಿಕವಾದವೂ ವಸ್ತುಶೂನ್ಯವಾದವೂ ಮಾಡುವಂತೆ ಸರ್ವವನ್ನೂ ನಿರಾಕರಿಸುವಂಥ ಹುಚ್ಚುತನಕ್ಕಿಂತಲೂ, ಅತಿ ಹೆಚ್ಚಾಗಿ ನಂಬುವುದರಿಂದ ಬರುವ ಪೆಚ್ಚುತನದ ಆರೋಪವನ್ನೇ ಲೇಸೆಂದು ಬಗೆಯುತ್ತೇವೆ. ಆದ್ದರಿಂದ ಭೌತಿಕತೆಯಿಂದ ತಮಗೆ ಸಲ್ಲತಕ್ಕುದನ್ನು ಸಲ್ಲಿಸಿಕೊಳ್ಳಲಿಕ್ಕೂ, ಇದನ್ನು ಬರೆದುದಕ್ಕಲ್ಲವಾದರೂ ಇದರಲ್ಲಿರುವ ವಿಷಯಗಳನ್ನು ನಂಬಿದುದಕ್ಕಾಗಿ ಈ ಕೃತಿಯ ಮೇಲೆ ಸುರಿಯುವ ವಿರೋಧಿಯಾದ ಟೀಕೆಯನ್ನು ಎದುರಿಸುವುದಕ್ಕಾಗಿಯೂ ಗುಪ್ತವಿದ್ಯಾಧುರೀಣರು ಪೂರ್ಣ ಸಿದ್ಧರಾಗಿದ್ದಾರೆ."

ಉಪಾಸಕರಿಗೆ ಶಿವನು ಅಭಿಷೇಕಪ್ರಿಯನೂ (ಅಭಿಷೇಕಪ್ರಿಯಃ ಶಿವಃ), ವಿಷ್ಣುವು ಅಲಂಕಾರಪ್ರಿಯನೂ (ಅಲಂಕಾರಪ್ರಿಯೋ ವಿಷ್ಣುಃ) ಇರುವಂತೆ, ಸೂರ್ಯನು ನಮಸ್ಕಾರಪ್ರಿಯ (ನಮಸ್ಕಾರಪ್ರಿಯಸ್ಸೂರ್ಯಃ) ನಾಗಿದ್ದಾನೆ. ದ್ವಿಜರು ತ್ರಿಕಾಲಗಳಲ್ಲಿಯೂ ಮಾಡುವ ಸಂಧ್ಯೋಪಾಸನೆಯಲ್ಲಿ ಪ್ರಧಾನಶಕ್ತಿಯಾದ ಗಾಯತ್ರೀ ದೇವಿಗೆ ಅಧಿಷ್ಠಾನ ದೇವತೆಯೂ ಅಧಿ ದೇವತೆಯೂ ಸೂರ್ಯನೇ ಆಗಿದ್ದಾನೆ. ಉಷಃಕಾಲದಲ್ಲಿ ಪ್ರಾತಸ್ಸಂಧ್ಯೆಯನ್ನು ಉಪಾಸಿಸಿದ ಮೇಲೆ ಉದಯೋನ್ಮುಖನಾದ ಸೂರ್ಯನ ಹೊಂಗಿರಣಗಳು ಮೈಮೇಲೆ ಸಮೃದ್ಧಿಯಾಗಿ ಸುರಿಯುತ್ತಿರುವ ಶುಚಿಯಾದ ಸ್ಥಳದಲ್ಲಿ ಕೇವಲ ಕೌಪೀನಧಾರಿಯಾಗಿ ಅಥವಾ ಅತ್ಯಲ್ಪ ವಸ್ತ್ರಗಳನ್ನುಟ್ಟು ಮಂತ್ರಪೂರ್ವಕ ವಾಗಿಯೂ ವಿಧಿವತ್ತಾಗಿಯೂ ಧಾರಣಾಧ್ಯಾನಗಳಿಂದ ಯುಕ್ತವಾಗಿಯೂ ಸೂರ್ಯನಮಸ್ಕಾರ ಮಾಡಬೇಕು. ಇದರಿಂದ ದೇಹಾರೋಗ್ಯವೂ ಮನಸ್ಸಿನ ಸ್ಥೈರ್ಯವೂ ಬುದ್ಧಿಯೂ ತೇಜಸ್ಸೂ ಆತ್ಮಶಕ್ತಿಯೂ ಬೆಳೆಯುತ್ತವೆ. ಭಕ್ತಿ ಯೋಗಸಾಧನೆಯಲ್ಲಿ ದೇವತಾಭಾವನೆಯೂ ಪ್ರೇಮವೂ ಅಖಂಡ ಧ್ಯಾನವೂ ಮುಖ್ಯವಾಗಿಯೂ, ಮಿಕ್ಕ ಆರೋಗ್ಯಲಾಭ ಮೊದಲಾದವುಗಳು ಗೌಣ ವಾಗಿಯೂ ಇವೆ.

ಉಪಾಸಕನು ತನ್ನ ಇಷ್ಟದೇವನ ಮೂರ್ತಿಯ ರೂಪವನ್ನು ತನ್ನ ಹೃದಯಕಮಲದಲ್ಲಿಯೇ ಪ್ರೇಮದಿಂದ ಭಾವಿಸಿ ಧ್ಯಾನಿಸಬೇಕು. ದೇವಾ ಲಯಕ್ಕೆ ಹೋದ ಭಕ್ತನು ದೇವತಾಮೂರ್ತಿಯ ದರ್ಶನ ಪೂಜಾದಿಗಳನ್ನು ನಡೆಸಿದ ನಂತರ ಹೊರಡುವುದಕ್ಕೆ ಮೊದಲು ಮೂರ್ತಿಯ ಎದುರಿಗೆ ಅಥವಾ ಅಲ್ಲಿ ಒಂದು ಕಡೆ ಸ್ವಲ್ಪ ಹೊತ್ತು ಕುಳಿತು ಹೋಗುವ ಪದ್ಧತಿಯಿದೆ. ಪೂಜಾ- ಲಂಕಾರಾದಿ ಬಾಹ್ಯ ಸಾಧನಗಳಿಂದ ಶೋಭಿಸುತ್ತಿರುವ ದೇವತಾ ರೂಪವನ್ನು ತನ್ನ ಹೃದಯಮಂದಿರದಲ್ಲಿ ಭಕ್ತನು ಉಜ್ಜ್ವಲವಾದ ಧ್ಯಾನಬಲದಿಂದ ಪರಿ ಶೋಭಿಸುವಂತೆ ಸಾಧ್ಯವಾದಷ್ಟು ಕಾಲ ನಿಶ್ಚಲವಾಗಿ ಧಾರಣಮಾಡಬೇಕೆಂ ಬುದೇ ಆ ಪದ್ಧತಿಯ ಉದ್ದೇಶವಿರುತ್ತದೆ. ಆದರೆ ಈ ಮರ್ಮವನ್ನು ತಿಳಿ ಯದೆ, ಹೊರಹೊರಗೇ ಹರಿಯುತ್ತಿರುವ ಮನಸ್ಸುಳ್ಳ ಭಕ್ತರು ದೇವಾಲಯದ ಹೊರಗಿರುವ ಕಟ್ಟೆಯ ತುದಿಯಲ್ಲಿ ಅಥವಾ ಮೆಟ್ಟಿಲ ಅಂಚಿನಲ್ಲಿ ಆತುರದಿಂದ ಅಂಡೂರಿ ಕೊನೆಯ ಸೇವೆಯೆಂದು ರೂಢಿಯ ಕಾಟವನ್ನು ತೀರಿಸಿ ಕೃತಕೃತ್ಯ

ಭಾವದಿಂದ ಹೊರಡುತ್ತಾರೆ. ದೇವಾಲಯದಲ್ಲಾಗಲೀ ಮನೆಯಲ್ಲಾಗಲೀ ಶ್ರಮಪಟ್ಟು ಹಣವನ್ನೂ ವೆಚ್ಚಮಾಡಿ ದೇವತಾಮೂರ್ತಿಗಳನ್ನು ಪುಷ್ಪಾದಿಗಳಿಂದ ಶೃಂಗರಿಸುವುದು ಏತಕ್ಕೆಂದರೆ, ಆ ಸೌಂದರ್ಯ ವೈಭವವು ನಮ್ಮ ಭಾವದಲ್ಲಿ ತುಂಬಿಕೊಂಡು ಖಚಿತವಾಗಿ ಚಿನ್ಮಯರೂಪದಿಂದ ನಲಿಸಬೇಕೆಂದೇ ಹೊರತು ಆ ಮೂರ್ತಿಗಳ ಸಂತೋಷಕ್ಕಾಗಿ ಅಲ್ಲ. ಆ ಚಿನ್ಮಯವಾದ ದೇವತಾ ರೂಪವು ನಮ್ಮ ಮನಸ್ಸಿನಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿ ಜೀವತುಂಬಿದಂತೆ ನಮ್ಮಲ್ಲಿ ಸ್ಫುರಿಸುವ ಅಲೌಕಿಕವಾದ ಸಂತೋಷವೇ ಆ ದೇವತಾಸಂತೋಷ. ನಿಜಾನಂದವನ್ನು ಕೊಡುವ ಪವಿತ್ರಪ್ರೇಮವು ಅನರ್ಘ್ಯವಾದ ರಸಗಟ್ಟಿಯಾಗಿ ನಿಲ್ಲಬೇಕಾದರೆ ಅದನ್ನು ದೇವತಾರೂಪದ ಪಡಿಯಚ್ಚಿನಲ್ಲಿ ಎರಕಹೊಯ್ಯ ಬೇಕು. ಮಿಕ್ಕ ವಿಷಯರೂಪಗಳನ್ನು ಬಿಟ್ಟು ದೇವತಾಭಾವದ ಒಂದು ರೂಪ ದಲ್ಲಿಯೇ ಪ್ರೇಮವು ಬಹುಕಾಲ ನಿಶ್ಚಲವಾಗಿ ನಿಂತು ಅಖಂಡ ಧ್ಯಾನಮಯ ತಪಸ್ಸು ಬೆಳೆದರೆ ಅದು ತಾನಾಗಿಯೇ ಅರೂಪವಾಗಿ ಸಹಜರೂಪವನ್ನು ಹೊಂದುತ್ತದೆ.

ವೈದಿಕಮತದ ವಿಗ್ರಹಾರಾಧನೆಯಲ್ಲಿ ಈ ಘನವಾದ ತತ್ತ್ವವೂ ಉದ್ದೇಶವೂ ಅಡಗಿರುವುದನ್ನು ತಿಳಿಯದೆ, ಕ್ರಿಸ್ತ ಮಹಮ್ಮದೀಯ ಮೊದಲಾದ ಅನ್ಯ ಮತೀಯರು ಮೂರ್ತಿಪೂಜಕರನ್ನು 'ಹೀದನ್ಸ್' ಎಂದೂ, 'ಕಾಫಿರ'ರೆಂದೂ ಮುಂತಾಗಿ ತಿರಸ್ಕಾರ ಮಾಡುತ್ತಾರೆ. ಲೋಕದಲ್ಲಿ ಮೂರ್ತಿಪೂಜೆಯನ್ನು ಮಾಡದೇ ಇರುವ ಜನವೇ ಇಲ್ಲದಿರುವಾಗ ಜನಾಂಗವೆಲ್ಲಿಂದ ಬರಬೇಕು ? ಕ್ರಿಸ್ತಮತದಲ್ಲಿ ರೋಮನ್ ಕ್ಯಾಥೊಲಿಕ್ ಪಂಗಡವು ತಮ್ಮ ದೇವಾಲಯಗಳಲ್ಲಿ ಮೂರ್ತಿಪೂಜೆಯನ್ನೂ ಜಪಧ್ಯಾನಾದಿಗಳನ್ನೂ ಮಾಡಿದರೆ, ಪ್ರಾಟೆಸ್ಟೆಂಟ್ ಪಂಗಡವು ನಿರ್ಗುಣವಾದಿಗಳಾದರೂ ಧ್ಯಾನದಲ್ಲಿ ದೇವತಾ ಸಂಕೇತವನ್ನೂ ಬಾಹ್ಯದಲ್ಲಿ 'ಕ್ರಾಸ್'ನ ಸಂಕೇತವನ್ನೂ ಬಿಡುವುದಕ್ಕೆ ಸಾಧ್ಯವಾಗಿಲ್ಲ. ಮಹಮ್ಮದೀಯರಿಗೆ ಅತ್ಯಂತ ಪವಿತ್ರ ಕ್ಷೇತ್ರವಾದ ಮೆಕ್ಕಾದಲ್ಲಿ ಅವರು 'ಕಾಬಾ' ಎನ್ನುವ ಶಿಲಾಪೀಠಕ್ಕೆ ಗೌರವವನ್ನು ಸಲ್ಲಿಸಬೇಕು. ಅರ್ಧಚಂದ್ರ ಪ್ರತೀಕದಲ್ಲಿ ಅವರಿಗೆ ಗೌರವ-ಪ್ರೇಮ. ಹೀಗೆಲ್ಲಾ ವಿಚಾರ ಮಾಡಿದರೆ, ಶ್ರೀಕೃಷ್ಣನು ಗೀತೆಯಲ್ಲಿ ಹೇಳಿರುವ ಈ ಮುಂದಿನ ಮಾತು ಎಷ್ಟು ಸತ್ಯವಾದುದೆಂದು ಮನಗಾಣಬಹುದು :

**ಕ್ಲೇಶೋಧಿಕತರಸ್ತೇಷಾಮವ್ಯಕ್ತಾಸಕ್ತ ಚೇತಸಾಂ ।**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥**

" ಇಂದ್ರಿಯಗಳಿಗೂ ಮನಸ್ಸಿಗೂ ಅಗೋಚರವಾದ ನಿರಾಕಾರ ಪರಮಾತ್ಮನನ್ನು ಉಪಾಸನೆ ಮಾಡತಕ್ಕವರಿಗೆ ಕಷ್ಟವು ಬಹಳ ಹೆಚ್ಚಾಗಿದೆ. ಏಕೆಂದರೆ, ದೇಹಾಭಿಮಾನಿಗಳಿಂದ ಇಂದ್ರಿಯಗೋಚರವಲ್ಲದ ನಿರಾಕಾರ ಪರಬ್ರಹ್ಮದ ಸಾಧನವು ದುಃಖಪೂರ್ಣವಾಗಿ ಹೊಂದಲ್ಪಡುತ್ತದೆ. "

ಮೂರ್ತಿಪೂಜೆಯನ್ನು ಹೇಳಿರುವ ಶಾಸ್ತ್ರವು '**ಪ್ರತಿಮಾ ಅಲ್ಪಧೀಮತಾಂ**' ಅದು ಅವಿಕಾಸವಾದ ಬುದ್ಧಿಯುಳ್ಳ ಉಪಾಸಕರಿಗೆ ಪ್ರಥಮ ಸಾಧನವೆಂದೂ, ಬ್ರಾಹ್ಮಣಾದಿಗಳಿಗೆ ಅಗ್ನಿಯೇ ದೇವತಾ ಪ್ರತೀಕವೆಂದೂ ಯೋಗಿಗಳಿಗೆ, ಒಳಗೆ ಹೃದಯವೂ ಹೊರಗೆ ಸೂರ್ಯನೂ ದೇವತಾ ಭಾವನೆಗೆ ಸ್ಥಾನಗಳೆಂದೂ ತಿಳಿದವರಿಗೆ ದೇವರು ಒಳಹೊರಗೆಲ್ಲಾ ತುಂಬಿರುವನೆಂದೂ ಹೇಳುತ್ತಿದೆ. ಅಪ್ರಮೇಯನಾದ ಭಗವಂತನು ಅಲ್ಪವಾದ ಮೂರ್ತಿಯಲ್ಲವಾದರೂ ಅವನು ಸರ್ವವ್ಯಾಪಿಯಾಗಿರುವುದರಿಂದ ಮೂರ್ತಿಯಲ್ಲಿಯೂ ತುಂಬಿಕೊಂಡಿದ್ದಾನೆ. ಎಲ್ಲೆಲ್ಲಿಯೂ ತುಂಬಿರುವ ನೀರುಳ್ಳ ಸಮುದ್ರದಲ್ಲಿ ಯಾವುದೊಂದು ಸಣ್ಣ ಸುಳಿಯನ್ನೂ ಅಲೆಯನ್ನೂ ಪೂಜಿಸಿದರೂ ಹೇಗೆ ಸಮುದ್ರಪೂಜೆಯೇ ಆಗುವುದೋ ಹಾಗೆ ದೇವತಾಭಾವನೆಯಿಂದ ಜಗತ್ತಿನಲ್ಲಿ ಏನನ್ನು ಪೂಜಿಸಿದರೂ ಅದು ದೇವರಿಗೇ ಸಲ್ಲುವುದು. ಬಾಲಕರಿಗೆ ಬಣ್ಣದ ಆನೆಯು ನಿಜವಾದ ಆನೆಯನ್ನು ನೆನಪುಗೊಡುವಂತೆ ಬಾಲಬುದ್ಧಿಗೆ ವಿಭೂತಿ ವಸ್ತುಗಳ ಪೂಜೆಯು ಜಗತ್ಕಾರಣನಾದ ಭಗವಂತನನ್ನು ನೆನಪುಗೊಡುವುದು. ದೂರದಲ್ಲಿರುವ ಅಥವಾ ಸಮೀಪದಲ್ಲಿರುವ ಪ್ರಜೆಗಳು ರಾಜಭಕ್ತಿಯಿಂದ ರಾಜನ ಛಾಯಚಿತ್ರವನ್ನು ಗೌರವಿಸಿದರೂ ಪೂಜಿಸಿದರೂ ರಾಜನಿಗೆ ಹೇಗೆ ಸಂತೋಷವಾಗುವುದೋ ಹಾಗೆಯೇ ಜ್ಞಾನದಿಂದ ದೂರವಿರುವ ಅಥವಾ ಸಮೀಪವಿರುವ ಭಕ್ತರು ದೇವತಾಪ್ರತೀಕಗಳನ್ನು ಪೂಜಿಸಿದರೆ ದೇವನಿಗೆ ಸಂತೋಷವೇ ಆಗುವುದು. ರಾಜನಿಲ್ಲದ ಕಾಲದಲ್ಲಿಯಾದರೂ ಜನನಾಯಕರನ್ನೂ ಅವರ ಪ್ರತೀಕಗಳನ್ನೂ ಜನರು ಆದರಿಸುವುದೂ, ಗೌರವಿಸುವುದೂ, ಜಯಕಾರಮಾಡುವುದೂ ಅದಕ್ಕೆ ನಾಯಕರು ಸಂತೋಷಪಡುವುದೂ ಪ್ರಸಿದ್ಧವೇ ಆಗಿದೆ. ದೇವರು

ಹೊರಗೆ ದೂರದಲ್ಲಿರುವನಾದರೆ ಅವನ ಸಂತೋಷದ ವಿಷಯದಲ್ಲಿ ಸಂದೇಹ ಪಡಬಹುದಾಗಿತ್ತು; ಆದರೆ, ಅವನು ನಮ್ಮೊಳಗೇ ಗುರುಭಾವದಿಂದ ಇರುವುದರಿಂದಲೂ ಗೌರವಭಾವವೇ ಸಂತೋಷಜನಕವಾದುದರಿಂದಲೂ ಪೂಜ್ಯಭಾವದಿಂದ ದೇವನು ಪ್ರಸನ್ನನಾಗುವುದರಲ್ಲಿ ಸಂಶಯವೇ ಇಲ್ಲ. ಭಕ್ತನು ಪೂಜಿಸುವ ಪ್ರತೀಕವು ಹೊರಗಿದ್ದರೂ ಅವನು ಭಕ್ತಿಯಿಂದ ಭಾವಿಸುವ ಅದರ ರೂಪವು ಅವನ ಒಳಗೇ ಇರುವುದರಿಂದ ಅದು ಅವನಿಗೆ ಅನುಗ್ರಹಮಾಡುತ್ತದೆ. ಅದರಿಂದ ಅವನ ಮನಃಕಮಲವು ಅರಳಿ ಪವಿತ್ರತೆಯ ಪರಿಮಳವನ್ನೂ ಆನಂದ ಮಕರಂದವನ್ನೂ ನಿರಂತರವಾಗಿ ಹೊರಸೂಸುತ್ತದೆ.

ಸಗುಣಸಾಕಾರೋಪಾಸನೆಯನ್ನು ಮಾಡುವುದೇಕೆಂದರೆ, ಆಚಾರ್ಯ ಶಂಕರರು ಹೀಗೆ ಹೇಳಿದ್ದಾರೆ :

**ಪ್ರತಿಬಿಂಬಾಲಂಕೃತಿವಿಧಿಕುಶಲಾ ।**
**ಬಿಂಬಾಲಂಕೃತಿಮಾದಧತೇ ॥**

ನಾವು ನಮ್ಮ ಸೌಂದರ್ಯವನ್ನು ನೋಡಿಕೊಂಡು ಆನಂದಪಡುವುದಕ್ಕಾಗಿ ನಿಲುವುಗನ್ನಡಿಯ ಮುಂದೆ ನಿಂತುಕೊಳ್ಳುತ್ತೇವೆ. ಏಕೆಂದರೆ, ನಮ್ಮ ಮುಖವೇ ಆದರೂ ಅದು ನಮಗೆ ಕಾಣಿಸುವುದಿಲ್ಲ, ಅದಕ್ಕೊಂದು ಸಾಧನವು ಬೇಕು – ಕನ್ನಡಿಯು ಬೇಕು. ಕನ್ನಡಿಯಲ್ಲಿ ಕಾಣುವುದು ನಮ್ಮ ರೂಪದ ಪ್ರತಿಬಿಂಬ. ಪ್ರತಿಬಿಂಬವು ಕಸ್ತೂರಿಯ ತಿಲಕದಿಂದಲೂ, ಕರ್ಣಕುಂಡಲಗಳಿಂದಲೂ, ಪುಷ್ಪಮಾಲಿಕೆಯಿಂದಲೂ ಅಲಂಕೃತವಾಗಿ ಕಾಣಬೇಕೆಂದು ನಮಗೆ ಅಪೇಕ್ಷೆಯಾದರೆ, ಕನ್ನಡಿಯಲ್ಲಿ ಕಾಣುವ ಮುಖಕ್ಕೆ ತಿಲಕವನ್ನೂ, ಕಿವಿಗೆ ಕುಂಡಲವನ್ನೂ, ಕೊರಳಿಗೆ ಹಾರವನ್ನೂ ಅಲಂಕರಿಸುವುದು ಸಾಧ್ಯವಾಗಬಹುದೇ ? ಪ್ರತಿಬಿಂಬದಲ್ಲಿ ಕಾಣಬೇಕೆಂದು ಬಯಸುವ ಪ್ರತಿಯೊಂದು ಶೃಂಗಾರವನ್ನೂ ಬಿಂಬದಲ್ಲಿಯೇ ಮಾಡಿ ಮುಗಿಸಬೇಕಾದುದು ಅನಿವಾರ್ಯವೂ ಅವಶ್ಯವೂ ಆಗಿದೆ. ನೋಟವು ಪ್ರತಿಬಿಂಬದಲ್ಲಿ ಇದ್ದರೂ ಮಾಟವು ಬಿಂಬದಲ್ಲಿಯೇ ಇರುವುದು.

ದೇವನೇ ಮೂಲಬಿಂಬ; ಜೀವನೇ ಅಂತಃಕರಣದಲ್ಲಿ ಪ್ರತಿಫಲನವಾದ ಅವನ ಪ್ರತಿಬಿಂಬ. ಜೀವರಾದ ತಮ್ಮಲ್ಲಿ ಯಾವ ಜ್ಞಾನ, ಐಶ್ವರ್ಯ, ಶಕ್ತಿ,

ಬಲ, ವೀರ್ಯ, ತೇಜಸ್ಸು, ಸತ್ಯ, ಶಾಂತಿ, ಆನಂದ, ಸೌಂದರ್ಯ ಮೊದಲಾದ ಕಲ್ಯಾಣಗುಣ-ಶಕ್ತಿಗಳು ಇರಬೇಕೆಂದು ವಿವೇಕಿಯಾದವರೆಲ್ಲಾ ಬಯಸುತ್ತಾರೋ ಅಂಥ ಗುಣ-ಶಕ್ತಿಗಳನ್ನು ನಿರ್ಗುಣ ನಿರಾಕಾರನಾದ (ಮೂಲಬಿಂಬ) ಭಗವಂತನಲ್ಲಿ ಭಾವನಾಬಲದಿಂದ ಆವಾಹನೆಮಾಡಿ ಉಪಾಸನೆ ಮಾಡಬೇಕು. ಹೀಗೆ ಮಾಡಲು ನಮ್ಮ ದೇಹೇಂದ್ರಿಯಗಳಲ್ಲಿಯೂ ಹೊರಗಡೆ ವಿಶಾಲ ವಿಶ್ವದಲ್ಲಿಯೂ ಹರಡಿಕೊಂಡಿರುವ ನಮ್ಮ ಪ್ರಜ್ಞಾಕಿರಣಗಳನ್ನು ಅಥವಾ ಮನೋವೃತ್ತಿಗಳನ್ನು ಕೇಂದ್ರೀಕರಿಸುವುದಕ್ಕಾಗಿ ನಾವು ಮಾಡಿಕೊಂಡಿರುವ ಅಲೌಕಿಕ ಸಾಧನವಾದ ವಿಲಕ್ಷಣ ದರ್ಪಣವೇ (Mesmeric Mirror or Mystic Mirror) ದೇವತಾಪ್ರತೀಕವು (ಪ್ರತಿಮೆಯು). ನಿರ್ಗುಣ ನಿರಾಕಾರವಾದ ಪರಬ್ರಹ್ಮವೇ ನಮ್ಮ ಹೃದಯದಲ್ಲಿಯೂ, ಹೊರಗೆ ದೇವತಾ ಪ್ರತೀಕವಲ್ಲಿಯೂ ಎಲ್ಲೆಲ್ಲಿಯೂ ತುಂಬಿದೆ. ಇದೊಂದೇ ಸತ್ಯವಾದುದು; ಇದರ ಹೊರತು ಇನ್ನೊಂದಿಲ್ಲ. ಅಚಲವಾದ ಈ ನಿಶ್ಚಯಜ್ಞಾನವು ನಮ್ಮ ಹೃದಯದಲ್ಲಿದ್ದರೆ ನಾವು ಮುಕ್ತರು. ಆದರೆ ಈ ಮಂಗಳಕರವಾದ ತಿಳಿವು ನಮ್ಮ ಅಂತಃಕರಣವೆಂಬ ಕನ್ನಡಿಯಲ್ಲಿ ಬೆಳಗುವುದಕ್ಕೆ ಮನಸ್ಸು ರಜೋಗುಣ ತಮೋಗುಣಗಳಿಂದ ಚಂಚಲವೂ ಮಲಿನವೂ ಆಗಿರುವುದರಿಂದ ಸಾಧ್ಯವಾಗುವುದಿಲ್ಲ. ರಜಸ್ತಮೋಗುಣಗಳು ತಗ್ಗುವುದಕ್ಕೆ ಸತ್ತ್ವಗುಣವು ಬೆಳೆಯಬೇಕು. ಸತ್ಯ, ಧರ್ಮ, ತಪಸ್ಸು, ಯಜ್ಞ, ದಾನ, ಜ್ಞಾನ, ಶಾಂತಿ, ವೀರ್ಯ, ತೇಜಸ್ಸು, ಕ್ಷಮಾ, ಈಶ್ವರೀಭಾವ ಮೊದಲಾದವೇ ಸತ್ತ್ವಗುಣಸಂಬಂಧಿಯಾದ ಸಾಧನಗಳು. ಅಸಂಖ್ಯವಾದ ಈ ಕಲ್ಯಾಣಗುಣಗಳೆಂಬ ರತ್ನಗಳಿರುವ ಮಹಾಸಾಗರವೇ ನಿರ್ಗುಣಪರಬ್ರಹ್ಮ. ಇದು ಎಲ್ಲಾ ಧರ್ಮಗಳಿಗೂ ಒಪ್ಪಿಗೆಯಾದ ತತ್ತ್ವ. ಎಲ್ಲೆಲ್ಲಿಯೂ ತುಂಬಿರುವ ಆ ಸಾಗರವೇ ನಮ್ಮ ಹೃದಯದಲ್ಲಿಯೂ ತುಂಬಿರುವುದರಿಂದ, ಅಂತಃಕರಣದಲ್ಲಿಯೂ ದೇಹೇಂದ್ರಿಯಗಳಲ್ಲಿಯೂ ಅಂಟಿಕೊಂಡಿರುವ 'ನಾನು, ನನ್ನದು' ಎಂಬ ಜ್ಞಾನವನ್ನು ಬಿಡಿಸಿ ಒಳಗೆ ತುಂಬಿರುವ ಬ್ರಹ್ಮಸಾಗರದಲ್ಲಿ ಬೆರೆಸಿ ಕರಗಿಸಿದರೆ ನಾವೇ ಆ ಬ್ರಹ್ಮಸಾಗರವೂ, ಅನಂತ ಕಲ್ಯಾಣಗುಣಗಳಿಗೆ ಆಗರವೂ ಆಗಿರುವುದು ಅನುಭವಗಮ್ಯವಾಗುತ್ತದೆ. ಆದರೆ ಈ ಶುದ್ಧಿಯೂ ಶಕ್ತಿಯೂ ಮನಸ್ಸಿಗೆ ಸಾಲದವರು ತಮ್ಮ ಕಲ್ಯಾಣ ಗುಣಸ್ವರೂಪವನ್ನೂ ಸೌಂದರ್ಯವನ್ನೂ ನೋಡಿಕೊಳ್ಳುವುದಕ್ಕಾಗಿ ಉಪ

ಯೋಗಿಸುವ ಕನ್ನಡಿಯೇ ಪ್ರತೀಕೋಪಾಸನೆಯಾಗಿದೆ. ಆ ಪ್ರತೀಕವು ಸುಂದರವಾದ ಶಿರಕರಚರಣಾದ್ಯವಯವಗಳಿಂದ ಕೂಡಿದ ಶಿಲಾ, ಲೋಹಾದಿಗಳ ಮೂರ್ತಿಯಾಗಬಹುದು ಅಥವಾ ಮೃಗ ಮನುಷ್ಯಾದಿಗಳ ಆಕಾರವಲ್ಲದ ಸಾಲಿಗ್ರಾಮ-ಲಿಂಗಾದಿಗಳಂತಹ ವೃತ್ತ-ದೀರ್ಘವೃತ್ತ ಮೊದಲಾದ ಆಕೃತಿಯಾಗಬಹುದು; ದೇವತಾಭಾವನೆಯಿಂದ ಬರೆಯಲ್ಪಟ್ಟು ದೇವತಾಭಾವನೆಯನ್ನೇ ಹುಟ್ಟಿಸುವ ಒಂದು ಚಿತ್ರವಾಗಬಹುದು; ಅಥವಾ ವೃಕ್ಷ, ಪರ್ವತ, ನದಿ, ಸಮುದ್ರ, ಅಗ್ನಿ, ಜ್ಯೋತಿ, ಚಂದ್ರ, ಸೂರ್ಯ ಮೊದಲಾದ ನಿಸರ್ಗದ ವಿಭೂತಿವಸ್ತುಗಳಾಗಬಹುದು ಅಂತು ಉಪಾಸನೆಗೆ ಮನಸ್ಸು ಮೆಚ್ಚಿದ ಯಾವುದೊಂದು ಪವಿತ್ರರೂಪವಾದರೂ ಆಗಬೇಕು.

ಹೊರಗೆ ಹರಿಯುವ ಸ್ವಭಾವವುಳ್ಳ ಮನಸ್ಸಿಗೆ ಹೊರಗೊಂದು ವಿಭೂತಿವಸ್ತುವಿನಲ್ಲಿ ಕಲ್ಯಾಣಗುಣಪೂರ್ಣನಾದ ಭಗವಂತನನ್ನು ಭಾವಿಸುವುದು ಸುಲಭವಾಗುತ್ತದೆ. ಎಲ್ಲೆಡೆಯಲ್ಲಿಯೂ ತುಂಬಿರುವ ದೇವನು ಪ್ರತೀಕದಲ್ಲಿಯೂ ಇರುವುದರಿಂದ ಬಿಂಬವೂ ಆ ಕನ್ನಡಿಯಲ್ಲಿಯೇ ಇದ್ದಂತಾಯಿತು. ತನ್ನಲ್ಲಿ ಆರೋಪಿತವಾಗಿರುವ ಭಗವದ್ಭಾವನೆಯು ಭಕ್ತನ ಭಾವನೆಯ ಪ್ರತಿಫಲನವೇ ಆಗಿರುವುದರಿಂದ ಪ್ರತಿಬಿಂಬವೂ ಆ ಪ್ರತೀಕ ದರ್ಪಣದಲ್ಲಿಯೇ ಇದ್ದಂತಾಯಿತು. ಕನ್ನಡಿಯಲ್ಲಿ ಕಾಣುವ ತನ್ನ ಪ್ರತಿಬಿಂಬ ಸೌಂದರ್ಯವನ್ನು ನೋಡತಕ್ಕವನು ಆ ಸೌಂದರ್ಯವು ತನ್ನದೇ ಎಂದು ಸಂದೇಹವಿಲ್ಲದೇ ತಿಳಿಯುವಂತೆ ಪೂಜನೀಯವಾದ ಪ್ರತೀಕದಲ್ಲಿ ತನ್ನಿಂದಲೇ ಆವಾಹಿತವಾಗಿರುವ ದೈವಭಾವವು ತನ್ನಲ್ಲಿಯೇ ಇರುವ ತನ್ನ ಸ್ವರೂಪವೇ ಆದುದೆಂದು ತಿಳಿಯಬೇಕು. ಧ್ಯಾನದಲ್ಲಿಯೂ ಜ್ಞಾನದಲ್ಲಿಯೂ ಹಾಗೆ ತಿಳಿಯುವುದಿರಲಿ. ಕೇವಲ ಬಹಿರಂಗ ಪೂಜಾಸಮಯದಲ್ಲಿಯೂ ಸಹ **"ಸೋಽಹಂ ಭಾವೇನ ಪೂಜಯೇತ್"** ತನ್ನ ಪೂಜ್ಯವಸ್ತುವು ತಾನೇ ಎಂಬ ನಿಶ್ಚಯದಿಂದ ಪೂಜಿಸಬೇಕು

ರಾತ್ರಿಯ ಕತ್ತಲೆಯಲ್ಲಿ 'ಪವರ್‌ಫುಲ್ ಬ್ಯಾಟರಿ ಲೈಟ'ನ್ನೋ 'ಸರ್ಚ್ ಲೈಟ'ನ್ನೋ ಕೈಯಲ್ಲಿ ಹಿಡಿದವನು ಮುಂದಿರುವ ವಸ್ತುಗಳನ್ನು ನೋಡಬಲ್ಲನೇ ಹೊರತು. ಆ ಪ್ರದೀಪದ ಕಿರಣಗಳು ಹಾಗೆಯೇ ಮುಮ್ಮುಖವಾಗಿ ಎದುರಿರುವ ವಿಷಯಗಳ ಕಡೆಗೆ ಪ್ರವಹಿಸುತ್ತಿರುವವರೆಗೂ – ತನ್ನನ್ನು ತಾನೇ ನೋಡಿ

ಕೊಳ್ಳಲಾರ. ಆದರೆ ಎದುರಿನಲ್ಲಿ ದೊಡ್ಡ ಕನ್ನಡಿ ಬಂದರೆ ಅದರ ಮೇಲೆ ಬಿದ್ದ ಬ್ಯಾಟರಿಯ ಪ್ರಕಾಶವು ಪರಾವರ್ತನವಾಗಿ ಆ ಪ್ರದೀಪಧಾರಿಯನ್ನೇ ಚೆನ್ನಾಗಿ ಬೆಳಗಬಲ್ಲುದು. ಹಾಗೆಯೇ ಭಗವದ್ಭಾವದಲ್ಲಿ ಮುಮ್ಮುಖವಾಗಿ ಪ್ರವಹಿಸುತ್ತಿರುವ ಭಕ್ತನ ಪ್ರಜ್ಞಾಪ್ರಕಾಶವು ಹಿಮ್ಮುಖವಾಗಿ ಪ್ರವಹಿಸಿ ಆ ಭಾವದಿಂದ ಅವನನ್ನೇ ಬೆಳಗುವಂತಾಗುವುದೇ ಪ್ರತೀಕೋಪಾಸನೆಯ ಪ್ರಯೋಜನವು.

ಉಪಾಸನೆಯಲ್ಲಿ ಗುರೂಪಾಸನೆಯೇ ಅತ್ಯಂತ ಶ್ರೇಷ್ಠವಾದುದು. ಏಕೆಂದರೆ, ಮಿಕ್ಕ ಉಪಾಸನೆಗಳಲ್ಲಿ ಉಪಾಸ್ಯಮೂರ್ತಿಯು ಜಡವಾದುದು; ಭಕ್ತನ ಭಾವನೆಯ ಒಲುಮೆಯೇ ಅವನಿಗೆ ಫಲವನ್ನು ಕೊಡಬೇಕೇ ಹೊರತು. ಹೊರಗಿರುವ ಜಡಮೂರ್ತಿಯು ಏನೂ ಮಾಡಲಾರದು. ಶ್ರೋತ್ರಿಯ ಬ್ರಹ್ಮನಿಷ್ಠನೂ ಕರುಣಾನಿಧಿಯೂ ಆದ ಗುರುವು ಚೈತನ್ಯಮೂರ್ತಿಯು: ತನ್ನ ಪ್ರೇಮದಿಂದಲೂ ಉಪದೇಶದಿಂದಲೂ ಅನುಗ್ರಹದಿಂದಲೂ ಶಿಷ್ಯನಿಗೆ ಪ್ರೋತ್ಸಾಹವನ್ನೂ ಸಂಶಯಗಳ ಪರಿಹಾರವನ್ನೂ ಶಾಂತಿ-ಆನಂದಗಳನ್ನೂ ದಯಪಾಲಿಸಬಲ್ಲನು. ಭೌತಿಕ ವಸ್ತು-ಶಕ್ತಿಗಳ ಪ್ರತ್ಯಕ್ಷಾನುಭವವನ್ನು ಮಾಡಿಕೊಡುವಷ್ಟು ವಾಸ್ತವವಾಗಿ ಅಧಿಕಾರಿಯಾದ ಸಚ್ಛಿಷ್ಯನಿಗೆ ಯೋಗೀಶ್ವರನಾದ ಸದ್ಗುರುವು ಚೈತನ್ಯಾನುಭವವನ್ನು ಕರುಣಿಸಬಲ್ಲನು. ತಜ್ಞರಾದ ಗುರುಭಕ್ತರಿಗೆ ಈ ವಿಚಾರವು ಆಶ್ಚರ್ಯಕರವೇನಲ್ಲ. ಪ್ರತೀಕೋಪಾಸನೆಯು ಚಿತ್ತಶುದ್ಧಿಯನ್ನೂ ಚಿತ್ತಸ್ಥೈರ್ಯವನ್ನೂ ಕೊಡಬಲ್ಲುದೇ ಹೊರತು ಮೋಕ್ಷವನ್ನು ಕೊಡಲಾರದು. ಏಕೆಂದರೆ '**ಜ್ಞಾನಾದೇವತು ಕೈವಲ್ಯಂ**' ಎಂಬ ಶ್ರುತಿಯಂತೆ ಜ್ಞಾನದಿಂದಲೇ ಅಥವಾ ಪರಾಭಕ್ತಿಯಿಂದಲೇ ಮೋಕ್ಷಪ್ರಾಪ್ತಿಯು. ತಾನೇ 'ಅದ್ವಿತೀಯ ಪರಬ್ರಹ್ಮ' ಎನ್ನುವ ಜ್ಞಾನವು ವಿಚಾರದಿಂದಲೇ ಲಭ್ಯವಾಗುವುದು, ವಿಚಾರವು ತತ್ತ್ವೋಪದೇಶದ ಶ್ರವಣಾದಿಗಳಿಂದಲೂ, ಶ್ರವಣಾದಿಗಳು ಶ್ರೋತ್ರಿಯ ಬ್ರಹ್ಮನಿಷ್ಠನಾದ ಸದ್ಗುರುವಿನಿಂದಲೂ ಪ್ರಾಪ್ತವಾಗುವುವು.

ಜಡವಾದ ಪ್ರತಿಮೆಯು ಭಕ್ತನು ಮಾಡಿದ ಪೂಜಾದಿ ಉಪಚಾರಗಳಿಂದ ಸಂತೋಷಗೊಳ್ಳಲಾರದು. ಹಾಗೂ ಪ್ರೇಮಕ್ಕೆ ಪ್ರತಿಯಾಗಿ ಪ್ರೇಮವನ್ನು ಮಾಡಿ ಸಂತೋಷಪಡಿಸಲಾರದು. ಸಮಯೋಚಿತವಾದ ಬೋಧೆಯಿಂದ ಸಂಶಯಗಳನ್ನು ಕಳೆದು ಸಮಾಧಾನವೀಯಲಾರದು. ಭಕ್ತನ

ಸಂಕಟಗಳನ್ನು ಕೇಳಿ ಕನಿಕರವನ್ನು ತೋರಿಸಿ ಆಸ್ವಾಯನವನ್ನುಂಟುಮಾಡ ಲಾರದು. ದೇವತಾ ಉಪಾಸನೆಯಲ್ಲಿ ಈ ಫಲಗಳೆಲ್ಲಾ ದೊರಕಬೇಕಾದರೆ. ಉಪಾಸ್ಯಮೂರ್ತಿಯಾದ ಪಾಂಡುರಂಗನೊಡನೆ ಪ್ರೇಮದಿಂದ ವ್ಯವಹರಿಸು ತ್ತಿದ್ದ ನಾಮದೇವಾದಿಗಳಂತೆ ಭಕ್ತನು ಉತ್ಕಟವಾದ ಭಾವನಾಬಲವುಳ್ಳವನೂ ಶ್ರದ್ಧಾನಿಷ್ಠೆಯುಳ್ಳವನೂ ಆಗಿರಬೇಕು. ನಾಮದೇವನು ಅಂಥ ಶ್ರೇಷ್ಠಭಕ್ತನೇ ಆದರೂ ಅವನು ಪೂರ್ಣ ಶಾಂತಿಯನ್ನೂ ಕೃತಕೃತ್ಯಭಾವವನ್ನೂ ಪಡೆಯುವುದ ಕ್ಕಾಗಿ ಪಾಂಡುರಂಗನೇ ಅವನನ್ನು ಬ್ರಹ್ಮನಿಷ್ಠನಾದ ಸದ್ಗುರುವಿನ ಉಪ ದೇಶಾನುಗ್ರಹಗಳಿಗಾಗಿ ಕಳಿಸಿಕೊಟ್ಟನು.

ಉಪಾಸ್ಯದೇವನು ಭಕ್ತನ ಇಚ್ಛೆಯಂತೆ ಅವನೊಡನೆ ಪ್ರೇಮದಿಂದ ಅನೇಕ ಲೀಲೆಗಳಾಡಿದ ಅದ್ಭುತ ಮಹಿಮಾ ವಿಚಾರಗಳು ಮಹಾಭಕ್ತರ ಚರಿತ್ರೆ ಗಳಲ್ಲಿ ಬಂದಿವೆ. ಇದೆಲ್ಲಕ್ಕೂ ಭಕ್ತನ ಭಾವನಾಮಯವಾದ ಪುಣ್ಯಪ್ರಭಾವವೆ ಕಾರಣ. ಪುಣ್ಯಭೂಮಿಯೆನಿಸಿದ ಈ ಭಾರತದಲ್ಲಿಯೇ ಅಲ್ಲದೆ ವಿದೇಶಗಳ ಚರಿತ್ರೆಗಳಲ್ಲಿಯೂ ದಿವ್ಯದರ್ಶನಗಳೂ. ದಿವ್ಯವಾಣಿಗಳೂ, ದಿವ್ಯಮಹಿಮೆಗಳೂ ತುಂಬಿವೆ. ಎಷ್ಟೋ ಸಂದರ್ಭಗಳಲ್ಲಿ ನಾಸ್ತಿಕರಿಗೂ ಅಭಕ್ತರಿಗೂ ದೇವತಾ ದರ್ಶನವಾಗಿ ಅವರ ಭಾವಜೀವನಗಳನ್ನು ಪರಿವರ್ತನ ಮಾಡಿದೆ. ಇಂಥ ಸಂದರ್ಭಗಳಲ್ಲಿ ಅದೃಷ್ಟವಾದ ಅವನವನ ಪೂರ್ವಜನ್ಮಗಳ ಪುಣ್ಯವೇ ಪಕ್ವ ವಾದ ಕಾಲದಲ್ಲಿ ಅವನಿಗೆ ಫಲಿಸಿರಬೇಕು, ಅಥವಾ ಅವ್ಯಾಜವಾದ ದೇವತಾನು ಗ್ರಹವೇ ಆಗಿರಬೇಕು. ಹೀಗಾಗಲು ಮಹರ್ಷಿಗಳು ದಿವ್ಯದೃಷ್ಟಿಯಿಂದ ತಿಳಿದು ಪುರಾಣಗಳಲ್ಲಿ ಹೇಳಿರುವಂತೆ. ಲೋಕಾಂತರಗಳೂ ದೇವತಾಶಕ್ತಿಗಳೂ ಈ ಜಗತ್ತಿನಷ್ಟೇ ಅಥವಾ ಇನ್ನೂ ಹೆಚ್ಚಾಗಿ ಸತ್ಯವಾಗಿರಬೇಕು. ರಾಮಾಯಣ- ಮಹಾಭಾರತ ಗ್ರಂಥಗಳಲ್ಲಿ ಇದಕ್ಕೆ ಬೇಕಾದಷ್ಟು ದೃಷ್ಟಾಂತಗಳು ಸಿಕ್ಕುತ್ತವೆ. ಮಹಾಭಕ್ತರಾದ ಸತ್ಪುರುಷರ ಚರಿತ್ರೆಗಳಲ್ಲಿ ವಿಚಿತ್ರವಾದ ದೈವೀ ಲೀಲೆಗಳಿಗೆ ಸಮೃದ್ಧಿಯಾದ ಉದಾಹರಣೆಗಳಿವೆ. ಕನಕನು ಒಬ್ಬ ಕುರುಬನೂ ಯೋಧನೂ ಹಲವು ಜನರಿಗೆ ನಾಯಕನೂ ಆಗಿದ್ದನು. ಅವನಿಗಿಷ್ಟವಿಲ್ಲದಿದ್ದರೂ ಎಷ್ಟೋ ಸಲ ಅವನಿಗೆ ಕೃಷ್ಣಮೂರ್ತಿಯು ದರ್ಶನಕೊಟ್ಟು "ಕನಕ! ನೀನು ನನ್ನ ದಾಸನಾಗೋ! ಕನಕ! ನೀನು ನನ್ನ ದಾಸನಾಗೋ!" ಎಂದು ಒತ್ತಾಯ ಮಾಡುತ್ತಿದ್ದನಂತೆ. ಅಂತು ಮಾರ್ಜಾಲ-ಕಿಶೋರ ನ್ಯಾಯದಿಂದ ಕೊನೆಗೆ

ಕೃಷ್ಣನು ಕನಕನನ್ನು ತನ್ನ ದಾಸನನ್ನಾಗಿ ಮಾಡಿಕೊಳ್ಳುವುದರಲ್ಲಿ ವಿಜಯಶಾಲಿಯಾಗಿಯೇಬಿಟ್ಟನಂತೆ.

ಮಹಾತ್ಮಾ ಯೇಸುಕ್ರಿಸ್ತನಿಗಿಂತಲೂ ಬಹಳ ಹಿಂದೆ ಕ್ರಿ.ಪೂ. 1571ರಲ್ಲಿ ಹುಟ್ಟಿದ ಯಹೂದಿಗಳ ಗುರುವಾದ ಮೋಸೆಸ್ಸನಿಗೆ ದೇವರು ತಾನಾಗಿಯೇ ಪುನಃ ಪುನಃ ದರ್ಶನಕೊಟ್ಟು ಬೋಧವಮಾಡಿ ಯಹೂದೀ ಜನಾಂಗದ ಉದ್ಧಾರ ಕಾರ್ಯವನ್ನು ಪ್ರೋತ್ಸಾಹಕೊಟ್ಟು ಮಾಡಿಸಿದನಂತೆ. ಮೋಸೆಸ್ಸನು ದೇವರನ್ನು ಅವನ ಹೆಸರೇನೆಂದು ಕೇಳಲು, ದೇವರು 'ನಾನಿದ್ದೇನೆ' ಎಂಬುದೇ ತನ್ನ ನಿಜವಾದ ಹೆಸರೆಂದು ಹೇಳಿದನಂತೆ. ಉಪನಿಷತ್ತುಗಳಲ್ಲಿ ಬ್ರಹ್ಮವು **'ಸದ್ರೂಪ'**ವೆಂದೂ, **'ಸತ್ಯಂಜ್ಞಾನಮನಂತಂ ಬ್ರಹ್ಮ'** ಎಂದೂ ಸತ್ಯ ಜ್ಞಾನಾನಂದರೂಪವೆಂದೂ ಹೇಳಿದೆ. ಸದ್ರೂಪವಾದ ಬ್ರಹ್ಮವು ತಾನೇ ಅನುಗ್ರಹಮಾಡಿ ಮೈವೆತ್ತು ಮಾತಾಡುವುದಾದರೆ, 'ನೀನಾರು?' ಎಂಬ ಭಕ್ತನ ಪ್ರಶ್ನೆಗೆ 'ಇದ್ದೇನೆ–ನಾನಿದ್ದೇನೆ' **(ಅಸ್ಮಿ–ಅಹಮಸ್ಮಿ)** ಎಂದು ತಾನೇ ನಿಜವಾಗಿ ಉತ್ತರವನ್ನು ಕೊಡಬೇಕು. ದೇವರು ಕೇವಲ 'ಸನ್ಮಾತ್ರ' ಸ್ವರೂಪನಾದವನು. ದೇವರ ಜ್ಞಾನ ಆನಂದ ಮೊದಲಾದ ರೂಪಗಳು ಸನ್ಮಾತ್ರವೇ ಬಿಚ್ಚಿ ಬೆಳೆದುದು. ಮೋಸೆಸ್ಸನು ತನ್ನ ಜನರಿಗೆ ವಿಶ್ವಾಸವನ್ನೂ ಭಯಭಕ್ತಿಗಳನ್ನೂ ಹುಟ್ಟಿಸುವುದಕ್ಕಾಗಿ ತನಗೆ ದರ್ಶನ ಕೊಟ್ಟು ಆಜ್ಞೆಮಾಡಿದ್ದಾನೆಂದು ತಾನು ಹೇಳಿಕೊಳ್ಳಬೇಕಾಗಿರುವ ದೇವರ ವಿಷಯದಲ್ಲಿ ಬೇಕುಬೇಕಾದ ಕಲ್ಪನೆಗಳನ್ನು ಬೆಳೆಸಿ ಮಹಿಮಾಪೂರ್ಣವಾಗಿಯೂ, ಅದ್ಭುತವಾಗಿಯೂ ಹೇಳಿಕೊಳ್ಳಬಹುದಾಗಿತ್ತು. ಆದರೆ ಯಾವ ಆಡಂಬರವೂ ಇಲ್ಲದೆ—ಇನ್ನಿಲ್ಲೆನ್ನುವಷ್ಟು—ಅತ್ಯಂತ ಸರಳವೂ ಸುಲಭವೂ ಸಂಕ್ಷಿಪ್ತವೂ ಸಹಜವೂ ಸತ್ಯವೂ (simplest) ಆದ ಮಾತಿನಲ್ಲಿ 'ನಾನಿದ್ದೇನೆ' ಎಂಬ ದೇವರು ತನಗೆ ದರ್ಶನ ಕೊಟ್ಟನೆಂದು ಮೋಸೆಸ್ಸನು ಹೇಳಿದನು. ನಿರಾಕಾರ ಪರಬ್ರಹ್ಮನ ಮೊಟ್ಟಮೊದಲನೆಯ ವ್ಯಕ್ತತೆಯಾದ 'ಇದ್ದೇನೆ' ಎಂಬ ಜ್ಞಾನರೂಪದ ಈಶ್ವರನೇ ಮೋಸೆಸ್ಸನಿಗೆ ದರ್ಶನವಿತ್ತಿರಬೇಕು. ಅತ್ಯಂತ ಸುಸಂಸ್ಕೃತವಾದ ಉಪನಿಷತ್ತಿನಲ್ಲಿ ಹೇಳಿರುವ 'ಸನ್ಮಾತ್ರ'ವಾದ ದೇವರ ರೂಪವು ಮಾನವನ ಕಲ್ಪನೆಗೇ ಮೀರಿರುವಾಗ ಮೂರೂವರೆ ಸಾವಿರ ವರ್ಷಗಳ ಹಿಂದೆ ಅಸಂಸ್ಕೃತ ಜನಾಂಗದಲ್ಲಿ ಹುಟ್ಟಿದ್ದ ಮೋಸೆಸ್ಸಿನ ಕಲ್ಪನೆಗಂತೂ ಅದು ನಿಲುಕುವುದು ಪೂರ್ಣ ಅಸಾಧ್ಯವೇ ಸರಿ.

ಅವನು ಕಲ್ಪನೆಮಾಡಿ ಹೇಳಿದ್ದಾಗಿದ್ದರೆ, ಅವನು ಇದೊಂದು ನಿಜವನ್ನು ಬಿಟ್ಟು ದೇವರ ವಿಷಯದಲ್ಲಿ ಬೇರೆ ಏನನ್ನಾದರೂ ಹೇಳುವುದು ಅತಿ ಸುಲಭವಾಗಿತ್ತು. ಆದರೆ ಮನುಮಹರ್ಷಿಗಳೆಲ್ಲಾ ಯುಗಾಂತರಗಳು ತಪಸ್ಸುಮಾಡಿ ಯಾವ ಸತ್ಯವನ್ನು ತಿಳಿದು ಕೃತಕೃತ್ಯರಾದರೋ, ಕರುಣೆಯಿಂದ ಯಾವುದನ್ನು ಲೋಕಕ್ಕೆ ಸಾರಿದರೋ ಆ ಸರಳ ಸತ್ಯವನ್ನೇ ಮೋಸೆಸ್ಸನು ಇದ್ದುದಿದ್ದಂತೆ ಹೇಳಿರುವುದರಿಂದ ಅದು ಅವನ ಕಲ್ಪನೆಯಲ್ಲ; ಪ್ರತ್ಯಕ್ಷ ಈಶ್ವರವಾಣಿಯೇ ಅದಾಗಿದೆಯೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ.

ಇದರಿಂದ ಮಾನವನ ಪ್ರಜ್ಞಾವೈಭವಕ್ಕೆ ಹೊರತಾಗಿ ಸೃಷ್ಟಿಯಲ್ಲಿ ಲೋಕದ ವಿಚಿತ್ರ ವ್ಯಾಪಾರಗಳಿಗೆ ಕಾರಣವಾಗಿ ಬೇರೆ ಯಾವ ಪ್ರಜ್ಞಾ-ವಿಶೇಷವೂ ಇಲ್ಲವೆನ್ನುವುದೂ ಸರ್ವವೂ ಪ್ರಾಕೃತಿಕವೆನ್ನುವುದೂ ಯೋಗಿಗಳ ಹಾಗೂ ಭಕ್ತರ ಎಲ್ಲಾ ಬಗೆಯ ಅಲೌಕಿಕವಾದ ದಿವ್ಯಾನುಭವಗಳಿಗೂ ಅವರವರ ಭಾವನಾಬಲ-ಸಾಧನಬಲ-ಸಿದ್ಧಿವೈಚಿತ್ರ್ಯಗಳೇ ಕಾರಣವೆಂಬುದೂ ಪೂರಾ ನಿಜವಲ್ಲ. ಏಕೆಂದರೆ, ನಿರ್ಗುಣ ನಿರಾಕಾರವಾದ ಪರಬ್ರಹ್ಮವು ಸರ್ವಸಮವೂ ಅಕರ್ಮವೂ ಆಗಿದ್ದರೂ "**ಕರ್ತುಮಕರ್ತುಮನ್ಯಥಾಕರ್ತುಂ**" ತನ್ನ ಇಚ್ಛೆಯಂತೆ ಏನನ್ನಾದರೂ ಮಾಡುವುದಕ್ಕೂ ಮಾಡದೇ ಸುಮ್ಮನಿರುವುದಕ್ಕೂ ಮಾಡಿದ್ದನ್ನೆಲ್ಲಾ ನಾಶಮಾಡುವುದಕ್ಕೂ ಈಗಿರುವುದಕ್ಕಿಂತಲೂ ಅಥವಾ ನಿರೀಕ್ಷಣೆಗಿಂತಲೂ ಬೇರೆ ಬಗೆಯಾಗಿ ಮಾಡುವುದಕ್ಕೂ ಅದ್ಭುತ ಸಾಮರ್ಥ್ಯವುಳ್ಳ ಈಶ್ವರನು ಜಗತ್ತಿನಲ್ಲಿ — ಶ್ರೀ ರಾಮಕೃಷ್ಣ ಪರಮಹಂಸರು ಹೇಳುವಂತೆ—" ಸೂಜಿಯ ಕಣ್ಣಿನಲ್ಲಿ ಆನೆಯನ್ನಾದರೂ ತೂರಿಸಬಲ್ಲನು; ಅದರಲ್ಲಿ ಅನೇಕ ಕೋಟಿ ಬ್ರಹ್ಮಾಂಡಗಳನ್ನಾದರೂ ತೋರಿಸಬಲ್ಲನು " ಎಂದು ಒಪ್ಪಬೇಕಾಗುವುದು.

ಹೊರಗಿರುವ ಆದಿಭೌತಿಕವನ್ನೂ ಒಳಗಿರುವ ಆಧ್ಯಾತ್ಮಿಕವನ್ನೂ ಸೃಷ್ಟಿಸಿ ಸಮಸ್ತ ಲೋಕಗಳ ವಿಚಿತ್ರ ವಿಲಾಸಗಳನ್ನೂ ನಡೆಸುತ್ತಿರುವುದೇ ಆಧಿದೈವಿಕವಾಗಿದೆ. ದೈವವು ವಿಶ್ವದಲ್ಲಿ ಓತಪ್ರೋತವಾಗಿ ವಿಲಾಸಮಾಡುತ್ತಿದೆ. ಸರ್ವಸಮವೂ ನಿಷ್ಪಕ್ಷಪಾತಿಯೂ ಆದ ದೈವವು ಜಗತ್ತಿನಲ್ಲಿ ಜೀವರ ಕರ್ಮಾನುಸಾರವಾಗಿಯೆ ಫಲ-ಪರಿಣಾಮಗಳನ್ನು ನೀಡುವುದೆಂಬ ವಾದವು ಮಾನವನ

ವಿಚಾರಶಕ್ತಿಗೂ ರೀತಿಗೂ ನ್ಯಾಯವಾಗಿಯೇ ಕಂಡರೂ ಯಾವ ಯಾವ ಜೀವರ ಯಾವ ಯಾವ ಜನ್ಮಗಳ ಕರ್ಮಗಳು ಏನೇನಿವೆಯೆಂಬುದು ಯಾರಿಗೂ ಕಾಣದೇ ತಿಳಿಯದೇ ಇರುವುದರಿಂದಲೂ ಒಂದು ವೇಳೆ ತಿಳಿಯಬಲ್ಲ ಮಹಾತ್ಮರಾದರೂ ಯಾವನ ಹಿಂದಿನ ಕರ್ಮಗಳನ್ನು ಪ್ರತ್ಯಕ್ಷವಾಗಿ ಅವನಿಗೆ ತೋರಿಸಲು ಸಾಧ್ಯವಿಲ್ಲವಾದುದರಿಂದಲೂ ಪ್ರಚಂಡವಾದ ದೈವವು ಎಷ್ಟೋ ಸಂದರ್ಭಗಳಲ್ಲಿ ಸ್ವತಂತ್ರವಾಗಿಯೂ ಸ್ವೇಚ್ಛೆಯಾಗಿಯೂ ಮಹೋನ್ನತ್ತ ವಾಗಿಯೂ ವ್ಯಾಪಾರಮಾಡುವಂತೆ ತೋರುತ್ತದೆ. ಶಾಸ್ತ್ರಗಳಲ್ಲಿಯೂ ಹಲವು ಕಡೆ ಈ ಅಭಿಪ್ರಾಯಗಳೂ ಇದಕ್ಕೆ ದೃಷ್ಟಾಂತಗಳೂ ಹೇರಳವಾಗಿ ದೊರೆಯು ತ್ತವೆ. ಇದರ ಸತ್ಯತೆಯು ಮಾನವನ ಬುದ್ಧಿಶಕ್ತಿಗೆ ಸಿಲುಕದ ಸಿದ್ಧಾಂತವಾದ ಗಾಢತಮ ಸಮಸ್ಯೆಯಾಗಿದೆ. ಭಗವಂತನೇ ಗೀತೆಯಲ್ಲಿ **“ಗಹನಾ ಕರ್ಮಣೋ ಗತಿಃ”** ‘ಕರ್ಮಗತಿಯು ಬಹಳ ರಹಸ್ಯವಾದುದರಿಂದ ತಿಳಿಯಲಸಾಧ್ಯವೆಂದಿದ್ದಾನೆ. ಇರಲಿ.

ಉಪಾಸನೆಯು ಪುರುಷತಂತ್ರವಾದರೂ ಜ್ಞಾನವು ವಸ್ತುತಂತ್ರವೆಂದೂ ದೈವವು (ಅಥವಾ ದೇವನು) ಮಾತ್ರ ಸರ್ವತಂತ್ರ ಸ್ವತಂತ್ರವೆಂದೂ ಮೇಲಿನ ವಿಚಾರಗಳ ಫಲಿತಾರ್ಥವಾಗಿದೆ. ಪುರುಷನು ಅಥವಾ ಭಕ್ತನು ತನ್ನ ಇಚ್ಛೆ ಬಂದಂತೆ ಪರಮಾತ್ಮನ ಮೂರ್ತಿಯನ್ನು ಕಲ್ಪಿಸಿಕೊಂಡು ಉಪಾಸನೆ ಮಾಡ ಬಹುದು. ಉಪಾಸನೆಯು ಅವನ ಅಧೀನವಾದುದು ಅಥವಾ ಆ ಪುರುಷನ ತಂತ್ರಕ್ಕೊಳಗಾದುದು. ಜ್ಞಾನವು ಮಾತ್ರ ಹಾಗಲ್ಲ. ಅದು ಪುರುಷನಿಗಧೀನ ವಾಗದೇ ವಸ್ತುವಿಗಧೀನವಾದುದು. ಸೂರ್ಯನನ್ನು ನೋಡುವವನಿಗೆ ಅದು ಚಂದ್ರನೆಂಬ ಜ್ಞಾನವುಂಟಾಗುವುದಿಲ್ಲ. ಬಹುಳ ತ್ರಯೋದಶಿಯ ಬೆಳಿಗ್ಗೆ ಉದಯವಾಗುತ್ತಿರುವ ಸೂರ್ಯನನ್ನು ನೋಡಿ ಚಂದ್ರನೆಂದು ಒಂದು ವೇಳೆ ಭಾವಿಸಿದರೆ ಆ ತಿಳಿವು ಸ್ವಲ್ಪ ಹೊತ್ತಿನ ಮೇಲೆ, ಅಥವಾ ಸರಿಯಾದ ವಿಚಾರ ದಿಂದ ಬಾಧಿತವಾಗುವುದರಿಂದ ಅದು ಭ್ರಮೆಯೇ ಹೊರತು (ಪ್ರಮೆಯಾಗ ಲಾರದು) ಜ್ಞಾನವಾಗಲಾರದು. ಒಂದು ವೇಳೆ ಪುರುಷನ ಇಚ್ಛೆಗೆ ವಿರೋಧ ವಾದರೂ ಸೂರ್ಯನು ಸೂರ್ಯನೆಂಬ ಜ್ಞಾನವನ್ನೇ ಹುಟ್ಟಿಸುವುದರಿಂದ ಜ್ಞಾನವು ವಸ್ತುತಂತ್ರವಾದುದು. ದೈವವು ಅಥವಾ ಭಗವಂತನು ಉಪಾಸನೆ ಯಲ್ಲಿರುವಂತೆ ಭಾವನಾಧೀನನೂ (ಅನುಮಾನಗಮ್ಯನೂ) ಅಲ್ಲ; ಇಂದ್ರಿಯ

ಗಳ ವ್ಯವಹಾರದ ಜ್ಞಾನದಲ್ಲಿರುವಂತೆ ಪ್ರತ್ಯಕ್ಷಗೋಚರನಾಗಿ ತನ್ನ ಯಥಾರ್ಥ ಜ್ಞಾನವನ್ನು ಹುಟ್ಟಿಸತಕ್ಕವನೂ ಅಲ್ಲ; ಮನಸ್ಸಿಗೂ ಇಂದ್ರಿಯಗಳಿಗೂ ಸಮಸ್ತಕ್ಕೂ ಹಿಂದಿದ್ದು ಪ್ರೇರಿಸುವವನಾದುದರಿಂದ ಯಾವ ತಂತ್ರಕ್ಕೂ ಒಳಗಾಗದೇ ಸ್ವಸ್ವಭಾವದಲ್ಲಿರತಕ್ಕ ಸರ್ವತಂತ್ರ ಸ್ವತಂತ್ರನು. ಜ್ಞಾತೃ-ಜ್ಞಾನ-ಜ್ಞೇಯ (ತಿಳಿಯುವವನು-ತಿಳಿವು-ತಿಳಿಯಲ್ಪಡುವ ವಿಷಯ) ಇತ್ಯಾದಿ ತ್ರಿಪುಟಿಗಳಲ್ಲಿ ಪ್ರತಿಯೊಂದೂ ಇನ್ನೊಂದರ ತಂತ್ರದಲ್ಲಿ ಸಿಕ್ಕಿ ಸಾಪೇಕ್ಷಿಯಾಗಿರುವುದರಿಂದ ಒಂದು ಕಳೆದರೆ ಇನ್ನೊಂದೂ ಅಳಿದುಬಿಡುವುದು. ನಿದ್ರೆಯಲ್ಲಿರುವಂತೆ ಜ್ಞೇಯವಿಷಯವಿಲ್ಲವಾದರೆ ಅದರ ಜ್ಞಾನವೂ ಇಲ್ಲ, ಜ್ಞಾತೃವೂ ಇಲ್ಲ. ಮೂರ್ಛೆಯಲ್ಲಿರುವಂತೆ ಜ್ಞಾನವಿಲ್ಲವಾದರೆ ಜ್ಞಾನವೂ ಇಲ್ಲ, ಜ್ಞೇಯವೂ ಇಲ್ಲ. ಸಮಾಧಿಯಲ್ಲಿರುವಂತೆ ಜ್ಞಾತೃವೂ ಇಲ್ಲವಾದರೆ ವಿಷಯವೂ ಇಲ್ಲ, ವಿಷಯ ಜ್ಞಾನವೂ ಇಲ್ಲ. ಆತ್ಮನು ಈ ಮೂರರಕ್ಕೂ ಮೀರಿ ಅಖಂಡನೂ ಸ್ವತಂತ್ರನೂ ಅನ್ವಯನೂ ಕೇವಲನೂ ಸಚ್ಚಿದಾನಂದ ರೂಪನೂ ಆಗಿರುವವನು. ಈ ಆತ್ಮನಿಗೆ ಜ್ಞೇಯಕ್ಕಿಂತಲೂ ಜ್ಞಾನವೂ ಜ್ಞಾನಕ್ಕಿಂತಲೂ ಜ್ಞಾತೃವೂ ಸಮೀಪವಾದುದು. ಸಮಸ್ತ ಸೃಷ್ಟಿಯೂ ಈ ಮೂರರೊಳಗೇ ಸೇರಿರುವುದರಿಂದ ವಿಶ್ವಬೀಜನಾದ ಜ್ಞಾತೃವು ತನ್ನ ಅಧಿಷ್ಠಾನದಲ್ಲಿ ಮುಳುಗಿದೊಡನೇ ಆತ್ಮನು ಎರಡನೆಯದಿಲ್ಲದೆ ತಾನೇತಾನಾಗಿ ಬೆಳಗುತ್ತಾನೆ.

ಅಖಂಡನೂ, ಸ್ವತಂತ್ರನೂ, ಸರ್ವಾತೀತನೂ ಆದ ಈ ಆತ್ಮನನ್ನು ತೋರಿಸಬಲ್ಲವನೇ ಬ್ರಹ್ಮವನ್ನು ತಿಳಿದವರಲ್ಲಿ ಶ್ರೇಷ್ಠನಾದ ಸದ್ಗುರುವು. ಎಲ್ಲೆಲ್ಲಿಯೂ ತುಂಬಿರುವ ಸೂರ್ಯಪ್ರಕಾಶವೇ ಮನೆಯೊಳಗೂ ತುಂಬಿರುವಂತೆ ವಿಶ್ವದ ಒಳಹೊರಗೆಲ್ಲಾ ತುಂಬಿರುವ ಪರಮಾತ್ಮನೇ ದೇಹದೊಳಗೂ ತುಂಬಿ ಆತ್ಮನೆನ್ನಿಸಿಕೊಂಡಿರುವುದರಿಂದ ಆತ್ಮ-ಪರಮಾತ್ಮರು ಒಂದೇ ಆಗಿದ್ದಾರೆ. ಆದ್ದರಿಂದ,

**ಅಖಂಡ ಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಂ |**
**ತತ್ಪದಂ ದರ್ಶಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ||**

(ಗುರುಗೀತಾ)

" ತುದಿಮೊದಲಿಲ್ಲದ ಹುಟ್ಟುಸಾವುಗಳೆಂಬ ಚಕ್ರಾಕಾರವಾದ ಸಂಸಾರದಲ್ಲಿ ಸುತ್ತುತ್ತಿರುವ ಚರಾಚರ ಜಗತ್ತು ಏತರಿಂದ ತುಂಬಲ್ಪಟ್ಟಿದೆಯೋ ಆ ಪರ

ಮಾತ್ಮ ಚೈತನ್ಯವು ಯಾರಿಂದ ತಿಳಿಸಲ್ಪಡುವುದೋ (ಅವನೇ ಸದ್ಗುರುವು) ಅಂಥ ಶ್ರೀ ಗುರುವಿಗೆ ನಮಸ್ಕಾರ. ”

**ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।**
**ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರುವೇ ನಮಃ ॥**

“ ಪರಮಾತ್ಮನನ್ನು ತಿಳಿಯದಿರುವುದೆಂಬ ಕತ್ತಲೆಯಿಂದ ಕುರುಡಾದ ಕಣ್ಣುಗಳು ಪರಮಾತ್ಮನ ತಿಳಿವೆಂಬ ಅಂಜನರೂಪ ಶಲಾಕೆಯಿಂದ ಯಾರಿಂದ ತೆರೆಸಲ್ಪಡುವುದೋ (ಅಂಥವನೇ ಸದ್ಗುರು) ಅಂಥ ಶ್ರೀ ಗುರುವಿಗೆ ನಮಸ್ಕಾರ. ”

**ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ ।**
**ದ್ವಂದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿ ಲಕ್ಷ್ಯಂ ॥**
**ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಂ ।**
**ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತನ್ನಮಾಮಿ ॥**

“ ಬ್ರಹ್ಮಾನಂದವುಳ್ಳವನೂ ಪರಮಸುಖವನ್ನು ಕೊಡತಕ್ಕವನೂ ತಾನೇ ತಾನಾದ ಜ್ಞಾನಮೂರ್ತಿಯೂ ಪುಣ್ಯ-ಪಾಪ, ಸುಖ-ದುಃಖ ಮೊದಲಾದ ಜೋಡಿಗಳನ್ನು ಮೀರಿದವನೂ ಆಕಾಶದಂತೆ (ನಿಸ್ಸಂಗನೂ ನಿರ್ಲಿಪ್ತನೂ) ಯಾವುದನ್ನೂ ಅಂಟಿಸಿಕೊಳ್ಳದೆ ಎಲ್ಲ ವಸ್ತುಗಳಲ್ಲಿಯೂ ತುಂಬಿರುವವನೂ ‘ ನೀನೇ ಆ ಬ್ರಹ್ಮನಾಗಿರುತ್ತಿ ’ ಮೊದಲಾದ ವೇದ-ಮಹಾವಾಕ್ಯಗಳಿಗೆ ಗುರಿಯಾದ ಸ್ವರೂಪವುಳ್ಳವನೂ ಎರಡಿಲ್ಲದ ಒಬ್ಬನೇ ಆದವನೂ ನಿತ್ಯನೂ ನಿರ್ಮಲನೂ ನಿಶ್ಚಲನೂ ಎಲ್ಲರ ಬುದ್ಧಿವೃತ್ತಿಗಳನ್ನೂ ಅರಿಯತಕ್ಕವನೂ ಮನೋಭಾವಗಳನ್ನು ಮೀರಿದವನೂ ಸತ್ತ್ವರಜಸ್ತಮೋಗುಣಗಳಿಲ್ಲದವನೂ ಆಗಿರುವ ಆ ಸದ್ಗುರುವಿಗೆ ನಮಸ್ಕಾರ. ”

ನಿರ್ಗುಣಬ್ರಹ್ಮದ ವ್ಯಕ್ತರೂಪ ಸಗುಣಬ್ರಹ್ಮನಾದ ಈಶ್ವರನೇ ಗುರುವು; ಗುರುವೇ ಈಶ್ವರನು. **“ ಅಸ್ಮಿ – ಅಹಮಸ್ಮಿ – ಅಹಂ ಬ್ರಹ್ಮಾಸ್ಮಿ ; ತತ್ತ್ವಮಸಿ ”** “ ಇದ್ದೇನೆ–ನಾನಿದ್ದೇನೆ–ನಾನು ಬ್ರಹ್ಮನಾಗಿದ್ದೇನೆ; ಅದೇ ನೀನಾಗಿದ್ದಿ ” ಎಂದು ಅಧಿಕಾರಿಗೆ ಉಪದೇಶಮಾಡತಕ್ಕವನೇ ಗುರು, ಅವನೇ ಈಶ್ವರ.

ಮುಮುಕ್ಷುವಾದ ಭಕ್ತನು ಪರಮಾರ್ಥಸಾಧನೆಗಾಗಿ ತತ್ತ್ವಸಾಕ್ಷಾತ್ಕಾರ ಪಡೆದು ಸ್ಥಿತಪ್ರಜ್ಞನಾಗಿರುವ ಸದ್ಗುರುವನ್ನೇ ಹೊಂದಬೇಕು. "ಶಾಂತರೂ ಮಹಾತ್ಮರೂ ಆದ ಸತ್ಪುರುಷರು ತಮ್ಮ ಪವಿತ್ರಪ್ರೇಮದ ಪರಿಮಳವನ್ನೂ ದಿವ್ಯಜ್ಞಾನದ ಸೌಂದರ್ಯವನ್ನೂ ಆನಂದ ಮಕರಂದವನ್ನೂ ಹೊರಸೂಸುತ್ತಾ ಮನೋಹರವಾದ ವಸಂತಮಾಸದಂತೆ ಲೋಕಹಿತವನ್ನು ಸಾಧಿಸುತ್ತಾರೆ; ಭಯಂಕರವಾದ ಭವಸಾಗರವನ್ನು ತಾವು ದಾಟಿದವರಾಗಿ ಅಕಾರಣವಾದ ಪ್ರೇಮದಿಂದ ಮಿಕ್ಕ ಭಕ್ತಜನರನ್ನೂ ತಾರಿಸುತ್ತಾರೆ" ಎಂದು ಶ್ರೀ ಶಂಕರರು ಹೇಳಿದ್ದಾರೆ. ಗೀತೆಯಲ್ಲಿ ಭಗವಂತನು,

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥**

"ಸಾಷ್ಟಾಂಗ ನಮಸ್ಕಾರದಿಂದಲೂ ಸಮಯವರಿತು ಶ್ರದ್ಧಾಭಕ್ತಿಗಳಿಂದ ಮಾಡುವ ಸೇವೆಯಿಂದಲೂ 'ಬಂಧವೆಂದರೇನು? ಮೋಕ್ಷವೆಂದರೇನು? ವಿದ್ಯೆ ಯಾವುದು? ಅವಿದ್ಯೆ ಯಾವುದು? ಆತ್ಮನ ಸ್ವರೂಪವೇನು? ಪರಮಾತ್ಮನ ಸ್ವರೂಪವೇನು? ಅವರು ಒಂದೇ ಎನ್ನುವುದು ಹೇಗೆ?' ಈ ಮುಂತಾದ ವಿವೇಕ ಪ್ರಶ್ನೆಯಿಂದಲೂ ಆ ಪರಮಾತ್ಮನನ್ನು ತಿಳಿದುಕೋ! ಶಾಸ್ತ್ರಜನ್ಯವಾದ ಜ್ಞಾನಸಂಪತ್ತುಳ್ಳವರೂ ಸಾಕ್ಷಾತ್ಕಾರಜನ್ಯವಾದ ತತ್ತ್ವಾನುಭವವುಳ್ಳವರೂ ಆದ ಸದ್ಗುರುಗಳು ಪ್ರಸನ್ನರಾಗಿ ಶಮದಮಾದಿ ಸಾಧನಸಂಪನ್ನನಾದ ನಿನಗೆ ಆತ್ಮ-ಪರಮಾತ್ಮರು ಒಂದೇ ಎಂಬ ಜ್ಞಾನವನ್ನು ಉಪದೇಶಮಾಡುತ್ತಾರೆ" ಎಂದು ಹೇಳಿದ್ದಾನೆ.

ಸ್ಥಾನ, ಲಿಂಗ, ಭಾವ, ಆತ್ಮ ಎಂದು ಗುರುಸೇವೆಯು ನಾಲ್ಕು ಬಗೆಯಾಗಿದೆ. ಮಹಾತ್ಮರಾದ ಗುರುಗಳ ಆಶ್ರಮವನ್ನು ತನ್ನ ಮನೆಯೆಂದು ತಿಳಿದು ಹೂವು, ಹಣ್ಣಿನ ಗಿಡ. ಬಳ್ಳಿಗಳಿಂದ ಶೋಭಿಸುವ ಉಪವನದಿಂದ ಶುಚಿಯಾಗಿಯೂ ಸುಂದರವಾಗಿಯೂ ಇರುವಂತೆ ಯಾವಾಗಲೂ ವ್ಯವಸ್ಥೆ ಮಾಡುವುದು. ಆಶ್ರಮದಲ್ಲಿ ಗೋಶಾಲೆ ಹೊಲ-ಗದ್ದೆಗಳನ್ನು ಬೆಳೆಸುವುದು, ಗೋಪಾಲನೆ ಮಾಡುವುದೂ ಮುಂತಾದುವು ಸ್ಥಾನಸೇವೆ. ಇದರಿಂದ ಪಾಪ ಸಂಸ್ಕಾರಗಳು ಕ್ಷಯವಾಗಿ ಗುರುಭಕ್ತಿಯು ಬೆಳೆಯುತ್ತದೆ. ಇದು ದಾಸ್ಯಭಕ್ತಿ

ಗುರುವಿನ ದೇಹವನ್ನೇ ತನ್ನ ದೇಹವೆಂದು ತಿಳಿದು ಗುರುವಿನ ಅಭಿರುಚಿಗಳನ್ನೂ ಅಭಿಪ್ರಾಯಗಳನ್ನೂ ಇಂಗಿತಗಳನ್ನೂ ಸೂಕ್ಷ್ಮವಾಗಿ ಅರಿತು ಅವನಿಗೆ ಪ್ರಿಯವೂ ಹಿತವೂ ಸುಖವೂ ಸಂತೋಷವೂ ಆಗುವಂತೆ ಕಾಲಕಾಲಕ್ಕೆ ಬೇಕಾದ ಶೌಚ, ಸ್ನಾನ, ಅಭ್ಯಂಗನ, ಆಹ್ನಿಕ, ಭೋಜನ, ಶಯನ, ಪಾದ ಸೇವಾ, ಸಂವಾದ, ಶ್ರವಣ ಮೊದಲಾದ ಸೇವೆಗಳನ್ನು ನಡೆಸುವುದೇ ಅಂಗ ಸೇವಾ. ತನ್ನ ಮೈಗೆ ತನ್ನ ಕೈ ಸ್ನೇಹದಿಂದ ನೆರವಾಗುವಂತೆ ಗುರುವಿಗೆ ಅಂಗ ದಂತೆ ಎಡೆಬಿಡದೆ ಎಚ್ಚರದಿಂದ ಶುಶ್ರೂಷೆಮಾಡುವುದೇ ಅಂಗಸೇವೆ. ಇದರಿಂದ ಗುರುವಿನಲ್ಲಿ ಶ್ರವಣಭಕ್ತಿಯೂ, ಅರ್ಚನೆಯೂ, ವಂದನೆಯೂ, ಪಾದಸೇವೆಯೂ ದಾಸ್ಯಭಕ್ತಿಯೂ ಅಭ್ಯಾಸವಾಗಿ ಚಿತ್ತಶುದ್ಧಿಯುಂಟಾಗುವುದು.

ಬಹುಕಾಲ ಸ್ಥಾನಸೇವೆಯನ್ನು ಮಾಡಿದ ನಂತರ ಅಂಗಸೇವೆಗೂ, ಅಂಗ ಸೇವೆಯನ್ನು ಮಾಡಿದ ನಂತರ ಭಾವಸೇವೆಗೂ, ಅದರಿಂದ ಆತ್ಮಸೇವೆಗೂ ಯೋಗ್ಯತೆಯುಂಟಾಗುತ್ತದೆ. ಈ ಸೇವೆಗಳಲ್ಲಿ ಮಂದಾಧಿಕಾರಿಗಳಿಗೆ ಬೇಕಾಗು ವಷ್ಟು ಕಾಲವು ಮಧ್ಯಮಾಧಿಕಾರಿಗಳಿಗೂ, ಮಧ್ಯಮಾಧಿಕಾರಿಗಳಿಗೆ ಬೇಕಾಗು ವಷ್ಟು ಸಮಯವು ತೀವ್ರಾಧಿಕಾರಿಗಳಿಗೂ ಅವಶ್ಯವಾಗುವುದಿಲ್ಲ. ತೀವ್ರಾಧಿ ಕಾರಿಯು ಒಂದೇ ಸಮಯದಲ್ಲಿ ಎಲ್ಲಾ ಬಗೆಯ ಸೇವೆಗಳನ್ನೂ ನಡೆಸಬಲ್ಲನು.

ಭಾವಸೇವೆಯೆಂದರೆ ಗುರುವೇ ತಾಯಿಯೆಂದೂ, ಗುರುವೇ ತಂದೆ ಯೆಂದೂ, ಗುರುವೇ ಬಂಧು, ಮಿತ್ರ ಮೊದಲಾದ ಎಲ್ಲಾ ಪ್ರಿಯಸಂಬಂಧ ವೆಂದೂ ಪ್ರೇಮದಿಂದ ಭಾವಿಸುವುದು. ಪ್ರಪಂಚದಲ್ಲಿ ಇನ್ನೊಂದಾವುದನ್ನೂ ಪ್ರೇಮಿಸದೆ, ತನ್ನ ಪೂರ್ಣ ಪ್ರೇಮಭಾವವನ್ನು ಗುರುವಿನಲ್ಲಿಯೇ ಇಡಬೇಕು- ಗುರುವನ್ನು ಅನನ್ಯಭಾವದಿಂದ ಪ್ರೇಮಿಸಬೇಕು. ಸ್ಥಾನ, ಅಂಗ ಇವುಗಳ ನಿಷ್ಠಾಪೂರ್ವಕವಾದ ಸೇವಾಫಲವಾಗಿ ಗುರುಮೂರ್ತಿಯ ಭಾವವು ಹೃದಯ ದಲ್ಲಿ ಖಚಿತವಾಗಿ ನೆಲೆಸಬೇಕು. ಕಣ್ಣುಮುಚ್ಚಿದರೂ ಗುರುಮೂರ್ತಿ, ಕಣ್ಣು ಬಿಟ್ಟರೂ ಗುರುಮೂರ್ತಿ. ಯಾವ ವಸ್ತುವನ್ನು ನೋಡಿದರೂ ಗುರುಮೂರ್ತಿಯೇ ಆಗಿ ಕಾಣಬೇಕು. ಎಲ್ಲರನ್ನೂ ಗುರುಸ್ವರೂಪವೆಂದೇ ಭಾವಿಸಿ, ಪ್ರೇಮಿಸಿ, ಸೇವಿಸಬೇಕು. ಗುರುವಿನ ಸಗುಣರೂಪವು ಭಾವಬಲದಿಂದ ವಿಶ್ವವನ್ನೆಲ್ಲಾ ತುಂಬಿ ಬೆಳಗಬೇಕು. ತನ್ನ ದೇಹವೂ ಆ ರೂಪವಾಗಿಯೇ ಕಾಣಬೇಕು.

ಮನೋಭಾವವು ಅಖಂಡವಾಗಿ ಗುರುಮೂರ್ತಿಮಯವಾಗಬೇಕು. ಈ ಸ್ಥಿತಿಯಲ್ಲಿ ಬಸಿರು ಬೆಳೆಯುತ್ತಿರುವ ಗರ್ಭಿಣಿ ಸ್ತ್ರೀಗೆ ಹೇಗೋ ಹಾಗೆ ಬಾಹ್ಯ ವ್ಯಾಪಾರಗಳಿಂದ ಉಪರತಿಯು ಬೆಳೆಯುತ್ತದೆ. ಚಿತ್ತವು ಶುದ್ಧವೂ ಸುಸ್ಥಿರವೂ ತನ್ಮಯವೂ ಆಗುವುದರಿಂದ ಗುರುವಿನಲ್ಲಿರುವ ಉದಾತ್ತ ಭಾವಗಳೂ ಬ್ರಹ್ಮ ಭಾವವೂ ಅವಗತವಾಗುತ್ತವೆ.

ಯಾವ ದೇವತಾಮೂರ್ತಿಯನ್ನಾಗಲೀ ಗುರುಮೂರ್ತಿಯನ್ನಾಗಲೀ ಮೂರು ಕಾಲದಲ್ಲಿಯೂ ಸಂಧ್ಯಾಸಮಯಗಳಲ್ಲಿ ಎರಡೆರಡು ಗಂಟೆಗಳಾದರೂ ಏಕಾಸನದಲ್ಲಿ ಕುಳಿತು ಧ್ಯಾನಿಸಬೇಕು. ಗುರೂಪದಿಷ್ಟವಾದ ಮಂತ್ರವನ್ನು ತನ್ನ ಕಿವಿಗೆ ಮಾತ್ರ ಕೇಳುವಂತೆ ಅಥವಾ ಮನಸ್ಸಿನಲ್ಲಿಯೇ ಜಪ ಮಾಡುತ್ತಾ ಕಣ್ಣುಗಳನ್ನು ಮುಚ್ಚಿಕೊಂಡು ಲಕ್ಷ್ಯವನ್ನು ಭ್ರೂಮಧ್ಯದಲ್ಲಿ ಇರಿಸಿ, ಆ ಆಜ್ಞಾ ಚಕ್ರದಲ್ಲಿ ಕಾಣುವ ಪ್ರಭಾಮಂಡಲದಲ್ಲಿ ಇಷ್ಟಮೂರ್ತಿಯನ್ನು ಭಾವನಾಬಲದಿಂದ ನಿಲ್ಲಿಸಿಕೊಳ್ಳಬೇಕು. ಬಳಿಕ ವೃತ್ತಿಯು ತುಂಡಾಗದೇ ತೈಲಧಾರೆಯಂತೆ ಹರಿದು ಮೂರ್ತಿಯ ರೂಪದಲ್ಲಿ ತನ್ಮಯವಾಗಬೇಕು. ತೇಜೋಬಿಂದುವಿನಲ್ಲಿ ಮೂರ್ತಿಯು ಹೆಚ್ಚು ಹೆಚ್ಚು ಕಾಲ ನಿಲ್ಲುತ್ತಾ ಬಂದಂತೆ ಅನಾಹತನಾದವೂ ಬಗೆಬಗೆಯಿಂದ ಕೇಳುತ್ತಾ ಬರುವುದು. ಆದರೆ ಭಕ್ತಿಯೋಗದಲ್ಲಿ ಪ್ರೇಮವು ಪೂರ್ಣವಾಗಿ ಮೂರ್ತಿಯಲ್ಲಿಯೇ ನೆಲೆಸಿರುವುದರಿಂದ ಬಿಂದುನಾದಗಳು ಅಲಕ್ಷ್ಯವಾಗಿ ಮೂರ್ತಿಯೊಂದೇ ಸ್ಥಿರವಾಗಿ ಭಾವದಲ್ಲಿ ಬೆಳಗುತ್ತದೆ. ಆದರೂ ಬಿಂದು, ನಾದ, ಕಳೆಗಳ ಅನುಭವವೂ ಮೂರ್ತಿಧ್ಯಾನದಲ್ಲಿ ಉಂಟಾಗುತ್ತವೆ. ತನ್ನ ಭಾವದಲ್ಲಿ ಇಷ್ಟಮೂರ್ತಿಯು ಸ್ಪಷ್ಟವಾಗಿಯೂ ಉಜ್ಜ್ವಲವಾಗಿಯೂ ಮೂಡಿ ಅಚಲವಾಗಿ ನಿಲ್ಲುವುದಕ್ಕಿಂತಲೂ ಹೆಚ್ಚಿನ ಲಾಭವು ಭಕ್ತನಿಗೆ ಮೂರು ಲೋಕಗಳಲ್ಲಿಯೇ ಮತ್ತೊಂದಿಲ್ಲ. ಇಷ್ಟಾದರೆ ಸಾಧನವೂ ಬಹಳಮಟ್ಟಿಗೆ ಸಫಲವಾದಂತೆ ಅವನಿಗೆ ವಿಲಕ್ಷಣ ಆನಂದವಾಗುತ್ತದೆ. ಮೂರ್ತಿಧ್ಯಾನವು ಬೆಳೆದಂತೆ ಸ್ಥೂಲ ದೇಹದ ಭಾವವು ಅಳಿಯುತ್ತಾ ಬಂದು ಮೂರೂಮುಕ್ಕಾಲು ಘಳಿಗೆಗಳ (ಒಂದೂವರೆ ಘಂಟೆ) ಕಾಲ ಮೂರ್ತಿಯು ಅಚಲವಾಗಿ ನಿಂತರೆ ಸಮಾಧಿಸ್ಥಿತಿಯುಂಟಾಗಿ ಪರವಶವಾಗುತ್ತದೆ. ಈ ಸಾಧನಾನುಭವಗಳೆಲ್ಲಾ ರಾಜಯೋಗದ ಧಾರಣಾ ಧ್ಯಾನ ಸಮಾಧಿಗಳೇ ಆಗಿವೆ. ರಾಜಯೋಗದಲ್ಲಿ ಸಂಯಮವು ಪ್ರಧಾನವಾದರೆ ಭಕ್ತಿಯೋಗದಲ್ಲಿ ಪ್ರೇಮವು ಪ್ರಧಾನವು. ಶ್ರವಣ

ಕೀರ್ತನಾದಿ ಭಕ್ತಿಯು ನವವಿಧಗಳಲ್ಲಿ ಧ್ಯಾನಸಾಮಯವಾದ ಸೇವೆಯು ಅಖಂಡವೂ ಅನನ್ಯವೂ ಆದ ಸ್ಮರಣಭಕ್ತಿಯಾಗುತ್ತದೆ.

ಈ ಸ್ಥಿತಿಯನ್ನು ಪಡೆದಿರುವ ಪ್ರೇಮಿಕನು ತನ್ನ ಇಷ್ಟಮೂರ್ತಿಯನ್ನು ಒಂದು ನಿಮಿಷವೂ ಬಿಟ್ಟಿರಲು ಸಾಧ್ಯವಾಗುವುದಿಲ್ಲ. ನಾಮಸ್ಮರಣೆಯೂ ರೂಪಚಿಂತನವೂ ಎಡೆಬಿಡದೆ ಸರಾಗವಾಗಿ ನಡೆಯುವುದರಿಂದ ಕೇಳುವುದೂ ಕಾಣುವುದೂ ಮುಟ್ಟುವುದೂ ಮೂಸುವುದೂ ಮೆಲ್ಲುವುದೂ ಎಲ್ಲವೂ ಗುರು ಮಯವಾಗಿಯೇ ಅನುಭವಕ್ಕೆ ಬರುತ್ತವೆ.

ನಾರದರು ತಮ್ಮ ಭಕ್ತಿಸೂತ್ರಗಳಲ್ಲಿ "**ಯಥಾ ವ್ರಜಗೋಪಿಕಾನಾಂ**" "ಬೃಂದಾವನದ ಗೋಪಸ್ತ್ರೀಯರು ಕೃಷ್ಣನಲ್ಲಿ ಪಡೆದಿದ್ದ ಪ್ರೇಮದಂತೆ ಪ್ರೇಮ ವನ್ನು ಬೆಳೆಸಿಕೊಂಡರೆ ಇಷ್ಟದೇವನ ಸಾಕ್ಷಾತ್ಕಾರವಾಗುವುದು" ಎಂದು ಹೇಳಿ ದ್ದಾರೆ. ಗೋಪಿಯರಿಗೆ ಕೃಷ್ಣಪ್ರೇಮದ ಹುಚ್ಚೇ ಹಿಡಿದಿತ್ತು. ಕ್ಷಣಮಾತ್ರವೇ ಕೃಷ್ಣನನ್ನು ಕಾಣದಿದ್ದರೂ ವಿರಹತಾಪದಿಂದ ದುಃಖಿಸುತ್ತಿದ್ದರು. ಶ್ರೀಕೃಷ್ಣ ಪರಮಾತ್ಮನ ರೂಪ ಗುಣ ಚೇಷ್ಟಾದಿಗಳು ಅವರ ನೆನಪಿಗೆ ಬಂದಕೂಡಲೇ ಅವರಿಗೆ ಪ್ರೇಮಪಾರವಶ್ಯದಿಂದ ಮಾತೇ ಹೊರಡದಂತಾಗುತ್ತಿತ್ತು. "ತಲೆ ಯಲ್ಲಿ ನವಿಲುಗರಿ! ನಡುವಿನಲ್ಲಿ ಕನಕವರ್ಣದ ಪಟ್ಟೆಮಡಿ! ಕೊರಳಲ್ಲಿ ವೈಜಯಂತಿಮಾಲಾ! ಇಂತಹ ಮೋಹನಾಕಾರದಿಂದ ಕೃಷ್ಣನು ಕೊಳಲಿನ ರಂಧ್ರಕ್ಕೆ ತನ್ನ ಅಧರಾಮೃತವನ್ನು ತುಂಬುತ್ತ, ಅನೇಕ ಗೋಪಾಲಕರಿಂದ ಪರಿವೃತನಾಗಿ ತನ್ನ ಪಾದಚಿಹ್ನಗಳಿಂದ ಬೃಂದಾರಣ್ಯವನ್ನಲಂಕರಿಸುತ್ತ ಅಲ್ಲಲ್ಲಿ ಸಂಚರಿಸುತ್ತಿರುವುದನ್ನು ಮನಸ್ಸಿನಲ್ಲಿ ಸ್ಮರಿಸಿಕೊಂಡಾಗ, ಅವರಿಗೆ ಪ್ರೇಮಾ- ವೇಶದಿಂದ ಏನೂ ತೋರದಂತಾಗುತ್ತಿತ್ತು. ತಮ್ಮ ದೇಹಗಳನ್ನೇ ಮರೆಯು ತ್ತಿದ್ದರು.

ಪುಣ್ಯಪುಂಜೆಯರಾದ ಗೋಪಿಯರದು ಪ್ರೇಮದಲ್ಲಿ ಉತ್ಕಟವೂ ಉತ್ಕೃ ಷ್ಟವೂ ಆದ ಕಾಂತಾಭಾವದ 'ರಾಗಾತ್ಮಿಕಾ' ಭಕ್ತಿ. ಈ ರಾಗಾತ್ಮಿಕಾ ಭಕ್ತಿಯ ವಿಷಯದಲ್ಲಿ ಶ್ರೀ ಮಧುಸೂದನ ಸರಸ್ವತಿಗಳು 'ಭಕ್ತಿರಸಾಮೃತ ಸಿಂಧು' ಎಂಬ ಗ್ರಂಥದಲ್ಲಿ ಹೇಳಿರುವುದೇನೆಂದರೆ,

ಇಷ್ಟೇ ಸ್ವಾರಸಿಕೀ ರಾಗಃ ಪರಮಾವಿಷ್ಟತಾ ಭವೇತ್ ।
ತನ್ಮಯೀ ಯಾ ಭವೇದ್ ಭಕ್ತಿಃ ಸಾತ್ರ ರಾಗಾತ್ಮಿಕೋದಿತಾ ॥

" ಸಂಪೂರ್ಣವಾಗಿ ಪರಮಾತ್ಮನಿಂದ ತುಂಬಲ್ಪಟ್ಟು ಅವನಲ್ಲಿಯೇ ಕರಗಿ ಬೆರೆತಿರುವ ಸ್ವಚ್ಛಂದವಾದ ಅನುರಾಗವೇ ರಾಗಾತ್ಮಿಕಾ ಭಕ್ತಿ. "

**ಸಮ್ಯಕ್ ಮಸೃಣಿತಸ್ವಾಂತೋ ಮಮತ್ವಾತಿಶಯಾಂಕಿತಃ ।**
**ಭಾವಃ ಸ ಏವ ಸಾಂದ್ರಾತ್ಮಾ ಬುಧೈಃ ಪ್ರೇಮಾ ನಿಗದ್ಯತೇ ॥**

ಪರಮಾತ್ಮನಲ್ಲಿ ಮಮತೆಯ ಪರಮೋತ್ಕರ್ಷವೇ ಪ್ರೇಮ. ಅದು ಅತ್ಯುತ್ಕಟವಾದ ಅನುರಕ್ತಿಯಿಂದ ತುಂಬಿದ ಅತ್ಯಂತ ಸಂಗ್ರಹೀತಸಾರವಾದ ಭಗವತ್ಪ್ರೇಮವು. ಆದರಿಂದ ಹೃದಯವು ಸಂಪೂರ್ಣವಾಗಿ ಶುದ್ಧವಾಗುವುದು. ಭಕ್ತಿಯ ಪರಿಪೂರ್ಣತೆಯೂ ಪರಿಪಕ್ವತೆಯೂ ಭಗವತ್ಪ್ರೇಮವಾಗಿದೆ.

ಶಾಂಡಿಲ್ಯರೂ, ' **ಸಾ ಪರಾನುರಕ್ತಿರೀಶ್ವರೇ** ' 'ಈಶ್ವರನಲ್ಲಿರುವ ಪರಮಾನುರಾಗವೇ ಭಕ್ತಿ ಅಥವಾ ಪ್ರೇಮ' ಎಂದಿದ್ದಾರೆ. ಪರಮಾನುರಾಗವಿರುವ ವಸ್ತುವಿನಲ್ಲಿ ಯಾವ ದೋಷವೂ ಕಾಣದೇ ಅದು ಪೂರ್ಣ ಪವಿತ್ರವಾಗಿ ಕಾಣುತ್ತದೆ- ಅದೊಂದಿದ್ದರೆ ಹದಿನಾಲ್ಕು ಲೋಕವೇ ಇದ್ದಂತಾಗುತ್ತದೆ. ಹದಿನಾಲ್ಕು ಲೋಕಗಳ ಪ್ರಭುತ್ವವೇ ಇದ್ದರೂ ಪರಮಾನುರಾಗಕ್ಕೆ ಗುರಿಯಾದ ಇಷ್ಟವಸ್ತುವೊಂದಿಲ್ಲವಾದರೆ, ಸರ್ವವೂ ಶೂನ್ಯವಾಗಿ ಕಾಣುತ್ತದೆ.

ಇಂಥಾ ಪರಮಾನುರಾಗವುಳ್ಳ ವ್ರಜಲಲನೆಯರ ಪವಿತ್ರವೂ ಉತ್ಕಟವೂ ಆದ ಪ್ರೇಮದ ವಿಚಾರದಲ್ಲಿ ಸ್ವಯಂ ಭಗವಂತನೇ ತನ್ನನ್ನು ತಾನು ಬಹಳ ಲಘುವಾಗಿ ಎಣಿಸಿ ಹೇಳಿರುವುದೇನೆಂದರೆ,

**ನ ಪಾರಯೇಹಂ ನಿರವದ್ಯ ಸಂಯುಜಾಂ ।**
**ಸ್ವ ಸಾಧುಕೃತ್ಯಂ ವಿಬುಧಾಯುಷಾಪಿ ವಃ ॥**
**ಯಾ ಮಾಭಜನ್ ದುರ್ಜರ ಗೇಹ ಶೃಂಖಲಾಃ ।**
**ಸಂವೃಶ್ಚ್ಯ ತದ್ವಃ ಪ್ರತಿಯಾತು ಸಾಧುನಾ ॥**

" ನನ್ನಲ್ಲಿ ಸಂಯೋಗವಾಗುವುದಕ್ಕಾಗಿ, ಕಡಿಯಲು ಕಠಿಣವಾದಂಥ ಗೃಹಸ್ಥಾಶ್ರಮ ಧರ್ಮದ ಪಾಶವನ್ನೂ ಸಹ ತೃಣದಂತೆಣಿಸಿ ಕಡಿದೊಗೆದು ಪರಮೋತ್ಕಟ ಪ್ರೇಮದಿಂದ ಬಂದಿರುವ ಎಲೌ ವ್ರಜಲಲನೆಯರೇ ! ನಿರ್ಮಲಪ್ರೇಮದ ಧ್ವಜಾಸ್ವರೂಪಿಣಿಯರೂ ಮಹಾನುಭಾವೆಯರೂ ಆದ ನಿಮ್ಮ ಉಪಕಾರದಿಂದ ದೇವತೆಗಳ ದೀರ್ಘಾಯುಸ್ಸಿನಲ್ಲಿ ಕೂಡ ನಾನು ಋಣಮುಕ್ತನಾಗಲು

ಸಾಧ್ಯವಿಲ್ಲ. ನೀವು ದಯಮಾಡಿ ಕ್ಷಮಾಮಾಡಿದರೆ ಮಾತ್ರ ಆ ಋಣದಿಂದ ಮುಕ್ತನಾದೇನು; ಬೇರೆ ಉಪಾಯವಿಲ್ಲ."

ವೃಂದಾವನದ ಗೋಪಿಯರ ಮಧುರಮಯವಾದ ಕಾಂತಾಸಕ್ತಿಯ ಪವಿತ್ರಪ್ರೇಮಕ್ಕೆ ಭಗವಂತನಿಂದಲೇ ಇದಕ್ಕೂ ಹೆಚ್ಚಿನ ಪ್ರಶಸ್ತಿಯೂ ಪ್ರಸಾದವೂ ಸಿಕ್ಕುವುದು ಸಾಧ್ಯವಿಲ್ಲ."

ಶಾಂಡಿಲ್ಯರು **"ಅತ ಏವ ತದಭಾವಾತ್ ವಲ್ಲವೀನಾಂ"** ಎಂಬ ಸೂತ್ರದಿಂದ ವೃಂದಾವನದ ವ್ರಜಗೋಪಲಲನೆಯರು ಜ್ಞಾನವಾಗದಿದ್ದರೂ ಭಗವಂತನನ್ನು ಕಾಂತಾಭಾವದಿಂದ ಭಜಿಸಿದ್ದರಿಂದ ಅಖಿಲಾನಂದ ಸುಖ ಸ್ರೋತಗಳನ್ನೂ ತಿಳಿದವರಾಗಿ ಕೃತಾರ್ಥರಾದರು. ಯಾವ ಯಜ್ಞ ದಾನ ತಪಸ್ಸುಗಳೂ ಜ್ಞಾನವೂ ಇಲ್ಲವಾದರೂ ವ್ರಜಗೋಪಿಯರು ಅನನ್ಯ ಪ್ರೇಮವೆಂಬ ಪರಮ ತಪಸ್ಸಿನಿಂದಲೇ ಭಗವಂತನ ಪೂರ್ಣ ಕೃಪೆಯನ್ನು ಸಂಪಾದಿಸಿದರು." ಎಂದು ಹೇಳಿದ್ದಾರೆ.

ಶ್ರೀಕೃಷ್ಣ ಪರಮಾತ್ಮನೇ ಲೋಕಗುರುವು. ಬ್ರಹ್ಮನಿಷ್ಠ ಮಹಾತ್ಮನಾದ ಸದ್ಗುರುವೇ ಕೃಷ್ಣಭಗವಾನನು. ಭಕ್ತರ ಪಾಪಗಳನ್ನೆಲ್ಲಾ ಕರ್ಷಣ ಮಾಡಿ ಅವರ ಹೃದಯಗಳನ್ನು ಪ್ರೇಮದಿಂದ ಆಕರ್ಷಣಮಾಡುವುದರಿಂದ ಗುರುವೇ ಕೃಷ್ಣಪರಮಾತ್ಮನು. ಕಾಂತಾಭಾವದ ರಾಗಾತ್ಮಿಕಾ ಭಕ್ತಿಯುಳ್ಳ ಶಿಷ್ಯರೇ ಗೋಪಿಯರು. ಅಂಥ ಅನನ್ಯಭಕ್ತಿಯುಳ್ಳ ಶಿಷ್ಯನ ಪವಿತ್ರಹೃದಯವೇ ಪುಣ್ಯಕ್ಷೇತ್ರ ವೃಂದಾವನ. ಶಿಷ್ಯನ ಮನೋವೃಂದಾವನದಲ್ಲಿ ಕೃಷ್ಣಚೈತನ್ಯನಾದ ಗುರುವು ಶಿಷ್ಯನ ಪ್ರೇಮವೃತ್ತಿಗಳೆಂಬ ಗೋಪಿಯರೊಡನೆ ರಾಸಲೀಲೆಯನ್ನಾಡುವನು.

'ರಾಸ' ಎಂದರೆ (ರಸಸಂಬಂಧ–ರಸಮಯ) ರಸಗಳ ಸಮೂಹ. ಪ್ರೇಮಜೀವನದಲ್ಲಿ ಉದಿಸುವ ವಿವಿಧ ರಸಭಾವಗಳಿಂದಲೂ ಚೈತನ್ಯಸ್ವರೂಪನಾದ ಗುರುದೇವನನ್ನೇ ಎಡೆಬಿಡದೆ ಸ್ಮರಿಸುವ ಆನಂದ ವಿಲಾಸವೇ ರಾಸಲೀಲೆ. ಅಲಂಕಾರಶಾಸ್ತ್ರದಲ್ಲಿ ಒಂಭತ್ತು ಬಗೆಯಾದ ರಸಗಳನ್ನು ವರ್ಣನೆಮಾಡಿದೆ. 1) ಶೃಂಗಾರ, 2) ಹಾಸ್ಯ, 3) ಕರುಣಾ, 4) ರೌದ್ರ, 5) ವೀರ, 6) ಭಯಾನಕ, 7) ಭೀಭತ್ಸ, 8) ಅದ್ಭುತ, 9) ಶಾಂತ. ರಸಗಳು

ಹೀಗೆ ಒಂಭತ್ತು ಬಗೆಯಾಗಿದ್ದರೂ ಯಾವ ರಸಾವೇಶದಿಂದಲಾದರೂ ಅನುಭವಿಸುವ ಆನಂದವು ಮಾತ್ರ ಒಂದೇ ಇವೆ. **“ ಆನಂದೋ ಬ್ರಹ್ಮೇತಿ ವ್ಯಜಾನಾತ್ ”** ಎಂಬ ಶ್ರುತಿಯಂತೆ ಆನಂದವೇ ಬ್ರಹ್ಮವಾಗಿದೆ. ಕಾವ್ಯಗಳಲ್ಲಿ ಎಲ್ಲಾ ರಸಗಳೂ— ಭಯಾನಕ, ಭೀಭತ್ಸ, ಶೋಕ ರಸಗಳೂ ಸಹ— ರಂಜನೆಯನ್ನೂ ಆನಂದಾವಿರ್ಭಾವವನ್ನೂ ಉಂಟುಮಾಡಿದರೂ ಜೀವನದಲ್ಲಿ ಶೋಕರಸವೂ ಆನಂದಕ್ಕೆ ಹೇಗೆ ಕಾರಣವಾಗಬಹುದೆಂದರೆ ಆ ಚಿಂತಾತಂಕ ಶೋಕಾದಿಗಳನ್ನೂ ತನ್ನ ಇಷ್ಟದೇವನ ವಿಲಾಸವೆಂದು ಒಪ್ಪಿಸುವ ರಾಸಲೀಲೆಯಿಂದ ಭಕ್ತನಿಗೆ ಆನಂದವೇ ಆಗುವುದು. ಜೀವನಲ್ಲವಿಯು ಯಾವ ಸಮಯದಲ್ಲಿ ಯಾವ ರಸವನ್ನು ಅನುಭವಮಾಡುವಳೋ ಆ ಸಮಯದಲ್ಲಿ ಆ ರಸವನ್ನೇ ಇಷ್ಟದೇವನಿಂದ ಪ್ರಸಾದರೂಪವಾಗಿ ಬಂದುದೆಂದು ತಿಳಿಯುವುದರಿಂದ ಆಕೆಯ ಆನಂದಕ್ಕೆ ಕಾರಣವೂ ಇಷ್ಟದೇವನ ಲೀಲೆಯೂ ಆಗುತ್ತದೆ.

ನಾಟಕ ರಂಗದಲ್ಲಿ ಮಂಜುಳವಾಗಿ ಕೇಳುವ ವಿಧವಿಧ ವಾದ್ಯಗಳ ವಾದನವೂ, ಮನೋಹರವಾಗಿ ಕಾಣುವ ವಿವಿಧ ಪಾತ್ರಗಳ ಅಭಿನಯ ವೈಖರಿಯೂ ಯಜಮಾನನಿಗೂ ಪ್ರೇಕ್ಷಕರಿಗೂ ಆನಂದವನ್ನೇ ಉಂಟುಮಾಡುತ್ತವೆ. ಪಾತ್ರಧಾರಿಗಳ ಕೀರ್ತನೆಗಳೂ ಅವುಗಳಿಗೆ ಸ್ವರಗೂಡಿ ನುಡಿಯುವ ಹಾರ್ಮೋನಿಯಂ, ಫಿಡ್ಲ್, ಕೊಳಲು, ಸಾರಂಗಿ, ತಬಲ ಮೊದಲಾದ ವಾದ್ಯಗಳೂ ಬಗೆಬಗೆಯಾಗಿದ್ದರೂ ಸರ್ವವೂ ಸುಸ್ವರ ಸಮ್ಮೇಳನದಿಂದ ಸುಖಪ್ರದವೇ ಆಗುವಂತೆ ಅಭಿನಯಕಾರರ ಶೃಂಗಾರ, ಹಾಸ್ಯ, ಕರುಣಾ ಮೊದಲಾದ ರಸಗಳು ಬೇರೆಬೇರೆಯೇ ಆದರೂ ಎಲ್ಲವೂ ಸುಮಧುರ ಸಾಮರಸ್ಯದಿಂದ ಸೂತ್ರಧಾರಿಯಾದ ಯಜಮಾನನ ವಿಲಾಸಕ್ಕೂ ಸಭಿಕರ ವಿನೋದ ವಿಕಾಸಗಳಿಗೂ ಕಾರಣವಾಗಿ ಆನಂದವೀಯುತ್ತವೆ.

ಹೀಗೆ ಈ ಜಗತ್ತೇ ನಾಟಕರಂಗ, ಜೀವರೇ ರಸಿಕಪಾತ್ರಗಳು. **‘ ರಸೋ ವೈ ಸಃ ’** ಎಂಬ ಶ್ರುತಿಯಂತೆ ಭಗವಂತನೇ (ಗುರುದೇವನೇ) ಪ್ರೇಮರಸ ರೂಪನು, ಆನಂದರಸಸ್ವರೂಪನು. ಇವನೇ ಸೂತ್ರಧಾರಿ; ಸರ್ವಪ್ರೇರಕ, ಸರ್ವಕಾರಕ, ಲೀಲಾಮಯ, ವಿಶ್ವನಾಟಕ ಸೂತ್ರಧಾರಿಯಾದ ಮಹಾವಿಷ್ಣು ಮೂರ್ತಿ. ಈ ರಸವಿದ್ಯಾಚತುರನಾದ ಸಮರ್ಥನೇ ಜಗತ್ತಿನಲ್ಲಿ ಕೆಲವು ಜೀವ

ರನ್ನು ನಗಿಸುತ್ತಾ, ಕೆಲವರನ್ನು ಅಳಿಸುತ್ತಾ, ಕೆಲವರನ್ನು ಅಂಜಿಸುತ್ತಾ, ಮತ್ತೆ ಕೆಲವರನ್ನು ರಂಜಿಸುತ್ತಾ, ಮೆರೆಸುತ್ತಾ, ಉರಿಸುತ್ತಾ, ಸರಸವಾಗಿಯೂ ವಿರಸವಾಗಿಯೂ, ಸಂಯೋಗಸುಖದಿಂದಲೂ ವಿಯೋಗದುಃಖದಿಂದಲೂ, ದ್ವಂದ್ವಾತ್ಮಕವಾದ ರಸಾವೇಶಗಳಿಂದ ನಿರಂತರ ರಾಸಲೀಲೆಯಾಡುತ್ತಿರುವನು. ಈ ರಾಸಲೀಲೆಯು ಮಂಡಲಾಕಾರವಾದ ಶಕ್ತಿ ಮಂಥನ ಬಾಹ್ಯದಲ್ಲಿ—ಮನೋವೃತ್ತಿಗಳ ಬಾಹ್ಯಮಂಟಪದಲ್ಲಿ ಪ್ರಣವಗಾನದಿಂದ ಪ್ರಕಾಶಿಸುತ್ತಿರುವ ಚೈತನ್ಯ ಮೂರ್ತಿಗೆ ಜೀವನದ ಎಲ್ಲಾ ಸುಮನಸ ಮನ್ಮಾನಸ ಬಗೆಗಳ ರಸಾನ್ನವನ್ನು ನಿವೇದನಮಾಡುವುದರಿಂದ ಆ ಏಕಾಂತ ಭಕ್ತನು ರಾಸರಮಣನ ಪರಮಾನಂದ ಪ್ರಸಾದವನ್ನು ಪಡೆಯುತ್ತಾನೆ.

ರಸ-ಭಾವನಾಮಯನಾದ ಭಕ್ತನಿಗೆ ಇಷ್ಟಗುರುವಿನಲ್ಲಿಯ ಪ್ರೇಮವು ಆಸಕ್ತಿ ಅಥವಾ ಅನುರಕ್ತಿಯು ಹನ್ನೊಂದು ಭಾವಗಳಿಂದ ಬೆಳೆಯುತ್ತದೆ ಎಂದು ನಾರದರು ಹೇಳಿದ್ದಾರೆ:—

**“ ಗುಣಮಾಹಾತ್ಮ್ಯಾಸಕ್ತಿ, ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ, ಸಖ್ಯಾಸಕ್ತಿ, ಕಾಂತಾಸಕ್ತಿ, ವಾತ್ಸಲ್ಯಾಸಕ್ತಿ, ಆತ್ಮನಿವೇದನಾಸಕ್ತಿ, ತನ್ಮಯತಾಸಕ್ತಿ, ಪರಮವಿರಹಾಸಕ್ತಿ, ರೂಪೈಕಧಾಪ್ಯೇಕಾದಶಧಾಭವತಿ ॥ ”**

1. **ಗುಣಮಾಹಾತ್ಮ್ಯಾಸಕ್ತಿ:** ಭಗವಂತನ ಹಾಗೂ ಮಹಾಪುರುಷರ ಅವತಾರ ಮಹಿಮೆಗಳ ಹಾಗೂ ಅವರ ಉದಾತ್ತವಾದ ಸಚ್ಚಾರಿತ್ರ್ಯ ಕಲ್ಯಾಣಗುಣಗಳ ವಿಚಾರಗಳನ್ನು ಶ್ರವಣಮಾಡಿ ತಿಳಿಯುವುದರಲ್ಲಿಯೂ ಪರಮಾತ್ಮನ ನಿಜಗುಣವೂ ನಿರ್ಗುಣವೂ ಆದ ಸಚ್ಚಿದಾನಂದಸ್ವರೂಪವನ್ನು ಅನುಭವ ಪಡೆದುಕೊಳ್ಳುವ ಮಹಿಮೆಯಲ್ಲಿಯೂ ಇರುವ ಆಸಕ್ತಿ.

2. **ರೂಪಾಸಕ್ತಿ:** (1) ತನ್ನ ಇಷ್ಟಮೂರ್ತಿಯ ಮನೋಹರಾಕಾರದಲ್ಲಿ ಇರುವ ವಿಶೇಷ ಪ್ರೇಮ. ಯಾವುದನ್ನು ಕೇಳಿದರೂ, ನೋಡಿದರೂ, ಮುಟ್ಟಿದರೂ, ಮೂಸಿದರೂ, ಮೆಲ್ಲುವುದಾದರೂ ತನ್ನ ಇಷ್ಟದೇವನ ರೂಪವೇ ಮನಸ್ಸಿಗೆ ಬಂದು ತನ್ನ ದೇಹಸಹಿತ ಆ ರೂಪವಾಗಿಯೇ ಕಾಣುವುದು.

(2) ಶ್ರೀ ಶಂಕರರು ಹೇಳಿರುವಂತೆ **"ಸಚ್ಚಿದಾನಂದ ರೂಪೋಹಂ ನಿರ್ವಿಕಲ್ಪ ಸ್ವಭಾವವಾನ್"** "ನಾನು ಸಚ್ಚಿದಾನಂದ ರೂಪನೂ ನಿರ್ವಿಕಲ್ಪ ಸ್ವಭಾವದವನೂ ಇದ್ದೇನೆ" ಎಂಬ ನಿಶ್ಚಯಜ್ಞಾನದಲ್ಲಿ ಆಸಕ್ತಿ.

3. **ಪೂಜಾಸಕ್ತಿ :** ತನ್ನ ಉಪಾಸ್ಯಮೂರ್ತಿಯನ್ನು ಶಾಸ್ತ್ರೀಯ ವಿಧಿಯಿಂದಲೂ ಬಗೆಬಗೆಯಾದ ಉಪಚಾರಗಳಿಂದಲೂ ಸೋಹಂಭಾವದಿಂದಲೂ ಪೂಜಿಸುವುದರಲ್ಲಿ ಆಸಕ್ತಿ.

4. **ಸ್ಮರಣಾಸಕ್ತಿ :** ತನ್ನ ಉಪಾಸ್ಯದೇವನ ನಾಮವನ್ನೂ ರೂಪವನ್ನೂ ಎಡೆಬಿಡದೆ ನೆನಪಿಗೆ ತಂದುಕೊಳ್ಳುವುದರಲ್ಲಿ ಆಸಕ್ತಿ. **"ಯಥಾ ಸ್ವೈರಾಂಗನಾ ಸ್ವಕಂ"** "ತನ್ನ ಗಂಡನಿಗೂ ಮಾವನಿಗೂ ಅತ್ತೆ ಮೊದಲಾದವರಿಗೂ ಹೊರಗೆ ಅಚ್ಚುಮೆಚ್ಚಾಗಿರುವಂತೆ ತನ್ನ ಮನೆಗೆಲಸಗಳನ್ನು ಮಾಡುತ್ತಿದ್ದರೂ ಸ್ವೇಚ್ಛಾವಿಲಾಸಿನಿಯಾದ ತರುಣಿಯು ತನ್ನ ಮೆಚ್ಚಿನ ಇನಿಯನನ್ನು ಎಡೆಬಿಡದೇ ಅಂತರಂಗದಲ್ಲಿಯೇ ಹಂಬಲಿಸುತ್ತಿರುವಂತೆ" ಭಕ್ತನು ಲೌಕಿಕವಾದ ತನ್ನ ಕರ್ತವ್ಯಗಳನ್ನೆಲ್ಲಾ ಲೋಪವಿಲ್ಲದೇ ಪಾಲಿಸಿದರೂ ಉತ್ಕಟವಾದ ಅನುರಾಗದಿಂದ ಮನಸ್ಸಿನಲ್ಲಿಯೇ ಇಷ್ಟದೇವನ ನಾಮರೂಪಗಳನ್ನೂ ಆವನ ಸಚ್ಚಿದಾನಂದವಾದ ನಿಜರೂಪವನ್ನೂ ನೆನೆಯುವುದರಲ್ಲಿ ಆಸಕ್ತಿಯಿರುವುದೇ ಸ್ಮರಣಾಸಕ್ತಿ.

3. **ದಾಸ್ಯಾಸಕ್ತಿ :** ಈ ಜಗತ್ತಿನ ಸಂಸಾರವೆಲ್ಲಾ ವಿಶ್ವಸಂಸಾರಿಯಾದ ಈಶ್ವರನದೇ ಎಂದು ತಿಳಿದು ತಾನು ಮಾಡುವ ವೈದಿಕ–ಲೌಕಿಕ ಕರ್ಮಗಳನ್ನೆಲ್ಲಾ ದಾಸ್ಯಭಾವದಿಂದ ಈಶ್ವರನಿಗೆ ಅರ್ಪಿಸಿ ಸೇವಾರೂಪವಾಗಿ ಮಾಡುವುದೇ ದಾಸ್ಯಾಸಕ್ತಿ. ಪರಮೇಶ್ವರನಾದ ಸದ್ಗುರುವಿನ ಇಂಗಿತಕ್ಕೂ ಇಚ್ಛೆಗೂ ಆಜ್ಞೆಗೂ ಅನುಸಾರವಾಗಿ ಅವನಿಗೆ ಪ್ರೀತಿಯಾಗುವಂತೆ ಅತ್ಯಂತ ನಮ್ರಭಾವದಿಂದ ದಾಸಾನುದಾಸನಾಗಿ ಸೇವೆಮಾಡುವುದರಲ್ಲಿ ಅಬಾಧಿತವಾದ ಉತ್ಸಾಹವಿರುವುದೇ ದಾಸ್ಯಾಸಕ್ತಿ. ದಾಸ್ಯಭಾವಕ್ಕೆ ಮಾರುತಿಯೇ ಪರಮಾದರ್ಶ.

ಅನುರಾಗದ ಈ ಐದು ಬಗೆಗಳು ಸಾಧನರೂಪವಾದ ಭಕ್ತಿ ಅಥವಾ ಗೌಣೀಭಕ್ತಿ. ಮಿಕ್ಕ ಆರು ಭಾವಗಳು ಪರಾಭಕ್ತಿಯ ಸಾಧನಸೋಪಾನಗಳು

ಇವುಗಳಲ್ಲಿ ಕೊನೆಗೆ ಹೇಳಿರುವ ವಿರಹಾಸಕ್ತಿಯು ಕಾಂತಾಸಕ್ತಿಯ ನಂತರ ಕ್ರಮವರಿತು ಬರುವುದು ನಿಹಿತವಾಗಿ ಕಾಣುತ್ತದೆ. ವ್ಯವಹಾರಜಗತ್ತಿನಲ್ಲಿಯಾದರೂ ಕಾಂತಾಕಾಂತರ ಅಥವಾ ಪ್ರಿಯ–ಪ್ರೇಯಸಿಯರ ಸಂಬಂಧದಲ್ಲಿಯೇ ವಿರಹಭಾವವು ಸ್ಫುಟವಾಗಿ ಪ್ರಕಟವಾಗುವುದಾಗಿದೆ. ಆತ್ಮನಿವೇದನಾ ತನ್ಮಯತಾ ಸಾಧನೆಗಳು ಮುಗಿದ ನಂತರ ಸಾಧನದ ಪರಾಕಾಷ್ಠ ಸ್ಥಿತಿಯು ಸಿದ್ಧಿಗೆ ಮುಟ್ಟಿದಂತಾಯಿತು. ಪರಾಭಕ್ತಿಯ ಸಿದ್ಧಿಯನ್ನು ಹೊಂದಿ ತತ್ತ್ವಸಾಕ್ಷಾತ್ಕಾರವಾದ ಮೇಲೂ ವಿರಹಭಾವವನ್ನು ಹೇಳಿದರೆ ಗುಣಾತೀತ ಸ್ಥಿತಿಯಿಂದ ಚ್ಯುತಿಯನ್ನೂ ಪತನವನ್ನೂ ಹೇಳಿದಂತಾಗಿ ಮುಕ್ತಿಗೂ ಸಿದ್ಧಾಂತಕ್ಕೂ ಅನುಭವಕ್ಕೂ ವಿರೋಧವಾಗುತ್ತದೆ. ಆತ್ಮನಿವೇದನವಾದ ಬಳಿಕ ತನ್ಮಯತಾ–ತದ್ರೂಪತಾ–'ತದೇವಾಹಮಸ್ಮಿ' ಸ್ಥಿತಿಗೆ ಯೋಗವು ಕೊನೆಮುಟ್ಟಬಹುದೇ ಹೊರತು ವಿರಹದಲ್ಲಿ ಕೊನೆಗೊಂಡರೆ ವಿಯೋಗವಾಗುವುದಲ್ಲದೇ 'ಯೋಗ'ವೆಂದಿಗೂ ಆಗುವುದಿಲ್ಲ.

6. **ಸಖ್ಯಾಸಕ್ತಿ :** ಕೃಷ್ಣಾರ್ಜುನರ ಸಂಬಂಧವು ಸಖ್ಯಸಂಬಂಧವು. '**ಸಮಾನ ಶೀಲ ವ್ಯಸನೇಷು ಸಖ್ಯಂ**' ಎಂಬ ತತ್ತ್ವದಂತೆ ಗುಣ ಶೀಲ ಸ್ವಭಾವಾದಿಗಳಲ್ಲಿ ತನ್ನ ಇಷ್ಟದೇವನ ಅಥವಾ ಸದ್ಗುರುವಿನ ಸಮಾನತೆಯು ಬಂದಾಗ ಮಾತ್ರ ಪ್ರೇಮದ ಯೋಗ್ಯತೆಯು ಸಖ್ಯದ ಸೋಪಾನವನ್ನು ಏರುತ್ತದೆ. ದಾಸ್ಯಾಸಕ್ತಿಯವರೆಗೆ ಪ್ರೇಮವು ಹೊರಗೇ ಹರಿಯುತ್ತಿರುವುದರಿಂದ ಇಷ್ಟಮೂರ್ತಿಯ ಸ್ಥೂಲವನ್ನೇ ಹೆಚ್ಚಾಗಿ ಅವಲಂಬಿಸಿರುತ್ತದೆ. ಚಿತ್ತವು ಹೆಚ್ಚುಹೆಚ್ಚಾಗಿ ಶುದ್ಧವಾದಂತೆ ಗುರುದೇವನ ಅಂತರಂಗದಲ್ಲಿ ಪ್ರವೇಶಮಾಡಿ ಆ ಮಹಾತ್ಮನ ಉನ್ನತವಾದ ಗುಣ–ಶೀಲ-ಸ್ವಭಾವಗಳನ್ನು ಅರಿಯುವುದರಿಂದಲೂ ಬೆಲೆಯನ್ನರಿತು ಅನುರಾಗದಿಂದ ಪೂಜಿಸುವುದರಿಂದಲೂ ಬೆರೆತು ಲಕ್ಷ್ಯಪೂರ್ವಕವಾಗಿ ಅಭ್ಯಾಸಮಾಡುವುದರಿಂದಲೂ ಆ ಇಷ್ಟದೇವನ ಗುಣ ಶೀಲ ಸ್ವಭಾವಗಳೇ ಉಪಾಸಕನಲ್ಲಿಯೂ ಮೈಗೂಡುತ್ತವೆ. ಆಗ (Law of affinity) ಸೃಷ್ಟಿನಿಯಮದಂತೆ ಅಥವಾ ಋಣಾನುಬಂಧದ ಅನ್ಯೋನ್ಯ ಆಕರ್ಷಣೆಯ ನಿಯಮದಂತೆ ಪರಸ್ಪರ ಅನುರಾಗಪೂರ್ವಕವಾದ ಸ್ವಾತಂತ್ರ್ಯವೂ ಅಧಿಕಾರವೂ ಬೆಳೆಯುತ್ತವೆ. ಇದೇ ನಿಜವಾದ ಸ್ನೇಹ. ಭಕ್ತನ ಪ್ರೇಮವು ಭಗವಂತನಲ್ಲಿಯೂ, ಭಗವಂತನ ಪ್ರೇಮವು ಭಕ್ತನಲ್ಲಿಯೂ ಬೀಳುವ ಸಖ್ಯ,

ಸಕ್ತಿಯು ವೃದ್ಧಿಯೂ ಸಿದ್ಧಿಯೂ ಹೊಂದಲು ಭಕ್ತನ ಗುಣಶೀಲ ಸ್ವಭಾವಗಳು ಹೇಗಿರಬೇಕೆಂಬುದನ್ನು ಭಗವದ್ಗೀತೆಯಲ್ಲಿ (ಅಧ್ಯಾಯ 12, ಶ್ಲೋಕ 13–20 ವರೆಗೆ) ಶ್ರೀ ಗೀತಾಚಾರ್ಯನೇ ಕರುಣೆಯಿಂದ ಹೇಳಿದ್ದಾನೆ: "ಯಾವನು ಸರ್ವ ಪ್ರಾಣಿಗಳನ್ನೂ ತನ್ನ ಸ್ವರೂಪವಾಗಿಯೇ ಕಾಣುವುದರಿಂದ ಯಾರನ್ನೂ ದ್ವೇಷಿಸುವುದಿಲ್ಲವೋ, ಸರ್ವತ್ರ ಮೈತ್ರಿಯುಳ್ಳವನೋ, ದುಃಖಿಗಳಲ್ಲಿ ದಯೆಯುಳ್ಳವನೋ, ಅಂತಃಕರಣದ ಗುಣಗಳಲ್ಲಿಯೂ ದೇಹಾದಿಗಳಲ್ಲಿಯೂ ನಾನು ನನ್ನದೆಂಬ ಅಭಿಮಾನವಿಲ್ಲದವನೋ, ಸುಖದಿಂದ ಹಿಗ್ಗದೇ ದುಃಖದಿಂದ ತಗ್ಗದೇ ಇರುವನೋ, ಯಾರ ಎಂಥಾ ತಪ್ಪನ್ನಾದರೂ ಕ್ಷಮಿಸಬಲ್ಲನೋ, ಯಾರು ಯಾವಾಗಲೂ ದೊರೆತಷ್ಟರಲ್ಲಿಯೇ ತೃಪ್ತನಾಗಿರುವನೋ, ಸಮಾಹಿತ ಚಿತ್ತನೋ, ಸಂಯಮಿಯೋ, ಸ್ವರೂಪಜ್ಞಾನದಲ್ಲಿ ದೃಢನಿಶ್ಚಯವುಳ್ಳವನೋ, ಯಾವನು ಸಚ್ಚಿದಾನಂದ ಸ್ವರೂಪನಾದ ನನ್ನಲ್ಲಿ ಮನೋಬುದ್ಧಿಗಳನ್ನು ಒಪ್ಪಿಸಿರುವನೋ ಅಂಥಾ ಭಕ್ತನೇ ನನಗೆ ಪ್ರಿಯನಾದವನು. ಯಾವನಿಂದ ಯಾವ ಪ್ರಾಣಿಯೂ ನೋಯುವುದಿಲ್ಲವೋ, ಯಾವ ಪ್ರಾಣಿಯಿಂದಲೂ ಯಾವನು ನೊಂದುಕೊಳ್ಳುವುದಿಲ್ಲವೋ, ಇಷ್ಟಲಾಭದ ಸಂತೋಷದಿಂದಲೂ ಅನಿಷ್ಟ ಪ್ರಾಪ್ತಿಯ ಅಸಹನೆಯಿಂದಲೂ ಭಯದಿಂದಲೂ ಉದ್ರೇಕದಿಂದಲೂ ಕ್ಷುಬ್ಧನಾಗದವನು ನನಗೆ ಪ್ರಿಯನು. ವಿಷಯಸುಖದಲ್ಲಿ ನಿಃಸ್ಪೃಹನೂ ತನುಮನಗಳಲ್ಲಿ ಶುಚಿರ್ಭೂತನೂ ಕರ್ತವ್ಯದಕ್ಷನೂ ಮಿತ್ರ ಅಥವಾ ಶತ್ರು ಮೊದಲಾದ ಯಾವ ಪಕ್ಷಕ್ಕೂ ಸೇರದೇ ತಟಸ್ಥನಾಗಿರುವವನೂ ವ್ಯಥೆಪಡದವನೂ ಎಲ್ಲಾ ಕಾಮ್ಯಕರ್ಮಗಳನ್ನೂ ಬಿಟ್ಟವನೂ ಆದ ನನ್ನ ಭಕ್ತನು ನನಗೆ ಪ್ರಿಯನು. ಇಷ್ಟಲಾಭದಿಂದ ಹರ್ಷಗೊಳ್ಳದೆ, ಅನಿಷ್ಟವನ್ನು ಜೇಡೆನ್ನದೆ, ಇಷ್ಟಾರ್ಥನಾಶದಿಂದ ಶೋಕಿಸದೆ, ಇಷ್ಟಾರ್ಥವನ್ನು ಬಯಸದೆ ಪುಣ್ಯಪಾಪಗಳನ್ನು ಬಿಟ್ಟಿರುವ ಭಕ್ತನೇ ನನಗೆ ಪ್ರಿಯನು. ಶತ್ರುಮಿತ್ರರಲ್ಲಿಯೂ ಪುರಸ್ಕಾರ ತಿರಸ್ಕಾರಗಳಲ್ಲಿಯೂ ಶೀತ-ಉಷ್ಣ, ಸುಖ-ದುಃಖಗಳಲ್ಲಿಯೂ ಬೇಕುಬೇಡೆನ್ನದೇ ಒಂದೇ ಬಗೆಯಾದ ಸಮಾಧಾನದಿಂದ ಅಭಿಮಾನವಿಲ್ಲದಿರುವವನೇ ನನಗೆ ಪ್ರಿಯನಾದವನು. ಭೂಷಣ–ದೂಷಣಗಳಿಂದ ಹರ್ಷ–ವಿಷಾದಗಳನ್ನು ಹೊಂದದವನೂ ಮೌನವ್ರತಿಯೂ ಹೆಚ್ಚಿನ ಪ್ರಯತ್ನವಿಲ್ಲದೆ ದೊರೆತಷ್ಟರಿಂದಲೇ ಸಂತುಷ್ಟನಾಗುವವನೂ ಮಮಕಾರವನ್ನು ಬಿಟ್ಟು ಬೇರೆ ಆಶ್ರಯವಿಲ್ಲದವನೂ

ಪರಮಾರ್ಥ ನಿಶ್ಚಯದಿಂದ ಸ್ಥಿರಬುದ್ಧಿಯುಳ್ಳವನೂ ನನಗೆ ಪ್ರಿಯನಾದವನು" ಹೀಗೆಂದು ಭಗವಂತನು ಹೇಳಿದ್ದಾನೆ. ಈ ಸಖ್ಯಾಸಕ್ತಿಯಿಂದ ದಾಸ್ಯಭಾವದಲ್ಲಿರುವ ದೂರವೂ ಭಯವೂ ಬಿಗುಹೂ ಗಾಂಭೀರ್ಯವೂ ಕಡಿಮೆಯಾಗುತ್ತವೆ, ಮತ್ತು ಸಡಿಲುತ್ತವೆ. ಪೂಜಾದಿಗಳಲ್ಲಿ ಪೂಜ್ಯ-ಪೂಜಕ ಭೇದಭಾವವೇ ಎದ್ದು ಕಾಣುವುದರಿಂದ ದಾಸ್ಯಭಕ್ತಿಯೇ ವಿಹಿತವಾಗಿರುತ್ತದೆ. ಆದರೆ ದಾಸ್ಯಭಕ್ತಿಯಿಂದಲೂ ಶ್ರವಣದಿಂದಲೂ ಶುದ್ಧಚಿತ್ತನಾದವನು ಚಿತ್ತಸ್ಥೈರ್ಯವನ್ನು ಪಡೆಯುವುದಕ್ಕಾಗಿ ಜಪಧ್ಯಾನಾದಿ (ಮನನ) ಅಂತರಂಗ ಸಾಧನೆಯನ್ನು ಮಾಡುವಾಗ ಉಪಾಸಕ-ಉಪಾಸ್ಯರ ಅಥವಾ ಜೀವಾತ್ಮ ಪರಮಾತ್ಮರ ಸಾಮ್ಯ ಗುಣಗಳೂ ಲಕ್ಷಣಗಳೂ ತಿಳಿವಳಿಕೆಗೆ ಬರುವುದರಿಂದ ಭೇದಭಾವವು ಕಡಿಮೆಯಾಗಿ ಸಮಾನಭಾವವೂ ಸ್ನೇಹವೂ ಸಲಿಗೆಯೂ (ಸ್ವಾತಂತ್ರ್ಯವೂ) ಹೆಚ್ಚುತ್ತವೆ. ಇದೇ ಸಖ್ಯಾಸಕ್ತಿಯು.

7. **ಕಾಂತಾಸಕ್ತಿ :** ಸಖ್ಯಭಾವದಲ್ಲಿ ಶಿಷ್ಯನು ಗುರುವಿನ ಕೇವಲ ಸತ್ತ್ವಗುಣವಿಶಿಷ್ಟವಾದ ಸ್ವಭಾವವನ್ನರಿತು ತನ್ನ ರಜಸ್ತಮೋಗುಣಗಳನ್ನು ಕಳೆದುಕೊಂಡು ತಾನೂ ಸಾಧನಬಲದಿಂದ ಸತ್ತ್ವಗುಣವನ್ನೇ ಮೈಗೂಡಿಸಿಕೊಳ್ಳುವುದರಿಂದ ಅವನ ಕೊಳೆಯಿಲ್ಲದ ಮನಸ್ಸಿನಲ್ಲಿ ಗುರುವಿನ ತತ್ತ್ವಾನುಭವದ ರಹಸ್ಯವು ತಿಳಿಯಾಗಿ ಬೆಳಗುತ್ತದೆ. ಸಖ್ಯಭಾವದಲ್ಲಿ ಗುರುವಿನ ಅಂತರಂಗವನ್ನು ಹೆಚ್ಚು ಅರಿತು ಅಭ್ಯಾಸಮಾಡಿದವನು ಕಾಂತಾಭಾವದಲ್ಲಿ ಗುರುದೇವನ ಆನಂದಾನುಭವದ ರಹಸ್ಯದಲ್ಲಿ ಪರಮಾನುರಾಗದಿಂದ ಬೆರೆತು ತಾನೂ ಆನಂದಿಸುತ್ತಾನೆ. ದಾಸ್ಯಭಾವದಲ್ಲಿ ಸ್ವಾಮಿ-ಭೃತ್ಯರಿಗಿರುವ ದೂರವು ಸಖ್ಯಭಾವದಲ್ಲಿ ಗೆಳೆಯರಿಬ್ಬರಿಗಿರುವುದಿಲ್ಲ. ಸ್ನೇಹಿತರ ನಡುವೆ ಇರಬಹುದಾದ ಅತ್ಯಲ್ಪ ಅಂತರವೂ ಪತಿ-ಪತ್ನಿಯರಲ್ಲಿ ಇರುವುದಿಲ್ಲ. ಮಿಕ್ಕ ಭಾವಗಳಲ್ಲಿರುವ ಯೋಗ-ಭೋಗಗಳು ತರುಣ-ತರುಣಿಯರ ಪ್ರೇಮದಲ್ಲಿ ಸಂಯೋಗ-ಸಂಭೋಗಗಳಾಗುತ್ತವೆ. ಕಾಂತಾ-ಕಾಂತರ ಸಂಬಂಧದಲ್ಲಿಯೂ ಪ್ರಣಯಬಂಧದಲ್ಲಿಯೂ ಅಯಃಕಾಂತದ (ಅಥವಾ ವಿದ್ಯುತ್ತಿನ) ಋಣ-ಧನ ಶಕ್ತಿಗಳಿವೆ. ಒಂದನ್ನು ಇನ್ನೊಂದು ಸೆಳೆಯುತ್ತದೆ. ಗಾಢಾಲಿಂಗನವೇ ಈ ಆಕರ್ಷಣೆಯ ಪರಮಾವಧಿ; ಸೀಮಾ. ಯೋಗವು ಸಂಯೋಗವಾಗುವ ಗೂಢವಾದ ಪ್ರಗಾಢಸ್ಥಿತಿ. ಪ್ರೇಮಕ್ಕೆ ಸರ್ವಥಾ ಅಭಿಮುಖಿಗಳಾದ ಎರಡು ಶಕ್ತಿಗಳಿರಬೇಕು. ಅವುಗಳ ನಡುವೆ

ಹುಟ್ಟುವ ಗಾಢಸೆಳೆತವೇ ಪ್ರೇಮಶಕ್ತಿ. ವಿಲಕ್ಷಣವಾದ ಈ ಶಕ್ತಿಯು ಎರಡನ್ನೂ ಸೆಳೆತದಿಂದಲೇ ಒಟ್ಟುಗೂಡಿಸಿ ಒಂದುಮಾಡುತ್ತದೆ. ಮೇಲಾದ ಬೌದ್ಧಿಕ ಭೂಮಿಕೆಯಲ್ಲಿ ಈ ಪ್ರೇಮಯೋಗವು ಆಧ್ಯಾತ್ಮಿಕ ಬೆಳವಣಿಗೆಗೂ ಕೀಳಾದ ಭೌತಿಕ (ದೈಹಿಕ) ಭೂಮಿಕೆಯಲ್ಲಿ ಸ್ಥೂಲರೂಪಗಳ (ಸಂತಾನಗಳ) ಬೆಳವಣಿಗೆಗೂ ಕಾರಣವಾಗುತ್ತದೆ. ಪುನಃ ಈ ಪ್ರೇಮವೇ ತನ್ನ ವಿಲಾಸಕ್ಕಾಗಿ ಎರಡಾಗಬೇಕೆಂದು (ಭಿನ್ನವಾಗಬೇಕೆಂದು) ಬಯಸುತ್ತದೆ. ಇದೇ ವಿರಹಯೋಗ. ಹೀಗೆ ಯೋಗ–ವಿಯೋಗಗಳು ಒಂದೇ ಶಕ್ತಿಯ ಎರಡು ಧ್ರುವಗಳಾಗಿ ರಾಗವಿರಾಗ ರಸಗಳಿಂದ ಕ್ರೀಡಿಸುತ್ತಿರುವುದೇ ರಾಸಕ್ರೀಡೆಯಾಗಿದೆ.

ಗುರುಶಿಷ್ಯರ ಪ್ರೇಮದಲ್ಲಿ ಬಹಿರಂಗದ ಯೋಗಭಾವಗಳಿಂದಲೂ ಅಂತರಂಗದ ರಾಗರಸಗಳಿಂದಲೂ ಸಾಧನದ ಈ ಸಪ್ತಮ ಸೋಪಾನದಲ್ಲಿ ಮುಮುಕ್ಷು ಜೀವನ ಹಾಗೂ ಮುಕ್ತಾತ್ಮನ ಸಂಯೋಗವೂ ಐಕ್ಯವೂ ರಮಮಾಣವೂ ಉಂಟಾಗುತ್ತವೆ. ಸಖ್ಯಭಾವಕ್ಕಿಂತಲೂ ಕಾಂತಾಭಾವದಲ್ಲಿ ಉಪಾಸಕನ ಮನಸ್ಸು ಹೆಚ್ಚು ಏಕಾಂತದಲ್ಲಿಯೂ ಅಂತರಂಗದಲ್ಲಿಯೂ ಪ್ರವೇಶಮಾಡುತ್ತದೆ. ಪೂಜಾಸಕ್ತಿಯವರೆಗೆ ಆ ಮೂರು ಭಾವಗಳು ರಾಜಯೋಗದ ಯಮನಿಯಮಸಾಧನಗಳೂ ಪ್ರಾಣ–ಇಂದ್ರಿಯ–ಮನಸ್ಸುಗಳಿಗೆ ಸ್ಮರಣಾಸಕ್ತಿಯು ಸಂಬಂಧಿಸಿರುವುದರಿಂದ ಅದು ಆಸನಪ್ರಾಣಾಯಾಮಗಳ ಸ್ವರೂಪವೂ, ದಾಸ್ಯಭಾವವೇ ಪ್ರತ್ಯಾಹಾರವೂ, ಸಖ್ಯವೇ ಧಾರಣವೂ. ಕಾಂತಾಸಕ್ತಿಯೇ ಯೋಗಿಯು ತನ್ನ ಹೃದಯಕಮಲದಲ್ಲಿ ಅಥವಾ ಆಜ್ಞಾಚಕ್ರದಲ್ಲಿ ಬೆಳಗುವ ಪ್ರಭಾಮಂಡಲದಲ್ಲಿ ಗುರುಮೂರ್ತಿಯನ್ನು ನಿಲ್ಲಿಸಿ ನೆನೆನೆನೆದು ರಮಿಸಿ ಆನಂದಪಡುವ ಧ್ಯಾನಯೋಗವೂ ಆಗಿದೆ. 'ನಾನು' ಎನ್ನುವ ತಿಳಿವಿನ ಚಿಲುಮೆಯು ತನ್ನ ಎಳೆತನದಲ್ಲಿ ತನಗೆ ತೌರಾಗಿದ್ದ ದೇಹೇಂದ್ರಿಯಾದಿಗಳ ಆಶ್ರಯವನ್ನು ತೊರೆದು, ಪ್ರಫುಲ್ಲಿತವಾದ ತಾರುಣ್ಯದಲ್ಲಿ **'ಸೋಹಂ'** (ಅವನೇ ನಾನೆಂಬ) ಭಾವದಿಂದ ಗುರುತತ್ತ್ವದಲ್ಲಿ ಲಗ್ನವಾಗಿ ಪುನಃ ಪುನಃ ಬ್ರಹ್ಮಾನಂದದಲ್ಲಿ ರಮಿಸುತ್ತಿರುವುದೇ ಕಾಂತಾಸಕ್ತಿಯಾಗಿದೆ.

ಈ ಭಾವದಲ್ಲಿ ಇಷ್ಟವಸ್ತುವನ್ನು ಒಂದು ನಿಮಿಷವಾದರೂ ಒಳಗೆ ಧ್ಯಾನದಿಂದಾಗಲೀ ಹೊರಗೆ ಸನ್ನಿಧಾನದಿಂದಾಗಲೀ ಬಿಟ್ಟಿರಲಾರೆನೆಂದಾಗುತ್ತದೆ.

ಆ ದಿವ್ಯವಾದ ಆನಂದಾನುಭವವನ್ನು ಅನುಗ್ರಹಿಸಿರುವ ಗುರುದೇವನು ಪರಮ ಪ್ರೇಮಸ್ವರೂಪನಾಗಿಯೂ ಪವಿತ್ರನಾಗಿಯೂ ಕಾಣುತ್ತಾನೆ. ಆ ಪ್ರೇಮಕ್ಕಾಗಿ ಸರ್ವಸ್ವವನ್ನೂ ಒಲಿಗೊಡುತ್ತಾನೆ; ತನ್ನನ್ನೇ ನಿವಾಳಿಮಾಡಿ ಅವನ ಸ್ವರೂಪದಲ್ಲಿ ಮುಳುಗಿಸಿ, ವಿಲೀನಮಾಡುತ್ತಾನೆ. ಗುರುಮೂರ್ತಿಯ ಮೂತ್ರ ಮಲಗಳು ಸಹ ಪವಿತ್ರ ತೀರ್ಥಪ್ರಸಾದಗಳಾಗಿ ಕಾಣುತ್ತವೆ. ಗುರುವಿನ ಹೊರತು ಅವನಿಗೆ ಇನ್ನೊಂದು ವಸ್ತುವೇ ಇಲ್ಲ. ತನ್ನ ದೇಹಮೋಹಗಳೆಲ್ಲಾ ಅವನಿಗೆ ಓಂಕಾರ ಝೇಂಕಾರವೇ ತುಂಬಿದೆ, ಗುರುವೇ ರೋಮರೋಮವೂ ಪ್ರಣವನಾದ ಪೂರ್ಣವಾಗಿದೆ. ಎಲ್ಲೆಲ್ಲಿಯೂ ಆ ಕೃಷ್ಣಚೈತನ್ಯನ ಪ್ರಣವ ರೂಪವಾದ ವೇಣುನಾದವೇ ಮಂಜುಳವಾಗಿ ಮೊರೆಯುತ್ತಿದೆ. ಇದೇ ಅತ್ಯಂತ ಮಧುರಮಯವಾದ ವ್ರಜಗೋಪಿಯರ ರಾಗಾತ್ಮಿಕಾ ಭಕ್ತಿ. “**ತೊಮ್ಹಾ ದೇಹ್, ಮಾಝ್ಹಾ ಜ್ಞಾನ್**” “ನಿನ್ನ ದೇಹವೇ ನನ್ನ ಜ್ಞಾನ”,—ನನ್ನ ಮೋಕ್ಷ, ನನ್ನ ಅಮೃತ, ನನ್ನ ಸರ್ವಸ್ವ ಎನ್ನುವ ಉತ್ಕಟ ಪ್ರೇಮಭಾವವು ಇದು. ಆ ಲೋಕಮೋಹನನ ಪರಮ ಸೌಂದರ್ಯದಿಂದ ಗೋಪಿಯರು ಅನವರತಾಗಿ ಆಕರ್ಷಿಸಲ್ಪಟ್ಟು ಧರ್ಮಾಧರ್ಮಗಳನ್ನೂ ಮೀರಿ ಪರಮಧರ್ಮವಾದ ಕಾಂತಾಸಕ್ತಿಯಲ್ಲಿ ಶುದ್ಧಸತ್ತ್ವರೂ ಸಿದ್ಧಸತ್ತ್ವರೂ ಆದರು.

೮. **ಪರಮ ವಿರಹಾಸಕ್ತಿ :** ಕಾಂತಾಸಕ್ತಿಯನ್ನೂ ಪರಮವಿರಹಾಸಕ್ತಿಯನ್ನೂ ತಿಳಿದುಕೊಳ್ಳಬೇಕಾದರೆ ಈ ಸಾಧನತತ್ತ್ವಗಳ ರೂಪಕವೇ ಆದಂಥ ಕೃಷ್ಣಗೋಪಿಯರ ಪ್ರೇಮವನ್ನೂ ಪ್ರಸಿದ್ಧವಾದ ರಾಸಲೀಲೆಯನ್ನೂ ಅಗತ್ಯವಾಗಿ ವಿಚಾರಮಾಡಲೇಬೇಕಾಗುತ್ತದೆ. “**ಪ್ರೇಮೈವ ಗೋಪರಾಮಾಣಾಂ ಕಾಮ ಇತ್ಯಗಮತ್ ಪ್ರಥಾಮ್**” “ಗೋಪಲಲನೆಯರ ಶುದ್ಧಪ್ರೇಮವನ್ನೇ ‘ಕಾಮ’ ಎಂಬ ಹೆಸರಿನಿಂದ ಕರೆಯುವ ಪರಿಪಾಠವು ಬಂದಿದೆ.” ಕಾಮವು ಇಂದ್ರಿಯಸುಖವನ್ನು ಬಯಸುವ ಪ್ರೇಮವಾಗಿದೆ. ಶುದ್ಧಪ್ರೇಮವು ಇಂದ್ರಿಯಧರ್ಮಗಳನ್ನು ಮೀರಿ ಇಷ್ಟವಸ್ತುವಿನ ಪ್ರೀತಿ-ಸುಖಗಳನ್ನು ಸಾಧಿಸುವುದಾಗಿದೆ. ಈ ಪ್ರೇಮವನ್ನೇ ರಾಗವೆಂದೂ ಕರೆಯುತ್ತಾರೆ. ಈ ಕಾಮವಾಗಲಿ, ಪ್ರೇಮವಾಗಲಿ, ರಾಗವಾಗಲಿ ಮೂರು ಬಗೆಯಾಗಿದೆ. ಪೂರ್ವರಾಗ, ಮಿಲನ, ವಿರಹ ಎಂದು; ಅಥವಾ ರಾಗ-ಯೋಗ-ವಿಯೋಗ ಎಂದು. 1) ಇಷ್ಟವಸ್ತುವಿನ ಪ್ರಾಪ್ತಿಯು ಇನ್ನೂ ಆಗದಿರುವಾಗ ಅದರ ಲಾಭ

ಕ್ಕಾಗಿ ಚಿತ್ತದಲ್ಲಿ ಉಂಟಾಗುವ ತೀವ್ರವಾದ ಉತ್ಕಂಠಿತೆಯೋ, ಕಾತರತೆಯೋ. ಪ್ರೀತಿಯೋ ಪೂರ್ವರಾಗ ಅಥವಾ ರಾಗ. ಇವರಲ್ಲಿ ರಾತ್ರಿಹಗಲೂ ಎಡೆಬಿಡದೇ ಪ್ರಿಯವಸ್ತುವಿನ ಚಿಂತೆಯೂ ಚಿಂತನವೂ ಧ್ಯಾನವೂ ಜ್ಞಾನವೂ ಬೆಳೆಯುತ್ತದೆ. ಮಿಲನಕ್ಕಾಗಿ ಅಥವಾ ಯೋಗಕ್ಕಾಗಿ ಪ್ರತಿನಿಮಿಷವೂ ಕಾವೇರಿ ಬೆಳೆಯುತ್ತಿರುತ್ತದೆ. ಈ ದಶೆಯಲ್ಲಿ ಹೆಂಡತಿ, (ಗಂಡ), ಮಕ್ಕಳು, ಮನೆ, ಹೊಲ, ಜೀವನ, ತನ್ನ ದೇಹ ಮೊದಲಾದ ಎಲ್ಲವುಗಳಲ್ಲಿಯೂ ಜುಗುಪ್ಸೆಯೂ ವೈರಾಗ್ಯವೂ ಉಂಟಾಗುತ್ತದೆ.

ವೃಂದಾವನದಲ್ಲಿ ಗೋಪಿಯರು ಪೂರಾ ಒಂದು ವರ್ಷದವರೆಗೆ ಮುರಳೀ ಮನೋಹರನಾದ ಶ್ರೀಕೃಷ್ಣನೇ ತಮಗೆ ಪತಿಯಾಗಬೇಕೆಂದು ಕಾತ್ಯಾಯನೀ ವ್ರತವನ್ನು ಮಾಡಿ, ನಿರುಪದ್ರವವಾಗಿ ವ್ರತವು ಪೂರೈಸಿದ್ದಕ್ಕಾಗಿ ಆನಂದದಿಂದ ವ್ರತದ ಉದ್ಯಾಪನೆಯಾದ ದಿನವೇ ಯಮುನಾ ನದಿಗೆ ಸ್ನಾನಕ್ಕಾಗಿಯೂ ಕ್ರೀಡೆಗಾಗಿಯೂ ಹೋದರು. ಶ್ರೀ ಕೃಷ್ಣನು ಅವರ ಅನನ್ಯ ಪ್ರೇಮಸಾಧನದ ಪಕ್ವತೆಯನ್ನು ಪರೀಕ್ಷೆಮಾಡುವುದಕ್ಕಾಗಿ ಯಮುನೆಗೆ ಹೋಗಿ ಗೋಪಿಯರ ವಸ್ತ್ರಗಳನ್ನೆಲ್ಲಾ ಮುಚ್ಚಿ ತೆಗೆದುಕೊಂಡು ತೀರದಲ್ಲಿರುವ ಮರವನ್ನು ಹತ್ತಿ ಕುಳಿತು, ದೈನ್ಯದಿಂದ ಬೇಡುವ ಗೋಪಿಯರಿಗೆ, ಬರಿಬೆತ್ತಲೆಯಾಗಿ ಮೇಲೆ ಬಂದು ಎರಡು ಕೈಗಳನ್ನೂ ಮೇಲೆತ್ತಿ ಮುಗಿದರೆ ಸೀರೆಗಳನ್ನು ಕೊಡುವುದಾಗಿ ಹೇಳಿದನು. ಗೋಪಿಯರು ಮೊದಲು ಸಂಕೋಚಪಟ್ಟರೂ ಅನಂತರ ಕೃಷ್ಣನ ಇಚ್ಛೆಯಂತೆ ಮಾಡಿ ಎಲ್ಲರೂ ಸೀರೆಗಳನ್ನು ಪಡೆದರು ಇದರಿಂದ "Come ye naked to the naked Christ" "ನಗ್ನನಾದ ಕ್ರಿಸ್ತನ ಸಮೀಪಕ್ಕೆ ಬರತಕ್ಕ ನೀವೂ ನಗ್ನರಾಗಿಯೇ ಬನ್ನಿರಿ" ಎನ್ನುವ ಬೈಬಲ್ ಗ್ರಂಥದ ಕ್ರಿಸ್ತನ ಮಾತು ನೆನಪಿಗೆ ಬರಬಹುದು. ಎಲ್ಲಿಯವರೆಗೆ ರಾಗಾತಿಶಯದ ನ್ಯೂನತೆಯಿಂದ ಭಕ್ತನಿಗೂ ಭಗವಂತನಿಗೂ ಭೇದವಿದೆಯೋ ಅಥವಾ ಪ್ರೇಮ ಪಾತ್ರವಾದ ವಸ್ತುವೊಂದೇ ಲಕ್ಷ್ಯದಲ್ಲಿ ಸಿಲ್ಲದೇ ತನ್ನ ದೇಹಾದಿಗಳ ಅಭಿಮಾನವೂ ಉಳಿದಿದೆಯೋ ಅಲ್ಲಿಯವರೆಗೆ ಅಭಿಮಾನ, ಲಜ್ಜಾ, ಭಯ ಮೊದಲಾದ ಗುಣಗಳ ಆವರಣವಿರುತ್ತದೆ. ಆದರೆ ಶುದ್ಧವೂ ತೀವ್ರವೂ ಆದ ರಾಗವು ಪರಿಪಕ್ವಾವಸ್ಥೆಯನ್ನು ಹೊಂದಿದೊಡನೆ ಸಚ್ಚಿದಾನಂದ ಸ್ವರೂಪನ ಪ್ರಾಪ್ತಿ ಯಾಗುವುದು. ಆಗ ಜೀವಭಾವದ ಸಮಸ್ತ ಆವರಣಗಳೂ ಕಳಿಸಿಹೋಗು

ತ್ತಾನೆ. ಕೇವಲ ಜ್ಞಾನಾನಂದ ಸ್ವರೂಪನಾದಂಥ ಶಂಕರನು ದಿಗಂಬರನೇ ಆಗಿದ್ದಾನೆ. ದತ್ತರಾಜನೂ ದಿಗಂಬರನೇ. ವಿಷ್ಣುವು ಮಾತ್ರ ಲೀಲಾಮಯ ನಾದುದರಿಂದ ಪೀತಾಂಬರಧಾರಿಯಾಗಿದ್ದಾನೆ. ದೃಶ್ಯವಾದ ಲೀಲಾಗಾತ್ರ ದಿಂದ ಮೂಲ ಕೂಟಸ್ಥನಿಗೆ ಹೋದರೆ ಅವನು ದಿಗಂಬರನೂ ಕೇವಲನೂ ಆಗಿದ್ದಾನೆ. ಪರಮಾತ್ಮ ಪ್ರಾಪ್ತಿಗಾಗಿ ಪ್ರೇಮಸಾಧನೆಯಿಂದ ಜೀವನ ಆವರಣ ವಿಕ್ಷೇಪ ಶಕ್ತಿಗಳು ನಾಶವಾಗುವುದರ ಹಾಗೂ ಆ ನಾಶಕ್ಕಾಗಿ ಆಗುವ ಭಗವ ದನುಗ್ರಹದ ತತ್ತ್ವವೇ ಗೋಪೀವಸ್ತ್ರಾಪಹರಣ ಲೀಲೆಯಾಗಿದೆ. ಇದು ಜ್ಞಾನ ಯೋಗದ ನಿತ್ಯಾನಿತ್ಯವಸ್ತುವಿವೇಕವೂ ನಿತ್ಯವಸ್ತು ನಿರ್ಧಾರ ಸಾಧನವೂ ಆಗಿದೆ.

ಕೃಷ್ಣನು ಅವಿವಾಹಿತೆಯರಾಗಿದ್ದ ಆ ಗೋಪಕನ್ಯೆಯರೊಡನೆ ಅಸ್ತು ಕುಚೇಷ್ಟೆಯಂತೆ ನಡೆದುಕೊಂಡರೂ ಅವರಿಗೆ ಅವನಲ್ಲಿ ನಿಜವಾದ ಉತ್ಕಟ ಪ್ರೇಮವಿದ್ದುದರಿಂದ ಆ ಕನ್ಯೆಯರಿಗೆ ಸಿಟ್ಟು ಬರದೇ ಪ್ರೇಮವು ಮತ್ತಷ್ಟು ಬೆಳೆದು, ಕೃಷ್ಣನನ್ನು ಬಿಟ್ಟು ಹೋಗಲಾರದೇ ಪ್ರೇಮಪರವಶರಾಗಿ ಅಲ್ಲಿಯೇ ನಿಂತಿದ್ದರು. ಏಕೆಂದರೆ ಆ ಗೋಪಿಯರು ಪ್ರೀತಿಸುತ್ತಿದ್ದುದು ದೇವಕೀತನಯ ಕೃಷ್ಣನನ್ನಲ್ಲ; ವಿಶ್ವರೂಪದರ್ಶನವನ್ನು ಅನುಗ್ರಹಿಸಿದ ದಿವ್ಯಕೃಷ್ಣನನ್ನು. (They loved the Divine form of Sri Krishna and not his human form.) ಅವರ ಪರಮಾನುರಾಗದ ಇಂಗಿತವನ್ನರಿತು ಕೃಷ್ಣನು ಹೇಳುವುದೇನೆಂದರೆ.

**ನ ಮಯ್ಯಾವೇಶಿತಧಿಯಾಂ ಕಾಮಃ ಕಾಮಾಯ ಕಲ್ಪತೇ ।**
**ಭರ್ಜಿತಾ ಕ್ವಥಿತಾ ಧಾನ್ಯಾಃ ಪ್ರಾಯೋ ಬೀಜಾಯ ನೇಷ್ಯತೇ ॥**

“ ಕಾಮವೆಂಬುದು ಕೇವಲ ವಿಷಯೋಪಭೋಗದಲ್ಲಿ ಪರ್ಯವಸಾನ ಹೊಂದ ತಕ್ಕುದಾದರೂ ನನ್ನ ವಿಷಯವಾದ ಕಾಮವು ಹಾಗಲ್ಲ. ನನ್ನಲ್ಲಿ ನಟ್ಟ ಮನ ಸ್ಸುಳ್ಳವರ ಕಾಮವು ಕಾಮನಿರೋಧಕವೂ ಪೂರ್ಣಕಾಮವೂ ಆದ ಮುಕ್ತಿ ಯನ್ನೇ ಕೊಡುವುದೇ ಹೊರತು ಕೇವಲ ಕಾಮಕ್ಕಾಗಿ (ವಿಷಯೋಪಭೋಗ ಕ್ಕಾಗಿ) ಏರ್ಪಡಲಾರದು. ಕಾಮವೆಂಬುದು ಸಂಸಾರಕ್ಕೆ ಬೀಜವೆಂಬುದೇನೋ ವಾಸ್ತವವೇ! ಆದರೆ ಬೆಂಕಿಯಿಂದ ಹುರಿದ ಅಥವಾ ಬೇಯಿಸಿದ ಬೀಜಕ್ಕೆ ಚಿಗುರಿ ಮೊಳೆಯುವ ಶಕ್ತಿಯು ತಪ್ಪಿಹೋಗುವಂತೆ ನನ್ನ ವಿಷಯವಾದ

ಚಿಂತೆಯು ಕರ್ಮವಾಸನಾರೂಪವಾದ ಅವರ ಬೀಜವನ್ನು ಹುರಿದುಬಿಡುವುದೆಂದು ತಿಳಿಯಿರಿ! ಓ ಬಾಲೆಯರೇ, ನೀವು ಯಾವ ಉದ್ದೇಶದಿಂದ ಈ ದೇವೀವ್ರತವನ್ನು ನಡೆಸಿದಿರೋ ಆದರ ಫಲವು ಸಿದ್ಧಿಸಲಿ! ಮುಂದೆ ಒಂದಾನೊಂದು ಶರತ್ಕಾಲದ ರಾತ್ರಿಗಳನ್ನು ನೀವು ನನ್ನ ಸಹವಾಸ ಸೌಖ್ಯದಿಂದ ಕಳೆದು ಪೂರ್ಣಮನೋರಥರಾಗಬಹುದು!" ಆಶೋದ್ದೀಪಕವಾದ ಕೃಷ್ಣನ ಈ ಆಶ್ವಾಸನದಿಂದ ಗೋಪಕನ್ಯೆಯರ ಅನುರಾಗವು ಉತ್ಕಟವಾಗಿ ಉಜ್ಜ್ವಲನವಾಯಿತು. ಇದು ಪೂರ್ವರಾಗದ ಪರಿಪಾಕಾವಸ್ಥೆ.

ಇನ್ನೊಂದು ಶರತ್ಕಾಲದಲ್ಲಿ ರಾತ್ರಿ, ಪೂರ್ಣ ಕಳೆಗಳಿಂದ ಚಂದ್ರನು ಉದಿಸಿ ಶೋಭಿಸುತ್ತಿರುವಾಗ ಕೃಷ್ಣನು ತನ್ನ ಕೊಳಲನ್ನು ಕೈಗೆ ತೆಗೆದುಕೊಂಡು ಗೋಪಾಂಗನೆಯರ ಮನಸ್ಸನ್ನು ಸೂರೆಗೊಳ್ಳುವಂತೆ ಮಧುರನಾದದಿಂದ ವೇಣುಗಾನ ಮಾಡುತ್ತಾ ವೃಂದಾವನದ ಬೀದಿಗಳಲ್ಲಿ ಹೊರಟನು. ಆ ಕೃಷ್ಣನ ವೇಣುಗಾನವಾದರೋ ಸಹಜವಾಗಿಯೇ ಎಂತಹರಿಗೂ ಕಾಮೋದ್ದೀಪಕವಾದುದು. ಹೀಗಿರುವಾಗ ಒಂದೆ ಕೃಷ್ಣನ ಆಶ್ವಾಸನವನ್ನು ಕೇಳಿದಾಗಿನಿಂದಲೂ,

**ಹೇ ದೇವ ಹೇ ದಯಿತ ಹೇ ಭುವನೈಕ ಬಂಧೋ ।**
**ಹೇ ಕೃಷ್ಣ ಹೇ ಚಪಲ ಹೇ ಕರುಣೈಕ ಸಿಂಧೋ ॥**
**ಹೇ ನಾಥ ಹೇ ರಮಣ ಹೇ ನಯನಾಭಿರಾಮ ।**
**ಹಾ! ಹಾ!! ಕದಾ ನು ಭವಿತಾಸಿ ಪದಂ ದೃಶೋರ್ಮೇ ॥**

"ಹೇ ದೇವ! ಹೇ ದಯಾಳೋ! ಹೇ ವಿಶ್ವದ ಏಕಮಾತ್ರ ಬಂಧು! ಓ ಕೃಷ್ಣ! ಓ ಚಪಲ! ಓ ಕರುಣಾಸಾಗರ! ಓ ಸ್ವಾಮಿ! ಓ ನನ್ನ ನಾಥ! ನನ್ನನ್ನು ರಮಿಸುವವನೆ! ನನ್ನ ಕಣ್ಣುಗಳಿಗೆ ಆನಂದವನ್ನುಂಟುಮಾಡುವ ಪ್ರಾಣೇಶ! ನೀನು ಯಾವಾಗ ದರ್ಶನ ಕೊಡುತ್ತೀ?" ಎಂದು ಕೃಷ್ಣದರ್ಶನಕ್ಕಾಗಿ ಕರುಣಾಜನಕವಾಗಿಯೂ ಮಾರ್ಮಿಕವಾಗಿಯೂ ಎಡೆಬಿಡದೇ ಕಳವಳಿಸುತ್ತಿದ್ದ ಗೋಪಿಯರು ಕೃಷ್ಣನ ವೇಣುಧ್ವನಿಯನ್ನು ಕೇಳಿದೊಡನೆ ಅವರ ಸಂಭ್ರಮವನ್ನೂ ಆನಂದವನ್ನೂ ಪರವಶತೆಯನ್ನೂ ಹೇಳಬೇಕೆ?

ಹಾಲು ಕರೆಯುತ್ತಿದ್ದವರೂ, ಶಿಶುಗಳಿಗೆ ಮೊಲೆಯೂಡಿಸುತ್ತಿದ್ದವರೂ, ಪತಿ ಶುಶ್ರೂಷೆಯಲ್ಲಿದ್ದವರೂ, ಊಟಕ್ಕೆ ಕುಳಿತವರೂ, ಮೈತೊಳೆಯುತ್ತಿದ್ದವರೂ ಹಾಗೆಹಾಗೆಯೇ ಬಿಟ್ಟು ತಮ್ಮ ಗಂಡಂದಿರೂ ಮಕ್ಕಳೂ ತಡೆಯುತ್ತಿದ್ದರೂ ನಿಲ್ಲದೆ ಕೃಷ್ಣನಲ್ಲಿ ನಟ್ಟ ಮನಸ್ಸುಳ್ಳವರಾಗಿ ಅವನ ಸುತ್ತಲೂ ಬಂದು ನೆರೆದರು.

ಆಗ ಕೃಷ್ಣನು ಆಶ್ಚರ್ಯಪಟ್ಟವನಂತೆ “ಓ ಭಾಗ್ಯವತಿಯರೆ! ನಿಮಗೆ ಸುಖಾಗಮನವೆ? ಕ್ರೂರ ಜಂತುಗಳು ಸಂಚರಿಸತಕ್ಕ ಈ ಭಯಂಕರವಾದ ಕಾಳರಾತ್ರಿಯಲ್ಲಿ ಅಬಲೆಯರಾದ ನೀವು ಇಲ್ಲಿಗೆ ಬಂದ ಕಾರಣವೇನು? ಸಮಸ್ತ ಪ್ರಾಣಿಗಳಿಗೂ ನನ್ನಲ್ಲಿರುವ ಅಪೂರ್ವ ಪ್ರೇಮದಿಂದ ಸೆಳೆಯಲ್ಪಟ್ಟು ನೀವು ಬಂದಿದ್ದಾಗಿದ್ದರೆ, ನನ್ನನ್ನು ನೋಡಿದುದಾಯಿತಷ್ಟೆ, ಇನ್ನು ಹೊರಡಿರಿ;

**ಅಸ್ವರ್ಗ್ಯಮಯಶಸ್ಯಂ ಚ ಫಲ್ಗು ಕೃಚ್ಛ್ರಂ ಭಯಾವಹಂ ।**
**ಜುಗುಪ್ಸಿತಂ ಚ ಸರ್ವತ್ರ ಹ್ಯೌಪಪತ್ಯಂ ಕುಲಸ್ತ್ರಿಯಾಃ ॥**
**ದುಶ್ಶೀಲೋ ದುರ್ಭಗೋ ವೃದ್ಧೋ ಜಡೋ**
**ರೋಗ್ಯಧನೋಽಪಿ ವಾ ।**
**ಪತಿಃಸ್ತ್ರೀಭಿರ್ನಹಾತವ್ಯೋ ಲೋಕೇಪ್ಸುಭಿರಪಾತಕೀ ॥**

ಕುಲಸ್ತ್ರೀಯರು ಪತಿಗಳಿರಲಿ ಇಲ್ಲದಿರಲಿ ಉಪಪತಿಗಳೊಡನೆ ರಮಿಸುವುದು ಅತ್ಯಂತ ನೀಚಕಾರ್ಯವಾಗಿದೆ; ಅದು ಕಷ್ಟಪ್ರದವೂ ಭಯಾವಹವೂ ಆದುದು. ಅವರಿಗೆ ಸ್ವರ್ಗವೂ ಇಲ್ಲ, ಯಶಸ್ಸೂ ಕಳಂಕಿತವಾಗುತ್ತದೆ; ದೇಶವಿದೇಶಗಳಲ್ಲಿ ಜನರು ನಿಂದೆಯನ್ನೂ ಮಾಡುವರು.

ಪತಿಯು ಪತಿತನು ಮಾತ್ರ ಅಲ್ಲವಾದರೆ, ಅವನು ದುಶ್ಶೀಲನಿರಲಿ, ದುರ್ಭಾಗ್ಯನಿರಲಿ, ವೃದ್ಧನಿರಲಿ, ಅಸಮರ್ಥನಿರಲಿ, ರೋಗಿಯಿರಲಿ, ದರಿದ್ರನಿರಲಿ. ಇಹಪರ ಸುಖಗಳನ್ನು ಬಯಸುವ ಕುಲೀನೆಯು ತನ್ನ ಪತಿಯನ್ನು ಪರಿತ್ಯಾಗ ಮಾಡಬಾರದು” ಎಂದು ಹೇಳಿದನು. ಯಾರ ವೇಣುನಾದವನ್ನು ಕೇಳಿದ ಮಾತ್ರದಿಂದ ಮನೆಬಾಗಿಲುಗಳನ್ನೂ ಗಂಡ-ಮಕ್ಕಳನ್ನೂ ಎಲ್ಲವನ್ನೂ ಬಿಟ್ಟು ಪರವಶರಾಗಿ ಯಾರನ್ನು ಸೇರುವುದಕ್ಕಾಗಿ ಗೋಪಾಂಗನೆಯರು ಬಂದಿದ್ದರೋ ಅಂಥ ಶ್ರೀಕೃಷ್ಣನ ಶ್ರೀಮುಖದಿಂದ ಉಪೇಕ್ಷಾರೂಪವಾದ ಮಾತುಗಳನ್ನು ಕೇಳಿಯೂ ಅವರು ವಿಚಲಿತರಾಗದೇ ಸ್ಥಿರಚಿತ್ತರಾಗಿ ಧೈರ್ಯದಿಂದ ‘ಹೇ

ಪ್ರಭೋ! ಹೇ ಸ್ವಚ್ಛಂದ ಪುರುಷೋತ್ತಮ! ನಾವೆಲ್ಲರೂ ಇಹಲೋಕ-ಪರಲೋಕಗಳ ಸರ್ವಸುಖಕ್ಕೂ ತಿಲತರ್ಪಣವನ್ನು ಬಿಟ್ಟು ನಿನ್ನ ಚರಣಕಮಲಗಳ ಆಶ್ರಯವನ್ನು ಹೊಂದಿದ್ದೇವೆ. ಈ ಸಂಸಾರದಲ್ಲಿ ನಿನ್ನ ಹೊರತು ನಮಗೆ ಬೇರಾರೂ ಗತಿಯಿಲ್ಲ. ಪತಿಸೇವೆಯನ್ನೂ ಪುತ್ರಪಾಲನವನ್ನೂ ನಾವು ಮಾಡುವುದೇ ನಮ್ಮ ಧರ್ಮವೆಂದು ನೀನು ಹೇಳುತ್ತಿರುವುದು ನ್ಯಾಯವೇ ಸರಿ. ಆದರೆ, ಎಲೈ ಧರ್ಮಧುರಂಧರ! ಭರಣ-ಪೋಷಣ ಮಾಡತಕ್ಕವನಿಗೆ ಭರ್ತನೆಂದೂ ರಕ್ಷಣಮಾಡತಕ್ಕವನಿಗೆ ಪತಿಯೆಂದೂ ಹೇಳುತ್ತಾರೆ. ನರಕವನ್ನು ತಪ್ಪಿಸತಕ್ಕವನಿಗೆ ಪುತ್ರನೆಂದೂ ಕರೆಯುವರು. ಶ್ಮಶಾನದಲ್ಲಿಯೂ ಲೋಕಾಂತರಗಳಲ್ಲಿಯೂ ಎಡೆಬಿಡದೆ ನಮ್ಮೊಡನೆ ನಮ್ಮ ಜೀವಕ್ಕಿಂತಲೂ ಹೆಚ್ಚು ಪ್ರಿಯನಾಗಿರುತ್ತಾ ನಮ್ಮನ್ನು ನಿಜವಾಗಿ ರಕ್ಷಿಸತಕ್ಕವನೂ, ನರಕದಿಂದ ಪಾಲಿಸತಕ್ಕವನೂ. ನಮಗೆ, ಹೇ ವಿಶ್ವಂಭರ! ನಿನ್ನ ಹೊರತು ಯಾರಿದ್ದಾರೆ? ಸಮಸ್ತ ಪ್ರಾಣಿಗಳಿಗೂ ನೀನೇ ಆತ್ಮಭೂತನಲ್ಲವೇ? ದೇವ! ನೀನೇ ಎಲ್ಲರಲ್ಲಿಯೂ ಇದ್ದು ನೀನೇ ಎಲ್ಲವೂ ಆಗಿರುವುದರಿಂದ ನಿನ್ನನ್ನು ಸೇವಿಸಿದರೆ ಎಲ್ಲರನ್ನೂ ಸೇವಿಸಿದಂತಾಗುವುದಿಲ್ಲವೇ? ನಿನ್ನ ಮಂದಸ್ಮಿತ ಸುಂದರವಾದ ವದನಾರವಿಂದವನ್ನೂ ಪ್ರಸನ್ನದೃಷ್ಟಿಯನ್ನೂ ಅಮೃತವನ್ನು ತೊಟ್ಟಿಕ್ಕುತ್ತಿರುವ ನಿನ್ನ ಬಿಂಬಾಧರವನ್ನೂ ನೋಡಿಯೂ ನಿನ್ನ ದಿವ್ಯವಾದ ವೇಣುಗಾನವನ್ನು ಕೇಳಿಯೂ ಈ ತ್ರೈಲೋಕ್ಯದಲ್ಲಿ ತನ್ನ ಸದಾಚಾರವನ್ನು ಮೀರದಿರುವವಳಾರು? ಮೋಹಪರವಶರಾದ ಸ್ತ್ರೀಯರ ಮಾತೂ ಹಾಗಿರಲಿ, ನಿನ್ನ ಗಾನಕ್ಕೂ ನಿನ್ನ ರೂಪಕ್ಕೂ ಪಶುಪಕ್ಷಿಮೃಗಾದಿ ಜಂತುಗಳೂ, ಅಚೇತನಗಳಾದ ನದಿ, ವೃಕ್ಷ, ಪರ್ವತಾದಿಗಳೂ ಮೋಹಿಸಿ ಪುಳಕಿತವಾದಂತೆ ಉಲ್ಲಾಸಗೊಂಡಿರುವುದನ್ನು ಕಾಣೆಯಾ? ಕಿಂಕರಿಯರಾದ ನಮ್ಮಲ್ಲಿ ಕರುಣೆಯಿಟ್ಟು ಕಾತರದಿಂದ ಕುದಿಯುತ್ತಿರುವ ನಮ್ಮ ಎದೆಯಲ್ಲಿಯೂ ನಮ್ಮ ಶಿರಸ್ಸುಗಳಲ್ಲಿಯೂ ನಿನ್ನ ಕೋಮಲವಾದ ಶ್ರೀಕರಗಳನ್ನಿಟ್ಟು ತಾಪವನ್ನು ನೀಗಿಸಿ ಅನುಗ್ರಹಮಾಡು!" ಎಂದು ಪಳಪಳನೆ ಕಂಬನಿ ಸುರಿಸುತ್ತಾ ಗದ್ಗದ ಕಂಠದಿಂದ ಅತ್ಯಂತ ದೈನ್ಯೋಕ್ತಿಗಳನ್ನಾಡಿದರು.

ಈ ಮಾತುಗಳಿಂದ ಗೋಪಿಯರ ಇಹಾಮುತ್ರಾರ್ಥಫಲ ಭೋಗವಿರಾಗವನ್ನೂ ಅವರ ನಿತ್ಯಸತ್ಯ ವಸ್ತುವಿನ ನಿಶ್ಚಯವನ್ನೂ ಈಶ್ವರಪ್ರಣಿಧಾನವನ್ನೂ

ಕಾಂತಾಸಕ್ತಿಯ ಮಧುರಭಾವದ ಉತ್ಕಟತೆಯನ್ನೂ ಭಗವಂತನನ್ನು ಹೊಂದು ವುದಕ್ಕೆ ಭಕ್ತನಿಗೂ ಮುಮುಕ್ಷುಜೀವನಿಗೂ ತೀವ್ರತರ ಭಾವದಲ್ಲಿ ಆಗತಕ್ಕ ಹೃದಯದ ಕರುಣಾಮಯ ದ್ರಾವಣವನ್ನೂ ಕೃಷ್ಣನನ್ನೇ ಹೊಂದುವುದಕ್ಕಾಗಿ ಕಾತ್ಯಾಯನೀ ವ್ರತವನ್ನು ನಿಷ್ಠೆಯಿಂದ ನಡೆಸಿದ್ದ ಅವರ ಕಾಮಗಂಧಶೂನ್ಯ ವಾದ ಪರಮಪ್ರೇಮಾಲಾಪವನ್ನೂ ಸುಲಭವಾಗಿ ತಿಳಿಯಬಹುದು.

ಇಷ್ಟು ವ್ಯಗ್ರವಾಗಿಯೂ ಪರಮಾಕುಲರಾಗಿಯೂ ಅತ್ಯಂತ ದೀನರಾಗಿಯೂ ಧರ್ಮವನ್ನೂ ಅರ್ಥವನ್ನೂ ಕಾಮವನ್ನೂ ತಿರಸ್ಕಾರಮಾಡಿ ಬಂದವರಾಗಿಯೂ ಇರುವ ಗೋಪಿಯರ ಪ್ರಾರ್ಥನೆಯನ್ನು ಕೇಳಿ ಕನಿಕರಗೊಂಡು ಪೂರ್ಣಕಾಮನಾದ ಪ್ರಭುವು ವಿಷಯಸುಖಾಪೇಕ್ಷೆಯಿಂದ ವಿಮುಖನಾಗಿದ್ದರೂ ಆ ಯೋಗಮಾಯಾಧೀಶ್ವರನಾದ ನಟರಾಜನು ಅವರ ಆನಂದಕ್ಕಾಗಿ ಅವರ ಇಷ್ಟದಂತೆ ಅವರೊಡಗೂಡಿ ಲೀಲೆಯಿಂದ ಆಟವಾಡುತ್ತಿದ್ದನು. ಆ ಗೋಪಿಯರು ಸುತ್ತಲೂ ನಿಂತು ತನ್ನ ವಿಷಯವಾದ ಕೀರ್ತನೆಗಳನ್ನು ಹಾಡುತ್ತಿರುವಾಗ ಅದಕ್ಕೆ ಸರಿಯಾಗಿ ತಾನೂ ವೇಣುಗಾನ ಮಾಡುತ್ತಿದ್ದನು. ಯಮುನಾ ತೀರದಲ್ಲಿ ಅವರೊಡನೆ ಅನೇಕ ಪ್ರೇಮಚೇಷ್ಟೆಗಳನ್ನು ಮಾಡಿ ಅವರು ಪರಮಾನಂದ ಪ್ರಮತ್ತರಾಗುವಂತೆ ಮಾಡಿದನು. ಸಮಸ್ತ ಲೋಕಕ್ಕೂ ಆನಂದ ಪ್ರದನೂ ಸ್ವತಃ ಪರಮಾನಂದ ಸ್ವರೂಪನೂ ಯೋಗೀಶ್ವರನೂ ಆದ ಶ್ರೀ ಕೃಷ್ಣನು **"ರನ್ತುಂ ಮನಶ್ಚಕ್ರೇ ಯೋಗಮಾಯಾಮುಪಾಶ್ರಿತಃ"** ತನ್ನ ಯೋಗಮಾಯೆಯಿಂದ ಪ್ರತಿಯೊಬ್ಬ ಗೋಪಿಗೂ ಒಬ್ಬ ಕೃಷ್ಣನಾಗಿ ಗಾನ ನರ್ತನಗಳಿಂದ ಕ್ರೀಡಿಸಿದನು. ಪ್ರತಿ ಗೋಪಿಯೂ ಶ್ರೀಕೃಷ್ಣಪರಮಾತ್ಮನ ದಿವ್ಯಸಾನ್ನಿಧ್ಯವನ್ನೂ ಪರಮಪ್ರೇಮವನ್ನೂ ಅನುಭವಿಸಿದಳು. ಪ್ರತಿಯೊಬ್ಬಳೂ ತಾನೇ ಕೃಷ್ಣನ ಪರಮಾನುರಾಗಕ್ಕೆ ಪಾತ್ರಳೆಂದು ಭಾವಿಸಿದಳು. ಪರಮೋತ್ಕಟ ವಾದ ಪ್ರೇಮದಿಂದ ಪ್ರತಿಯೊಬ್ಬಳೂ ಕೃಷ್ಣನಲ್ಲಿ ಏಕವಾಗಿ ಬೆರೆತು ಒಂದಾದಳು–ಇಲ್ಲ–ತಾನೇ ಕೃಷ್ಣಸ್ವರೂಪವೆಂಬುದನ್ನು ಅನುಭವ ಪಡೆದಳು. ಇದೇ, ಪ್ರೇಮದ ಎರಡನೆಯ ಬಗೆಯಾದ ಇಷ್ಟದೇವನ ಮಿಲನರೂಪವಾದ ಅವರ್ಣನೀಯ ಯೋಗಾನಂದ. ಮೊದಲನೆಯ ರಾಗಸುಖವು ಹಣ್ಣಾಗಿ ಈ ಯೋಗ ಸುಖವಾಗುತ್ತದೆ.

ವೃಂದಾವನದ ವ್ರಜಗೋಪೀ ಕೃಷ್ಣರ ಪ್ರಸಿದ್ಧ ರಾಸಲೀಲಾ ಪ್ರಸಂಗವು ಕಾವ್ಯಲೋಕದಲ್ಲಿಯೇ ಅದ್ವಿತೀಯ ಮನೋಹರವಾದುದು. ಶರತ್ಕಾಲ, ಮೋಡಗಳಿಲ್ಲದ ನಿರ್ಮಲವಾದ ಮುಗಿಲು, ಪೂರ್ಣ ಚಂದ್ರಮನ ತಂಪಾದ ಬೆಳದಿಂಗಳು, ಶ್ಯಾಮಸಲಿಲೆಯಾದ ಮಂಜುಳನಿನಾದೆ ಯಮುನೆ, ಕುಸುಮ ಸುವಾಸಿತವೂ ವಿಹಗಕೂಜಿತವೂ ಆದ ಬೃಂದಾವನ – ವನಸ್ಥಲಿ, ಭ್ರಮರ ಝೇಂಕಾರ, ಇವುಗಳ ಮಧ್ಯದಲ್ಲಿ ವಿಶ್ವಮೋಹಿನಿಯಾದ ಮುರಳಿಯನ್ನು ವಾದನಮಾಡುತ್ತಿರುವ ಜಗನ್ಮೋಹನ ಕಿಶೋರ ಕೃಷ್ಣನ ಅಪಾರ ಸೌಂದರ್ಯ. ಚರಾಚರ ಜಗತ್ತಿನ ಸಮಸ್ತ ಸೌಂದರ್ಯವೂ ಒಂದೆಡೆಯಲ್ಲಿ ಒಂದೇ ಸಮಯ ದಲ್ಲಿ ಸಮಗ್ರವಾಗಿ ವಿಕಾಸಗೊಂಡಿದಂತಿದೆ. ಇಂಥಾ ಸ್ವರ್ಗದಲ್ಲಿಯೂ ಅಲಭ್ಯ ವಾದ ಸೌಂದರ್ಯ-ಮಾಧುರ್ಯ ಸಮೃದ್ಧಿಯನ್ನು ಸವಿಯಬಲ್ಲ ಸೃಷ್ಟಿಗೆ ಸೃಷ್ಟಿಯೇ ಪುಳಕಿತವಾಗಿ ಪರವಶತೆಯಿಂದ ಕೃಷ್ಣಾವಿಷ್ಟವಾಗಿರುವಾಗ ಕೃಷ್ಣನ ಕರಕಮಲವನ್ನೇ ಕುಲುಕಿ ವಿಹರಿಸುತ್ತಿದ್ದ ಅನನ್ಯ ಪ್ರೇಮದ ಉತ್ಕಟ ಭಾವು ಕತೆಯ ಸರಳ ಗೋಪಲಲನೆಯರ ಸ್ಥಿತಿಯು ಹೇಗಾಗಿರಬೇಕು !

**ತಮನ್ಯಾಭಾವ ವಿಕಚೈರ್ನೇತ್ರೈಃ ಪ್ರಹಸಿತಾನನಾಃ ।**
**ಪಿಬಂತ್ಯತೃಪ್ತಾ ವನಿತಾಃ ಕೃಷ್ಣಂ ಕೃಷ್ಣಮೃಗೇಕ್ಷಣಾಃ ॥**
**ಮುಖಮಸ್ಯಾಬ್ಜ ಸಂಕಾಶಂ ತೃಷಿತಾ ಗೋಪಕನ್ಯಕಾಃ ।**
**ರತ್ಯಂತರ ಗತಾರಾತ್ರೌ ಪಿಬಂತಿ ರತಿಲಾಲಸಾಃ ॥**

(ಹರಿವಂಶ ಅ. 77)

" ನಗೆಮೊಗದ ಕೃಷ್ಣಸಾರಲೋಚನೆಯರಾದ ಮಿಕ್ಕ ವನಿತೆಯರೆಲ್ಲಾ ಭಾವೋ ತ್ಫುಲ್ಲ ನಯನಗಳಿಂದ ತೃಪ್ತಿಯಿಲ್ಲದವರಾಗಿ ಕೃಷ್ಣನ ಮುಖಮಂಡಲವನ್ನು ಪಾನಮಾಡುತ್ತಿದ್ದರು. ಮತ್ತೊಂದು ಕ್ರೀಡೆಯನ್ನೊಲ್ಲದೆ ರಾತ್ರಿಯೆಲ್ಲಾ ಆ ಕ್ರೀಡಾಲಾಲಸೆಗೆ ಬಾಯಾರಿದ ಗೋಪಕನ್ಯೆಯರು ಆ ಮುಖಕಮಲವನ್ನು ಪಾನಮಾಡಿದರು........".

ಈ ರಾಸಲೀಲಾ ವೃತ್ತಾಂತದ ನಿಜಾರ್ಥವು ಗೂಢವೂ ತಿಳಿಯುವುದಕ್ಕೆ ಕಠಿಣವೂ ಆಗಿದೆ. ಕೃಷ್ಣನಿಗೆ ಜಾರದೋಷವನ್ನು ಹಚ್ಚುವ ರಾಸಪಂಚಾಧ್ಯಾ ಯಿಯು ಕೃಷ್ಣಚಾರಿತ್ರ್ಯದಲ್ಲಿ ದೊಡ್ಡ ಕಳಂಕವೆಂದು ತಟಸ್ಥ ವಿಮರ್ಶಕರ

ಹಾಗೂ ಪರಧರ್ಮಿಗಳ ಆರೋಪವಿದೆ. ಇದಕ್ಕೆ ಅನೇಕ ವಿದ್ವಾಂಸರು ಅನೇಕ ಬಗೆಯಿಂದ ಸಮಾಧಾನ ಹೇಳುತ್ತಾರೆ. ಮಹಾಭಾರತದಲ್ಲಿ ಗೊಲ್ಲಗೋಪಿಯರ ವಿಷಯವೇ ಇಲ್ಲ; ಶಿಶುಪಾಲನ ಕೃಷ್ಣದೂಷಣದಲ್ಲಾಗಲೀ, ವಸ್ತ್ರಾಪಹರಣ ಕಾಲದ ದ್ರೌಪದೀಕೃಷ್ಣಸ್ತವನದಲ್ಲಾಗಲೀ ರಾಸವೃತ್ತಾಂತದ ಸೂಚನೆಯು ಸಹ ಇಲ್ಲ. ವಿಷ್ಣುಪುರಾಣದಲ್ಲಿ ಇದನ್ನು ಪವಿತ್ರಭಾವದಲ್ಲಿ ಚಿತ್ರಿಸಿರುವರು. ಹರಿವಂಶ ದಲ್ಲಿ ಸ್ವಲ್ಪ ವಿಲಾಸತೆಯು ಅಂಕುರಿಸಿದೆ. ಅನಂತರ ಭಾಗವತದಲ್ಲಿ ರಾಸ ವಿಲಾಸದ ರಸಿಕತೆಯು ಬೆಳೆದಿದೆ. ಅನಂತರದಲ್ಲಿ ಬ್ರಹ್ಮವೈವರ್ತಪುರಾಣದಲ್ಲಿ ರಾಸಶ್ರೀಯ ಹೊಳೆಯೇ ಹರಿದುಹೋಗಿದೆ. ಇದೆಲ್ಲಾ ಪುರಾಣಕರ್ತರ ಕಲ್ಪನಾ ವೈಭವವಲ್ಲದೆ ಸತ್ಯವೆಷ್ಟೂ ಇಲ್ಲ. ಒಂದು ವೇಳೆ ಸ್ವಲ್ಪ ಸತ್ಯತೆಯಿದ್ದರೆ ಯುವಕ ಯುವತಿಯರು ಒಟ್ಟುಗೂಡಿ ಕುಣಿಯುವುದು ನಮ್ಮ ಕಾಲದ ನಮ್ಮ ಸಮಾಜದ ನೀತಿಯಲ್ಲಿ ತಪ್ಪೇ ಹೊರತು (ಈಗಲೇ ಯೂರೋಪಿಯನರಲ್ಲಿ ಇದು ದೋಷವಲ್ಲ) ದ್ವಾಪರಾಂತ್ಯದಲ್ಲಿ ಕೃಷ್ಣನ ಕಾಲದ ಸಮಾಜ ದೃಷ್ಟಿಯಲ್ಲಿ ಇದು ದೋಷವಾಗಿರಲಿಲ್ಲ. ಗೋಪಿಯರಿಗಾದರೋ ರಾಸಕ್ರೀಡೆಯು ಈಶ್ವರೋ ಪಾಸನೆಯೇ ಆಗಿ ಭಕ್ತಿಯೆಂದರೆ '**ಸಾ ಪರಾನುರಕ್ತಿರೀಶ್ವರೇ**' ಈಶ್ವರನಲ್ಲಿ ಪರಮಾನುರಾಗವು. ಇದು ಹಲವು ಕಾರಣಗಳಿಂದ ಉಂಟಾಗಬಹುದಾದರೂ ಸೌಂದರ್ಯಪ್ರೇಮದಿಂದುಂಟಾಗುವುದು ಸಹಜವೂ ಸುಲಭವೂ ಬಲವತ್ತರವೂ ಆಗಿವೆ. ಸ್ತ್ರೀಯರಿಗಂತೂ ಕರ್ಮ, ಯೋಗ, ಜ್ಞಾನ, ಸಾಧನಗಳಿಗಿಂತಲೂ ಪ್ರೇಮಸಾಧನವು ಹೆಚ್ಚು ಸುಲಭವೂ ಸ್ವಾಭಾವಿಕವೂ ಜೀವನ ಸಾರ್ಥಕತೆಗೆ ಮುಖ್ಯೋಪಾಯವೂ ಆಗಿದೆ. ಕೃಷ್ಣನ ಅದ್ಭುತ-ಅಮಾನುಷ ಮಹಿಮೆಗಳನ್ನು ನೋಡಿ ಅವನು ಈಶ್ವರನ ಅವತಾರವೇ ಎಂದು ಮನಗಂಡು, ಅವನೇ ತಮ್ಮ ಪತಿಯಾಗಬೇಕೆಂದು ಗೋಪಬಾಲೆಯರು ತಮ್ಮ ಕನ್ಯಾವಸ್ಥೆಯಲ್ಲಿಯೇ ಕಾತ್ಯಾಯನೀ ವ್ರತವನ್ನು ಮಾಡಿದವರು. ಭಗವಂತನಲ್ಲಿ ಸರ್ವಸಮರ್ಪಣೆ ಮಾಡುವುದೇ ನಿಜಭಕ್ತಿಯ ಪ್ರಭಾವವಾದುದರಿಂದ ತಮಗೆ ಇಷ್ಟವಿಲ್ಲದ ಗೋಪ ರನ್ನು ಲಗ್ನವಾದ ಮೇಲೂ ಗೋಪಾಂಗನೆಯರು ಅವಶರಾಗಿ, ಅನನ್ಯ ಪ್ರೇಮ ದಿಂದ ಪ್ರೇರಿತರಾಗಿ ಕೃಷ್ಣಪರಮಾತ್ಮನಲ್ಲಿಯೇ ತಮ್ಮ ಸರ್ವಸ್ವವನ್ನೂ ಒಪ್ಪಿ ಸಿದ್ದರಿಂದ ಅವರ ಕಾಮವೂ ಪೂರ್ಣಕಾಮನನ್ನು ಹೊಂದಿ ಪವಿತ್ರಭಕ್ತಿಯಾಗಿ ಅವರಿಗೆ ಮುಕ್ತಿಯನ್ನೇ ಅನುಗ್ರಹಮಾಡಿತು. ಇನ್ನು ಶ್ರೀಕೃಷ್ಣನ ಪಕ್ಷದಲ್ಲಿ

**"ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ।"** "ಯಾರು ಯಾವ ಭಾವದಿಂದ ಭಜಿಸುತ್ತಾರೋ ಅವರನ್ನು ಅದೇ ಭಾವದಿಂದ ನಾನು ಅನುಗ್ರಹಿಸುತ್ತೇನೆ" ಎನ್ನುವುದು ಅವನ ಪ್ರತಿಜ್ಞೆಯು. ಅದರಂತೆ ಅವನು ದುಷ್ಟರನ್ನು ದ್ವೇಷದಿಂದಲೇ ನಿಗ್ರಹಮಾಡಿ, ಶಿಷ್ಟರನ್ನು ಸ್ನೇಹದಿಂದಲೇ ಅನುಗ್ರಹಮಾಡಿದ್ದಾನೆ. ದೇವಮಾತೆಯಾದ ದಿತಿಯೂ ವಸುದೇವ ದೇವಕಿಯರೂ ಜಗದೀಶ್ವರನೇ ತಮಗೆ ಪುತ್ರನಾಗಬೇಕೆಂದು ಭಜಿಸಿದ್ದರಿಂದ ಅವರನ್ನು ಹಾಗೆಯೇ ಅನುಗ್ರಹಿಸಿದನು. ಭೋಗಾಪೇಕ್ಷಿಗಳಿಗೆ ಭೋಗವನ್ನೂ ಮೋಕ್ಷಾಪೇಕ್ಷಿಗಳಿಗೆ ಮೋಕ್ಷವನ್ನೂ ದಯಪಾಲಿಸುವುದು ಸರ್ವಸಮನಾದ ಪರಮಾತ್ಮನ ಸ್ವಭಾವವೇ ಆಗಿದೆ. ಹೀಗೆಯೇ ಗೋಪಿಯರು ಅವನನ್ನು ಪತಿಯನ್ನಾಗಿಯೇ ಬಯಸಿ ಅದಕ್ಕೆ ತಕ್ಕ ಸಾಧನವನ್ನು ತ್ರಿಕರಣ ಶುದ್ಧಿಯಿಂದಲೂ ಉತ್ಕಟಭಾವದಿಂದಲೂ ಮಾಡಿದ್ದರಿಂದ ಶ್ರೀಕೃಷ್ಣನಿಂದ ಪತಿಭೋಗವನ್ನೇ ಪಡೆದರು. ಆದರೆ ಸಮಾಜ ಧರ್ಮದಂತೆ ಪರಸ್ತ್ರೀ ರತಿಯು ಪುರುಷನಿಗೆ ದೋಷವಲ್ಲವೇ? ಪಾಪವಲ್ಲವೆ? ಎಂದರೆ ಪರಪುರುಷನಿಗೆ ದೋಷವೇ ಹೊರತು ಪರಮಪುರುಷನಾದ ಕೃಷ್ಣನಿಗಲ್ಲ. ಏಕೆಂದರೆ **"ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋಯಥಾ।"** (ಭಾಗ 10-33-30) ಆದರೆ, **"ನೈತತ್ ಸಮಾಚರೇಜ್ಜಾತು ಮನಸಾಪಿಹ್ಯನೀಶ್ವರಃ॥"** (ಭಾಗ 10-33-31) "ಈಶ್ವರನಲ್ಲದವನು ಎಂದೂ ಈ ಬಗೆಯಾದ ಆಚರಣೆಯನ್ನು ಮನಸ್ಸಿನಿಂದಲೂ ಸ್ಮರಿಸಬಾರದು."

ರಾಸಲೀಲಾ ಸಮಯದಲ್ಲಿ ಹೀಗೆ ಶ್ರೀಕೃಷ್ಣನು ತಮ್ಮಲ್ಲಿ ವಿಶೇಷವಾದ ಸಲಿಗೆಯನ್ನೂ ಪ್ರೀತಿಯನ್ನೂ ತೋರಿಸುತ್ತಿರಲು "ಸಂಸಾರದಲ್ಲಿ ನಮ್ಮಂಥ ಭಾಗ್ಯವತಿಯರೂ ಧನ್ಯರೂ ಯಾರಿದ್ದಾರೆ?" ಎಂದು ಗೋಪಿಯರಿಗೆ ಗರ್ವ ಬಂದಿತು.

**ಈಶ್ವರಸ್ಯಾಪಿ ಅಭಿಮಾನದ್ವೇಷಿತ್ವಾತ್ ದೈನ್ಯಪ್ರಿಯತ್ವಾಚ್ಚ॥**
"ಈಶ್ವರನೂ ಕೂಡ ಅಹಂಕಾರವನ್ನು ದ್ವೇಷಿಸುತ್ತಾನೆ; ದೈನ್ಯಗುಣವನ್ನು ಪ್ರೀತಿಸುತ್ತಾನೆ." (ನಾರದ ಭಕ್ತಿಸೂತ್ರ) ಆದಕಾರಣದಿಂದ, ಸೌಂದರ್ಯ ಸೌಭಾಗ್ಯಾದಿಗಳ ಮದದಿಂದ ಗೋಪಿಯರು ಗರ್ವಗೊಂಡಿರುವುದನ್ನು ತಿಳಿದು,

ಆ ಗರ್ವವನ್ನು ಮುರಿದು ಅವರನ್ನು ಅನುಗ್ರಹಿಸುವುದಕ್ಕಾಗಿ ಮಾಯಾವಿಯಾದ ಶ್ರೀ ಕೃಷ್ಣನು '**ತತ್ರೈವಾಂತರಧೀಯತ**' "ಕ್ಷಣಮಾತ್ರದಲ್ಲಿ ಅಲ್ಲಿಯೇ ಅಂತರ್ಧಾನನಾದನು ; ಅಂದರೆ ಅಹಂಕಾರವಿಮೂಢವಾದ ಅವರ ದೃಷ್ಟಿಗೆ ಭಗವಂತನು ಮರೆಯಾದನು.

**ವಿರಹಯೋಗ ಅಥವಾ ವಿಯೋಗ:** ಯೋಗದಲ್ಲಿ ಇಷ್ಟವಸ್ತುವಿನ ಸಾನ್ನಿಧ್ಯವಿರುವುದರಿಂದ ಇಂದ್ರಿಯಗಳಿಗಾಗುವ ಸಹವಾಸ ಸುಖದಲ್ಲಿ ಮನಸ್ಸು ಸಮಾಧಾನ ಹೊಂದಿ ಎಡೆಬಿಡದೇ ಇಷ್ಟಮೂರ್ತಿಯ ಆಕಾರವನ್ನು ಹೊಂದದೇ ಇರಬಹುದು. ಹೀಗಾಗಿ ಈ ಸ್ಥಿತಿಯಲ್ಲಿ ಒಂದು ಬಗೆಯಿಂದ ಇಂದ್ರಿಯಗಳಿಗೆ ಇಷ್ಟದ ಯೋಗವಾಗಿರುವಾಗಲೇ ಉಪಾಸಕನ ಮನಸ್ಸಿಗೆ ವಿಯೋಗವಾಗಿರುತ್ತದೆ. ಪ್ರತ್ಯಕ್ಷ ಗೋಚರವಾದುದರಲ್ಲಿ ಹೆಚ್ಚಿನ ಸತ್ಯತಾಭ್ರಮೆಯು ಇರುವುದರಿಂದ ಮನಸ್ಸಿಗೆ ಅಖಂಡವಾಗಿ ಇಷ್ಟಾಕಾರವಾದ ವೃತ್ತಿಯಾಗದಿರುವ ಕೊರತೆಯು ತಿಳಿಯುವುದಿಲ್ಲ. ಆದರೆ ರಾಗವು ಬೆಳೆದು ಯೋಗವು ಲಭಿಸಿ ವಿಯೋಗವಾದರೆ ಮನಸ್ಸಿಗೆ ಇಷ್ಟದ ಆಕರ್ಷಣೆಯು ಅತಿಶಯ ತೀವ್ರವಾಗುತ್ತದೆ. ಇಂದ್ರಿಯಗಳಿಗೆ ಇಷ್ಟ ಸಹವಾಸದ ಕೊರತೆಯಾದರೆ ಮನಸ್ಸಿಗೆ ಇಷ್ಟ ಚಿಂತನದ ಉತ್ಕಟತೆಯು ಹೆಚ್ಚುತ್ತದೆ. ಆದರಿಂದ ನ್ಯಾಯವಾಗಿ ಅನಂದವೂ ಹೆಚ್ಚಾಗಬೇಕು. ಆದರೆ ಇಂದ್ರಿಯ ಪ್ರತ್ಯಕ್ಷದ ಮೋಹವೇ ಪ್ರಬಲವಾಗಿರುವುದರಿಂದ ಅವಿಚ್ಛಿನ್ನ ಚಿಂತನದಿಂದಾಗುವ ಇಷ್ಟದ ಮಾನಸಿಕ ಪ್ರತ್ಯಕ್ಷದಲ್ಲಿ ಅಷ್ಟು ವಾಸ್ತವತೆ ಪರಿತಾಪಕ್ಕೆ ಕಾರಣವಾಗುತ್ತದೆ. ರಾಗಕ್ಕಿಂತಲೂ ಯೋಗವೂ ಯೋಗಕ್ಕಿಂತಲೂ ವಿರಹವೂ ಹೆಚ್ಚು ತೀವ್ರವಾದ ದಶೆಗಳು.

ಇನ್ನು ಮನಸ್ಸೇ ತತ್ತ್ವಚಿಂತನದಿಂದ ಜಾರಿ ವಿರಹವನ್ನು ಪಡೆದಾಗ ಒಂದು ನಿಮಿಷವೂ ಅದನ್ನು ಸಹಿಸದೆ ಮನಸ್ಸು ಅತ್ಯಂತ ತೀವ್ರವಾಗಿ ಪರಿತಪಿಸುವುದಾದರೆ ಅದು ತತ್ತ್ವಾನುಸಂಧಾನದಲ್ಲಿ ಶೀಘ್ರವಾಗಿಯೇ ನಿಲ್ಲುವ ಶಕ್ತಿಯನ್ನು ಪಡೆಯುತ್ತದೆ. ಆದ್ದರಿಂದ ಪರಮ ವಿರಹಾಸಕ್ತಿಯೂ ರಾಗಾತ್ಮಿಕಾ ಭಕ್ತಿಯಲ್ಲಿ ಒಂದು ಸಾಧನ.

ವಿರಹದಲ್ಲಿ ಭವಿಷ್ಯ ವಿರಹ, ವರ್ತಮಾನ ವಿರಹ ಮತ್ತು ಭೂತವಿರಹವೆಂದು ಮೂರು ಬಗೆ. ಇವೂ ಒಂದಕ್ಕಿಂತಲೂ ಒಂದು ಉತ್ಕೃಷ್ಟವಾದುವು.

ಮೊದಲು ಭಾವೀ ವಿರಹವನ್ನು ನೋಡೋಣ; ‘ ನಾಳೆ ಗುರುನಾಥನು ನಮ್ಮನ್ನು ಬಿಟ್ಟು ಹೊರಟುಹೋಗುವನು ’ ಎಂಬ ಕಲ್ಪನೆ ಬಂದೊಡನೆ ಪ್ರೇಮುಳ ಭಾವದ ಭಕ್ತನಿಗೆ ಹೃದಯವೂ ಕರುಳೂ ಮಿಡಿಮಿಡಿದು ಒಳಗೇ ಆಳದಲ್ಲಿ ವಿಲಕ್ಷಣವಾದೊಂದು ಅಸಹನೀಯವಾದ ಯಾವ ವೇದನೆಯುಂಟಾಗುವುದೋ ಅದೇ ವಿರಹವೇದನ.

ವೃಂದಾವನಕ್ಕೆ ಬಂದಿರುವ ಅಕ್ರೂರನು ನಾಳೆ ಶ್ರೀಕೃಷ್ಣನನ್ನು ಮಥುರೆಗೆ ಕರೆದುಕೊಂಡು ಹೋಗುವನೆಂಬ ವರ್ತಮಾನವನ್ನು ಕೇಳಿದ ಗೋಪಿಯರಲ್ಲಿ ರಾಧೆಯು “ ಅಯ್ಯೋ ! ನಾನೇನು ಮಾಡಲಿ ? ಎಲ್ಲಿಗೆ ಹೋಗಲಿ ? ಆಹಾ ! ಈ ನಿಷ್ಠುರ ಪ್ರಾಣವೂ ಕೂಡ ಹೋಗುವುದಿಲ್ಲವಲ್ಲ ! ಪ್ರಿಯತಮನಿಗಾಗಿ ನಾನು ಯಾವ ದೇಶಕ್ಕೆ ಹೋಗಲಿ ? ಪ್ರಿಯತಮನು ದೂರ ಹೋಗುವುದ ರಿಂದ ಆ ಶೋಕದಿಂದಲೇ ನಾನು ಸಾಯುತ್ತೇನೆ. ಇಲ್ಲವಾದರೆ ಸಮುದ್ರದಲ್ಲಿ ಮುಳುಗುತ್ತೇನೆ ! ” ಎಂದು ಪರಿತಪಿಸಿದಳು.

ಶ್ರೀ ಕೃಷ್ಣ ಗೋಪಿಯರ ರಾಸಲೀಲಾ ಪ್ರಸಂಗದ ಸಂಬಂಧದಲ್ಲಿ ವಿಶ್ವ ವಿಖ್ಯಾತ ಸ್ವಾಮಿ ವಿವೇಕಾನಂದರ ಅಭಿಪ್ರಾಯವು ಅತ್ಯಂತ ಮಹತ್ವದ್ದಾಗಿದೆ :

“ Ah ! that most marvellous passage of his life, the most difficult to understand, and which none ought to attempt to understand until he has become perfectly chaste and pure, that most marvellous expansion of love, allegorized and expressed in that beautiful play at vrindavan, which none can understand but he who has become mad with, and drunk deep of, the cup of love. Who can understand the throes of the love of the Gopis — the very ideal of love, love that wants nothing, love that even does not care for heaven, love that

does not care for anything, in this world or the world to come?

The historian who records this marvellous love of the Gopis is one who was born pure, the eternally pure Suka, the son of Vyasa. So long as there is selfishness in the heart, so long is love of God impossible; it is nothing but shop-keeping.

"Oh! for one, one kiss of those lips. One who has been kissed by Thee, his thirst for Thee increases for ever, all sorrows vanish, and we forget love for everything else but for Thee and Thee alone.' Aye, forget first the love for gold and name and fame, and for this little trumpery world of ours. Then, only then, you will understand the love of the Gopis, too holy to be attempted without giving up everything, too sacred to be understood until the soul has become perfectly pure. People with ideas of sex, and of money, and of fame, bubling up every minute in the heart, daring to criticize and understand the love of the Gopis.

"That is the very essence of Krishna incarnation. Even the Gita, the great philosophy itself does not compare with that madness, for in the Gita the disciple is taught slowly how to walk towards the goal, but here is the madness of enjoy-

ment, the drunkenness of love, where disciples and teachers and teachings and books, and all things have become one, even the ideas of fear and God and heaven. Everything has been thrown away. what remains is the madness of love. It is forgetfulness of everything, and the lover sees nothing in the world except that Krishna, and Krishna alone, when the face of every being becomes a Krishna, when his own face looks like Krishna, when his own soul has become tinged with the Krishna colour. That was the great Krishna."

" ಆ! ಶ್ರೀ ಕೃಷ್ಣಜೀವನದ ಆ ಅತ್ಯಂತ ಅದ್ಭುತ ಮನೋಹರವಾದ ಪ್ರಕರಣವು, ಅದು ಅರ್ಥವಾಗಲು ಅತ್ಯಂತ ಕಠಿಣವಾದುದು, ಮತ್ತು ತಾನು ಅತ್ಯಂತ ಪರಿಶುದ್ಧನೂ ಪವಿತ್ರನೂ ಆದ ಹೊರತು ಯಾವನೂ ಅದನ್ನು ತಿಳಿದುಕೊಳ್ಳಲೂ ಯತ್ನಿಸಬಾರದು ; ಆ ಪರಮಾಶ್ಚರ್ಯಕರವಾದ ಪ್ರೇಮದ ವಿಕಾಸವು! ಅದು ಆ ವೃಂದಾವನದ ಸುಂದರ ಲೀಲೆಯಲ್ಲಿ ರೂಪುಗೊಂಡು ವ್ಯಕ್ತವಾದುದು, ಪ್ರೇಮಪಾತ್ರೆಯಿಂದ ಆಳವಾಗಿ ಪಾನಮಾಡಿ ಉನ್ಮತ್ತನಾದವನ ಹೊರತು ಯಾವನೂ ಅದನ್ನು ತಿಳಿಯಲಾರನು. ಗೋಪಿಯರ ಆ ಪ್ರೇಮದ ಉತ್ಕಟ ವೇದನೆಯನ್ನೂ ಉತ್ಕಂಠಿತತೆಯನ್ನೂ ಯಾರು ಅರಿತುಕೊಳ್ಳಬಲ್ಲರು ? ಆ ಪ್ರೇಮವೋ ಕೇವಲ ಪರಮಾದರ್ಶವಾದ ಪ್ರೇಮ, ಯಾವುದನ್ನೂ ಬಯಸದಂಥ ಪ್ರೇಮ, ಸ್ವರ್ಗವನ್ನು ಸಹ ಲಕ್ಷ್ಯಮಾಡದಿರುವ ಪ್ರೇಮ, ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ಯಾವುದನ್ನೂ ಅಪೇಕ್ಷಿಸದಿರುವಂಥ ಪ್ರೇಮ!

" ಗೋಪಿಯರ ಈ ಅದ್ಭುತವಾದ ಪ್ರೇಮವನ್ನು ಉಲ್ಲೇಖಿಸಿರುವ ಚರಿತ್ರಕಾರರು ಜನ್ಮತಃ ಪರಿಶುದ್ಧರೂ ನಿತ್ಯಪವಿತ್ರರೂ ಆಗಿರುವ ಶುಕರು — ವ್ಯಾಸಪುತ್ರರು ಹೃದಯದಲ್ಲಿ ಸ್ವಾರ್ಥತೆಯು ಇರುವವರೆಗೂ ಪರಮಾತ್ಮನ ಪ್ರೇಮವು ಅಸಾಧ್ಯವೇ ಸರಿ; ಅದು ಅಂಗಡಿ ವ್ಯಾಪಾರದ ಹೊರತು ಬೇರೆ ಅಲ್ಲ.

" ಓ! ಆ ತುಟಿಗಳ ಒಂದೇ ಒಂದು ಮುತ್ತಿಗಾಗಿ. ನಿನ್ನಿಂದ ಮುತ್ತಿಡಲ್ಪಟ್ಟವನ ತೃಷ್ಣೆಯು ನಿನ್ನ ವಿಷಯದಲ್ಲಿ ಎಂದೆಂದೂ ಹೆಚ್ಚೇ ಆಗುತ್ತದೆ. ಎಲ್ಲಾ ದುಃಖಗಳೂ ಮಾಯವಾಗುತ್ತವೆ. ನಿನ್ನ ಹೊರತು, ನಿನ್ನೊಬ್ಬನ ಹೊರತು ಮಿಕ್ಕ ಎಲ್ಲಾ ವಿಷಯಗಳ ಪ್ರೇಮವನ್ನೂ ನಾವು ಮರೆಯುತ್ತೇವೆ.' ಹೌದು, ಹೊನ್ನು, ಹೆಸರು, ಕೀರ್ತಿ ಮತ್ತು ಈ ನಮ್ಮ ಕ್ಷುದ್ರವಾದ ಜಗತ್ತು ಇವುಗಳ ಪ್ರೀತಿಯನ್ನು ಮೊದಲು ಮರೆಯಿರಿ. ಗೋಪಿಯರ ಪ್ರೇಮವನ್ನು ಆಗಲೇ, ಆಗ ಮಾತ್ರ, ಅರ್ಥಮಾಡಿಕೊಳ್ಳಬಹುದು. ಸರ್ವಸ್ವವನ್ನೂ ತ್ಯಾಗಮಾಡದೇ ಯತ್ನಿಸುವುದಕ್ಕೆ ಅದು ಅತೀವ ಪುಣ್ಯಕರವಾದುದು. ಆತ್ಮವು ಪೂರ್ಣ ಪರಿಶುದ್ಧವಾದ ಹೊರತು ಅರ್ಥಮಾಡಿಕೊಳ್ಳಲು ಅದು ತೀರಾ ಪವಿತ್ರವಾದುದು. ಹೆಣ್ಣುಗಂಡಿನ ಭಾವನೆಗಳೂ ಧನ-ಕೀರ್ತಿಗಳ ಭಾವನೆಗಳೂ ಪ್ರತಿನಿಮಿಷವೂ ಬುಗ್ಗೆಯಂತೆ ಒಳಗಿನಿಂದ ಏಳುತ್ತಿರುವಂಥ ಹೃದಯವುಳ್ಳ ಜನರು ಗೋಪಿಯರ ಪ್ರೇಮವನ್ನು ಆಕ್ಷೇಪಿಸುವುದಕ್ಕೂ ಅರ್ಥಮಾಡಿಕೊಳ್ಳುವುದಕ್ಕೂ ಸಾಹಸ ಮಾಡುವುದು. (ಎಂತಹ ಹುಚ್ಚುತನ!)

" ಇದೇ ಕೃಷ್ಣಾವತಾರದ ಕೇವಲ ಸಾರವಾಗಿದೆ. ಸ್ವತಃ ಶ್ರೇಷ್ಠವಾದ ತತ್ತ್ವಶಾಸ್ತ್ರವಾಗಿರುವ ಗೀತೆಯೂ ಕೂಡ ಆ ಪ್ರೇಮೋನ್ಮಾದಕ್ಕೆ ಸರಿಗಟ್ಟಲಾರದು; ಏಕೆಂದರೆ ಗುರಿಯ ಕಡೆ ಸಾವಕಾಶವಾಗಿ ಹೇಗೆ ನಡೆಯುವುದೆಂಬುವುದನ್ನು ಗೀತೆಯು ಶಿಷ್ಯನಿಗೆ ಕಲಿಸುವುದು. ಆದರೆ ಇಲ್ಲಿ ಅನುಭಾವದ ಆನಂದೇ ಇದೆ; ಪ್ರೇಮಾಸ್ವಾದನದ ಮದವಿದೆ; ಅದರಲ್ಲಿ ಶಿಷ್ಯರೂ ಗುರುಗಳೂ ಉಪದೇಶಗಳೂ ಗ್ರಂಥಗಳೂ ಎಲ್ಲಾ ವಸ್ತುಗಳೂ ಮತ್ತು ಭಯ, ದೇವರು, ಸ್ವರ್ಗ ಇವುಗಳ ಭಾವನೆಗಳೂ ಸಹ ಒಂದಾಗಿ ಪರಿಣಮಿಸಿವೆ. ಎಲ್ಲಾ ವಿಷಯಗಳೂ ಹೊರಗಳೆಯಲ್ಪಟ್ಟವೆ ಉಳಿದಿರುವುದೆಂಬುದು ಪ್ರೇಮದ ಹುಚ್ಚು. ಅದು ಸರ್ವಸ್ವದ ಮರವೆಯಾಗಿದೆ; ಮತ್ತು ಪ್ರೇಮಿಯು ಇಡೀ ಜಗತ್ತಿನಲ್ಲಿ ಕೃಷ್ಣನನ್ನು ಹೊರತು, ಕೃಷ್ಣನೊಬ್ಬನನ್ನೇ ಹೊರತು ಮತ್ತೇನನ್ನೂ ಕಾಣನು. ಆಗ ಪ್ರತಿಯೊಂದು ಪ್ರಾಣಿಯ ಮುಖವೂ ಕೃಷ್ಣನಾಗುತ್ತದೆ, ತನ್ನ ಸ್ವಂತ ಮುಖವೇ ಕೃಷ್ಣನಂತೆ ಕಾಣುತ್ತದೆ. ಅವನ ಆತ್ಮಸ್ವರೂಪವೇ ಕೃಷ್ಣವರ್ಣದಿಂದ ರಂಜಿತವಾಗುತ್ತದೆ, ಇದೇ, ಆ ದಿವ್ಯ ಪುರುಷ ಕೃಷ್ಣನ ಮಹದ್ ವ್ಯಕ್ತಿತ್ವವು!"

**ವರ್ತಮಾನ ವಿರಹ:** ಯಮುನಾ ತೀರದಲ್ಲಿ ತನ್ನೊಡನೆ ವಿಹರಿಸುತ್ತಿದ್ದ ಮದನಮೋಹನನು ಹಠಾತ್ತನೆ ಕಣ್ಮರೆಯಾದೊಡನೆ ಯೂಥಪತಿಯನ್ನಗಲಿದ ಹೆಣ್ಣಾನೆಗಳಂತೆ ಗೋಪಿಯರು ಪರಿತಪಿಸಿದರು. ಆ ಕೃಷ್ಣನ ನಡೆನುಡಿಗಳಿಂದಲೂ ಅವನು ತಮ್ಮಲ್ಲಿ ತೋರಿಸುತ್ತಿದ್ದ ಅನುರಾಗಸೂಚಕವಾದ ಮಂದಹಾಸದಿಂದಲೂ ಅವನ ಒಯ್ಯಾರದ ನೋಟಗಳಿಂದಲೂ ಅವನ ಮೃದುಮಧುರ ವಾಕ್ಯಗಳಿಂದಲೂ ಅವನ ಪ್ರೇಮಚೇಷ್ಟೆಗಳಿಂದಲೂ ಪರವಶಹೃದಯರಾಗಿ ಅವನನ್ನೇ ಧ್ಯಾನಿಸುತ್ತಾ ಆ ಭಾವನಾವಿಶೇಷದಿಂದ ತನ್ಮಯತ್ವವನ್ನು ಹೊಂದಿ ತಾವೂ ಆ ಕೃಷ್ಣನ ಚೇಷ್ಟೆಗಳನ್ನೇ ಅನುಕರಿಸತೊಡಗಿದರು. ಅವನಂತೆಯೇ ನುಡಿ, ಅವನಂತೆಯೇ ನಡೆ, ಅವನಂತೆಯೇ ಮುಗುಳ್ನಗೆಯಿಂದ ನಗುವುದು, ಅವನಂತೆಯೇ ಅನುರಾಗವೀಕ್ಷಣದಿಂದ ಒಬ್ಬರನ್ನೊಬ್ಬರು ನೋಡುವುದು, ಸರ್ವಭೂತಗಳ ಅಂತರ್ಯಾಮಿಯಾಗಿ ಎಲ್ಲೆಲ್ಲಿಯೂ ತುಂಬಿರುವ ಅವನನ್ನು ಕಡಿರೇನೆಂದು ಮೃಗ, ಪಕ್ಷಿ, ವೃಕ್ಷಗಳನ್ನೆಲ್ಲಾ ಕೇಳಿ ಅರಸುತ್ತಾ ಹುಚ್ಚರಂತೆ ನಡೆಯುತ್ತಿದ್ದರು.

ರಥದ ಮೇಲೆ ಕುಳಿತು ಮಥುರೆಗೆ ಹೋಗುತ್ತಿರುವ ಶ್ರೀ ಕೃಷ್ಣನನ್ನು ಕಾಣುತ್ತಾ ವ್ರಜಾಂಗನೆಯರು,

**ಏವಂ ಬ್ರುವಾಣಾ ವಿರಹಾತುರಾ ಭೃಶಂ ।**
**ವ್ರಜಸ್ತ್ರಿಯಃ ಕೃಷ್ಣವಿಷಕ್ತ ಮಾನಸಾಃ ॥**
**ವಿಸೃಜ್ಯ ಲಜ್ಜಾಂ ರುರುದುಃ ಸ್ಮ ಸುಸ್ವರಂ ।**
**ಗೋವಿಂದ ದಾಮೋದರ ಮಾಧವೇತಿ ॥**

" ಯಾರ ಮನಸ್ಸು ಶ್ರೀ ಕೃಷ್ಣನಲ್ಲಿಯೇ ಅತ್ಯಂತ ಆಸಕ್ತವಾಗಿದೆಯೋ ಆ ವ್ರಜಸ್ತ್ರೀಯರು ಮುಂದಾಗುವ ವಿರಹದುಃಖವನ್ನು ಸ್ಮರಣಮಾಡಿಕೊಂಡು ಎದೆ ಕರಗಿ ಬಗೆಬಗೆಯ ಕರುಣಾಜನಕ ಸ್ವರಗಳಿಂದ ಲೋಕಲಜ್ಜೆಯನ್ನೂ ತೊರೆದು ಉಚ್ಚವಾಗಿ ಹಾ ಗೋವಿಂದ! ಹಾ ದಾಮೋದರ !! ಹಾ ಮಾಧವ !!! ಎಂದು ಕೂಗಿ ಕೂಗಿ ಹಂಬಲಿಸಿ ರೋದನಮಾಡುತ್ತಿದ್ದರು."

ನಾರದ ಭಕ್ತಿಸೂತ್ರದಲ್ಲಿ,

**ಕಂಠಾವರೋಧ ರೋಮಾಂಚಾಶ್ರುಭಿಃ ಪರಸ್ಪರಂ ।**
**ಲಪಮಾನಾಃ ಪಾವಯಂತಿ ಕುಲಾನಿ ಪೃಥಿವೀಂ ಚ ॥**

"ಗದ್ಗದ ಸ್ವರದಿಂದ ಕಟ್ಟಿಹೋದ ಸ್ವರವುಳ್ಳವರಾಗಿಯೂ ಪ್ರೇಮಭರದಿಂದ ಮೈಮೇಲಿನ ರೋಮಗಳು ಎದ್ದು ನಿಲ್ಲುವುದಾಗಿಯೂ ಪ್ರೇಮದಿಂದ ಕಂಬನಿ ಸುರಿಸುತ್ತಲೂ ಆನಂದದಿಂದ ಒಬ್ಬರಿಗೊಬ್ಬರು ಪರಮಾತ್ಮನ ಮಹಿಮೆಯನ್ನು ಕೊಂಡಾಡುತ್ತಲೂ ಇರುವ ಮಹಾತ್ಮರು ತಮ್ಮ ವಂಶಗಳನ್ನೂ ಲೋಕವನ್ನೂ ಪಾವನವನ್ನಾಗಿ ಮಾಡುತ್ತಾರೆ" ಎಂದು ಹೇಳಿದ್ದಾರೆ.

ಭಗವಾನ್ ವೇದವ್ಯಾಸರು ಹೇಳಿರುವುದೇನೆಂದರೆ,

**ತದಶ್ಮಸಾರಂ ಹೃದಯಂ ಬತೇದಂ ।**
**ಯದ್‌ಗೃಹ್ಯಮಾಣೈರ್ಹರಿನಾಮಧೇಯೈಃ ॥**
**ನ ವಿಕ್ರಿಯೇತಾಥ ಯದಾ ವಿಕಾರೋ ।**
**ನೇತ್ರೇ ಜಲಂ ಗಾತ್ರರುಹೇಷು ಹರ್ಷಃ ॥**

"ಹರಿನಾಮಸ್ಮರಣ ಮಾಡುವ ಮಾತ್ರಕ್ಕೇ ಯಾರ ಕಣ್ಣುಗಳಲ್ಲಿ ನೀರು ತುಂಬಿ ಬರುವುದಿಲ್ಲವೋ, ಶರೀರದಲ್ಲಿ ರೋಮಾಂಚವಾಗುವುದಿಲ್ಲವೋ ಮತ್ತು ಹೃದಯದಲ್ಲಿ ಯಾವ ಪ್ರಕಾರವಾದರೂ ಸಾತ್ತ್ವಿಕವಾದ ವಿಕಾರವಾಗುವುದಿಲ್ಲವೋ ಅಂಥ ಪುರುಷನ ಹೃದಯವು ಕೇವಲ ಪಾಷಾಣಸದೃಶವೂ ವಜ್ರಸದೃಶವೂ ಇರುವುದೆಂದು ತಿಳಿಯಬೇಕು."

**ಭೂತ ವಿರಹ:** ಇಷ್ಟಮೂರ್ತಿಯ ವಿರಹವಾಗಿಬಿಟ್ಟಿದೆ. ಅವನ ದರ್ಶನವು ಪುನಃ ಯಾವಾಗ ಆಗುವುದೋ! ಎಂದಾದರೂ ಆಗುವುದೋ ಇಲ್ಲವೋ! ಆಗದೇನೂ ಇರಬಹುದು; ಆದರೂ ಆಗಬಹುದು! ಇದರಲ್ಲಿ ಈ ಬಗೆಯ ಆಶೆ-ನಿರಾಶೆಗಳ ಸಮ್ಮಿಶ್ರಣವಿದೆ. ಪ್ರಿಯತಮನ ದರ್ಶನವು ಪುನಃ ಮತ್ತೆಂದಿಗೂ ಆಗುವುದೇ ಇಲ್ಲವೆಂದು ನಿಶ್ಚಯವಾದರೆ ಜೀವನವು ವ್ಯರ್ಥವೆಂದು ದೇಹವು ಆ ಕ್ಷಣವೇ ಭಸ್ಮವಾಗಲಿ ಎನಿಸುತ್ತದೆ. ಪತಿಯೊಡನೆ ಸಹಗಮನಕ್ಕೆ ಉತ್ಸಾಹದಿಂದ ಹೋಗುತ್ತಿದ್ದ ಸಾಧ್ವೀಮಣಿಯರ ಪರಮ ವಿರಹಾಸಕ್ತಿಯ ಪರಿಣಾಮವೇ ಇದು. ಕೆಲವು ಸಾಧ್ವೀಶಿರೋಮಣಿಗಳು ಪತಿವಿಯೋಗದ ವಾರ್ತೆಯನ್ನು ಕೇಳಿದೊಡನೆಯೇ, ಪ್ರಾಯಶಃ ಆ ಮಾತು ಮುಗಿಯುವುದರೊಳಗೇ ಪರಮ ವಿರಹಾವೇಶದ ತೀವ್ರತಮವಾದ ಭಾವಾವೇ

ಗದ (Shock) ನಿರ್ಘಾತದಿಂದ ಹೃದಯಸ್ತಂಭನವಾಗಿ ಮೃತರಾಗಿದ್ದಾರೆ. ತಮ್ಮ ವಿಶ್ವಪ್ರೇಮದಿಂದ ಬಹಳಮಟ್ಟಿಗೆ ವಿದೇಶಗಳ ಜನರ ಹೃದಯವನ್ನು ಕೂಡ ಅಪಹಾರವಾಡಿದ್ದ ಮಹಾತ್ಮಾ ಗಾಂಧೀಜಿಯವರ ದುರಂತ ಮರಣದ ವರ್ತಮಾನವನ್ನು ಕೇಳುತ್ತಿರುವಾಗಲೇ ಅಲ್ಲಲ್ಲಿ ಕೆಲವು ಅತಿಶಯ ಭಾವನಾ ವೇಗ ಸ್ವಭಾವವುಳ್ಳ ಪ್ರೇಮಿಗಳು ಆ ಪರಮವಿರಹ ಭಾವನಾಘಾತದಿಂದ ಹೃದಯಸ್ಫುರಣವು ಹಠಾತ್ತನೆ ಸ್ತಬ್ಧವಾಗುವುದರಿಂದ ಸ್ವರ್ಗಸ್ಥರಾಗಿದ್ದಾರೆಂದು ವರ್ತಮಾನ ಪತ್ರಿಕೆಗಳಿಂದ ಕೇಳಿದ್ದೇವೆ.

ಆದ್ದರಿಂದ ವಿರಹಾಸಕ್ತಿಯು ವಿಚಿತ್ರವೂ ಘೋರವೂ ಆದುದು. ವಿರಹಿಣಿಗೂ ವಿರಹಿಗೂ ಎಡೆಬಿಡದ ಚಿಂತೆಯೂ ಅದರಿಂದ ನಿದ್ರೆಯೇ ಬಾರದೇ ಜಾಗರಣೆಯೂ ಮೋಹಾವೇಶವೂ ಉದ್ವೇಗವೂ ಪ್ರಲಾಪವೂ ಉನ್ಮಾದವೂ (ಹುಚ್ಚೂ) ಶರೀರದ ಕೃಶತೆಯೂ ಮಲಿನತೆಯೂ ವ್ಯಾಧಿಯೂ ಮೃತ್ಯುವೂ ಉಂಟಾಗುವುವು.

ಕೃಷ್ಣನು ಮಧುರೆಗೆ ಹೋದಮೇಲೆ ರಾಧೆಯು ತನ್ನ ಪ್ರಿಯಸಖಿಗೆ ಹೇಳಿಕೊಳ್ಳುವುದೇನೆಂದರೆ,

**ಯಾಃ ಪಶ್ಯಂತಿ ಪ್ರಿಯಂ ಸ್ವಪ್ನೇ ಧನ್ಯಾಸ್ತಾಃ ಸಖಿ ಯೋಷಿತಃ ।**
**ಅಸ್ಮಾಕಂತು ಗತೇ ಕೃಷ್ಣೇ ಗತಾ ನಿದ್ರಾಪಿ ವೈರಿಣೀ ॥**

(ಪದ್ಯಾವಲೀ)

“ ಪ್ರಿಯ ಸಖಿ ! ತಮ್ಮ ಪ್ರಿಯತಮನ ದರ್ಶನವನ್ನು ಸ್ವಪ್ನದಲ್ಲಿಯಾದರೂ ಹೊಂದುವ ಕಾಮಿನಿಯರೇ ಧನ್ಯರು ! ದುಃಖಿನಿಯಾದ ನನ್ನ ಭಾಗ್ಯಕ್ಕೆ ಆ ಸುಖವು ಕೂಡ ಲಭ್ಯವಿಲ್ಲ. ನನ್ನ ವೈರಿಣಿಯಾದ ನಿದ್ರೆಯು ಕೃಷ್ಣನ ಜೊತೆಗೂಡಿಯೇ ಮಧುರೆಗೇ ಹೋಗಿದೆ. ಅದು ನನ್ನ ಕಡೆಗೆ ಮರಳುವುದೋ ಇಲ್ಲವೋ ! ”

ಈ ವಿರಹಯೋಗದ ಬಗೆಬಗೆಯ ಅವಸ್ಥೆಗಳು ರಾಮಾಯಣದಲ್ಲಿ ವಿರಹವ್ಯಥೆಯನ್ನು ಅನುಭವಿಸುವ ಸೀತಾರಾಮರ ನಡೆನುಡಿಗಳಲ್ಲಿ ಉಜ್ಜ್ವಲವಾಗಿ ಬಂದಿವೆ.

ಉದ್ಧವನು ವೃಂದಾವನದಿಂದ ಮಥುರೆಗೆ ಹಿಂದಿರುಗಿ ಶ್ರೀ ಕೃಷ್ಣನಿಗೆ ರಾಧೆಯ ಪರಮವಿರಹಾಸಕ್ತಿಯ ಉನ್ಮಾದಾವಸ್ಥೆಯನ್ನು ವರ್ಣಿಸುತ್ತಾ ಹೇಳುವುದೇನೆಂದರೆ,

**ಭ್ರಮತಿ ಭವನಗರ್ಭೇ ನಿರ್ನಿಮಿತ್ತಂ ಹಸಂತೀ |**
**ಪ್ರಥಯತಿ ತವವಾರ್ತಾಂ ಚೇತನಾಚೇತನೇಷು ||**
**ಲುಠತಿ ಚ ಭುವಿ ರಾಧಾ ಕಂಪಿತಾಂಗೀ ಮುರಾರೇ !**
**ವಿಷಮ ವಿರಹ ಖೇದೋದ್ಗಾರಿ ವಿಭ್ರಾಂತ ಚಿತ್ತಾ ||**

" ಹೇ ಕೃಷ್ಣ ! ರಾಧೆಯ ಅವಸ್ಥೆಯನ್ನು ಏನು ಕೇಳುತ್ತಿ, ಆಕೆಯ ದಶೆಯು ವಿಚಿತ್ರವಾಗಿದೆ. ಮನೆಯೊಳಗೇ ಸುಮ್ಮನೇ ಸುತ್ತುತ್ತಿರುತ್ತಾಳೆ. ಕಾರಣ ವಿಲ್ಲದೆ ತನ್ನಷ್ಟಕ್ಕೆ ತಾನೇ ನಗುತ್ತಾಳೆ. ಚೇತನಾಚೇತನಗಳೆಂಬ ವಿವೇಚನೆಯೇ ಇಲ್ಲದೆ ಪ್ರಾಣಿಗಳ ಮುಂದೂ, ಪರ್ವತ-ವೃಕ್ಷಾದಿಗಳ ಮುಂದೂ ನಿನ್ನ ಸಂಬಂಧ ವಾದ ವಾರ್ತೆಯ ಉದ್ಗಾರವನ್ನೇ ತೆಗೆಯುತ್ತಾಳೆ. ಒಂದು ಸಲ ರಾಧೆಯು ಧೂಳಿಯಲ್ಲಿ ಉರುಳುತ್ತಾಳೆ; ಒಂದೊಂದು ಸಲ ಥರಥರ ನಡುಗುತ್ತಾಳೆ. ಹೇ ಮುರಾರೇ! ನಾನು ಏನು ಹೇಳಲಿ! ಆ ಚಂದ್ರಮುಖಿಯಾದ ರಾಧೆಯು ನಿನ್ನ ಸಂಬಂಧವಾದ ವಿಷಮ ವಿರಹದುಃಖದಿಂದ ವಿಭ್ರಾಂತಳಾಗಿ (ಹುಚ್ಚಳಂತೆ) ವಿಚಿತ್ರ ಚೇಷ್ಟೆಗಳನ್ನು ಮಾಡುತ್ತಾಳೆ."

ಇದರಲ್ಲಿ ಕೊನೆಯ ಅವಸ್ಥೆಯು ಮೃತ್ಯುಸಮಾನವಾದುದು.

ಧ್ಯಾನಕಾಲದಲ್ಲಿ ಅನುಸಂಧಾನ ಬಲದಿಂದ ಉಪಾಸ್ಯಮೂರ್ತಿಯೇ ತಾನೆಂಬ ಅಥವಾ ಸಚ್ಚಿದಾನಂದ ಸ್ವರೂಪನೇ ತಾನೆಂಬ ದೃಢಪ್ರಜ್ಞೆಯು ಇದ್ದರೂ ವ್ಯವಹಾರ ಕಾಲದಲ್ಲಿ – ಅಭ್ಯಾಸದ ಬಲವು ಸಾಲದೆಯೂ ಅಧ್ಯಾಸದ ಫಲವಾಗಿಯೂ – ತಾನು ಬೇರೆ ಉಪಾಸ್ಯವು ಬೇರೆ ಎಂಬ ತಪ್ಪುಭಾವನೆಯು ತಲೆಯೆತ್ತಿದೊಡನೆಯೇ ವಿರಹವುಂಟಾಗುತ್ತದೆ. ವಿವೇಕಿಯೂ ಅನುರಾಗಿಯೂ ಈ ವಿರಹವೃತ್ತಿಯನ್ನು ಸಹಿಸಬಾರದು. ಇದರಿಂದ ಅಸಹನೀಯವಾದ ಪರಿ ತಾಪವುಂಟಾಗುವುದೇ ಕಲ್ಯಾಣಕರವಾದುದು. ಏಕೆಂದರೆ, ವಿರಹಜನ್ಯ ಪರಿ ತಾಪದಲ್ಲಿಯೇ ಪುನರ್ಮಿಲನ ಯೋಗದ ಆನಂದವು ಬೀಜಭೂತವಾಗಿದೆ. ಪರಿ ತಾಪವಾಗದಿದ್ದರೆ ವಿರಹವೇ ಸ್ಥಿರಭಾವನಾಗಬಹುದು. '**ದೇಹೋಽಹಂ**'

ದೇಹವೇ ನಾನು ಎನ್ನುವ ಭಾವ ಸಂಸಾರ ಭಾವ; **'ಜೀವೋಽಹಂ'** ಜೀವನೇ ನಾನು ಎನ್ನುವ ಭಾವವೇ ವಿಚಾರಭಾವ; **'ದೇವೋಽಹಂ' 'ಶಿವೋಽಹಂ' 'ಬ್ರಹ್ಮಾಹಂ'** ದೇವನೇ ನಾನು, ಶಿವನೇ ನಾನು, ಬ್ರಹ್ಮವೇ ನಾನು ಎಂಬ ಜ್ಞಾನವೇ ತತ್ತ್ವಾನುಭಾವ. **'ದಾಸೋಽಹಂ' 'ಭಕ್ತೋಽಹಂ'** ಮೊದಲಾದ ಭಾವಗಳೇ ಸಾಧನಭಾವಗಳು. ವಿದ್ಯಾಪ್ರಕೃತಿಯಲ್ಲಿ ಅಧ್ಯಾಸ ಹೊಂದುವ ಸಾಧಕನಾದ ಭಕ್ತನೇ ರಾಧೆ. ವಿದ್ಯಾವಿದ್ಯೆಗಳನ್ನು ಮೀರಿರುವ ಸಚ್ಚಿದಾನಂದ ಪರತತ್ತ್ವವೇ ಪರಮಪುರುಷನಾದ ಶ್ರೀಕೃಷ್ಣ; ಅವನೇ ಮಹಾತ್ಮನಾದ ಸದ್ಗುರು. ಪರಮಾನುರಾಗದ ಪ್ರಭಾವದಿಂದ ರಾಧೆಯಾಗುವ ಪುಣ್ಯಾತ್ಮನಾದ ಭಕ್ತನು ಧ್ಯಾನಯೋಗದ ಬಲದಿಂದ ಕೃಷ್ಣಸಂಯೋಗವನ್ನು ಪಡೆದು ಸಚ್ಚಿದಾನಂದ ಕೃಷ್ಣಗುರುವಿನಲ್ಲಿ ಒಂದಾಗುತ್ತಾನೆ. ಅವನೇ ತಾನೂ, ತಾನೇ ಅವನೂ. ತಾನೇತಾನೂ ಆಗುತ್ತಾನೆ. ಆ ಐಕ್ಯಾನುಭವವು ದೃಢವಾಗಿ ಸ್ಥಿತಪ್ರಜ್ಞನಾಗದಿರುವಾಗ ವ್ಯವಹಾರಸಮಯದಲ್ಲಿ ಭಿನ್ನಭಾವದಿಂದ ತಾನು ರಾಧೆಯೆಂದು ವೃತ್ತಿಗಳು ಬಂದರೆ ಪರಮ ವಿರಹಾಸಕ್ತಿಯೂ ಪರಿತಾಪವೂ ಉಂಟಾಗಬೇಕು. ಅದು ಅತ್ಯಂತ ಉತ್ಕಟವಾದೊಡನೆಯೇ — ಗೋಪಿಯರ ವಿರಹೋನ್ಮಾದದಿಂದ ಪ್ರಮಾದವಾಗದಿರಲು ಶ್ರೀ ಕೃಷ್ಣನು ಪುನಃ ಹಠಾತ್ತನೆ ಅವರ ಮಧ್ಯದಲ್ಲಿ ಮೈದೋರಿ ಪ್ರಮೋದಗೊಳಿಸಿದಂತೆ — ಶ್ರೀಕೃಷ್ಣ ಸಮಾಗಮವು ಆಗಿಯೇ ಆಗುವುದು.

**ಇತಿ ಗೋಪೀ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ ।**
**ರುರುದುಸ್ಸುಸ್ವರಂ ರಾಜನ್ ಕೃಷ್ಣದರ್ಶನ ಲಾಲಸಃ ॥**
**ತಾಸಾಮಾವಿರ ಭೂಚ್ಛೌರಿಃ ಸ್ಮಯಮಾನ ಮುಖಾಂಬುಜಃ ।**
**ಪೀತಾಂಬರ ಧರಸ್ಸ್ರಗ್ವೀ ಸಾಕ್ಷಾನ್ಮನ್ಮಥ ಮನ್ಮಥಃ ॥**

"ಎಲೈ ರಾಜನೆ! ಕೃಷ್ಣನ ದರ್ಶನವಾಗಬೇಕೆಂಬ ಲಾಲಸೆಯುಳ್ಳ ಗೋಪಿಯರು ಚಿತ್ರವಿಚಿತ್ರವಾಗಿ ಗಾನಮಾಡುತ್ತಾ ಪ್ರಲಾಪಮಾಡುತ್ತಾ ಸುಸ್ವರದಿಂದ ಅಳುತ್ತಾ ಇರಲು, ಪೀತಾಂಬರ ಮುಕ್ತಾಹಾರಗಳನ್ನು ಧರಿಸಿ ಮಂದಹಾಸ ಮನೋಹರವಾದ ಮುಖಕಮಲದಿಂದ ಪ್ರತ್ಯಕ್ಷ ಮನ್ಮಥನಿಗೂ ಮನ್ಮಥನಾಗಿ ಶೋಭಿಸುತ್ತಿದ್ದ ಶೌರಿಯು ಆ ಗೋಪಿಯರ ಮಧ್ಯದಲ್ಲಿ ಆವಿರ್ಭವಿಸಿದನು."

ಸರ್ವರ ವಿಶ್ವಾಸಕ್ಕಾಗಿ ಸಹಸ್ರಾರು ವರ್ಷಗಳಿಂದ ಲೋಕವಿಶ್ವಾಸವನ್ನು ಗಳಿಸಿರುವ ಭಾಗವತಾದಿ ಗ್ರಂಥಗಳಲ್ಲಿರುವ ಮಹಾವ್ಯಕ್ತಿಗಳ ಜೀವನ-ಸಾಧನ ದೃಷ್ಟಾಂತಗಳನ್ನು ತೆಗೆದುಕೊಳ್ಳುವುದೇ ಹೊರತು ದ್ವಾಪರಯುಗದಿಂದ ಇಂದಿನ ವರೆಗೆ ರಾಧಾಕೃಷ್ಣರು ಜಗನ್ನಾಟಕರಂಗದಲ್ಲಿ ಮತ್ತೆ ಬಂದಿಲ್ಲವೆಂದೂ ಅಲ್ಲ; ಎಲ್ಲಿಯೂ ಇಂದಿಲ್ಲವೆಂದೂ ಅಲ್ಲ. ವಿಶ್ವನಾಟಕ ಮುಂದಿರುವ ಎಲ್ಲಾ ದೇಶ ಎಲ್ಲಾ ಕಾಲಗಳಲ್ಲಿಯೂ ರಾಧಾಕೃಷ್ಣರ ಕಣ್ಣುಮುಚ್ಚಾಲೆಯಾಟವೂ ರಾಸ ಲೀಲೆಯೂ ಒಂದಿಲ್ಲೊಂದು ರೂಪದಿಂದಲೂ ಹಲವು ರೂಪಗಳಿಂದಲೂ ವಿಶ್ವ ರೂಪದಿಂದಲೂ ನಡೆದೇ ಇವೆ. ರಾಧಾಕೃಷ್ಣರೂ ಅವರ ಲೀಲೆಯೂ ಸನಾತನ ವಾದ ತತ್ತ್ವಗಳ ಪ್ರತೀಕವಾಗಿವೆ. ಆಧ್ಯಾತ್ಮ ಪ್ರಪಂಚದಲ್ಲಿಯೂ ಸಾಧನ ಪಥದಲ್ಲಿಯೂ ಇಂದಿಗೂ ನಾವು ತತ್ತ್ವದೃಷ್ಟಿಯಿಂದ ನಿಜವಾದ ರಾಧಾಕೃಷ್ಣ ರನ್ನು ಅಲ್ಲಲ್ಲಿ ಕಾಣಬಹುದು, ಕಾಣುತ್ತಿದ್ದೇವೆ. ಅವರನ್ನು ಗುರುತಿಸಿ ಗೌರ ವಿಸತಕ್ಕಂಥ ಪುಣ್ಯಸಂಸ್ಕಾರವೂ, ಸಾಧನಶಕ್ತಿಯೂ, ನಿರ್ಮತ್ಸರ ಭಾವವೂ, ನಿರ್ಮಲ ದೃಷ್ಟಿಯೂ ಮಾತ್ರ ಇದ್ದರೆ ಇಂದಿಗೂ ನಾವು ರಾಧಾಕೃಷ್ಣರ ಸಂದ ರ್ಶನವನ್ನು ಪಡೆದು ಅನುಭವಿಸಬಹುದು. ಆದರೆ ಅಹಂಕಾರ, ಅಶ್ರದ್ಧೆ, ಅವಿಶ್ವಾಸ, ಅಸೂಯೆ, ನಾಸ್ತಿಕತೆ, ಸಂಶಯಭಾವನೆ, ಕುಸಂಸ್ಕೃತಿ, ಸ್ವಪ್ರತಿ ಷ್ಠಾಭಿಲಾಷೆ ಇತ್ಯಾದಿ ಗುಣಗಳು ತುಂಬಿ ನೋಟವನ್ನು ಮುಸುಕಿರುವಾಗ ನಮ್ಮಲ್ಲಿಯೇ ಇರುವ, ನಮ್ಮವರೇ ಆಗಿರುವ ರಾಧಾಕೃಷ್ಣರೂ ನಮಗೆ ಕಾಣಿ ಸುವುದಿಲ್ಲವೆಂದರೆ ಆಶ್ಚರ್ಯವಲ್ಲ

9. ವಾತ್ಸಲ್ಯಾಸಕ್ತಿ: ತಾಯಿಗೆ ತನ್ನ ವತ್ಸ-ವತ್ಸಲೆಯರಲ್ಲಿರುವ ನಿರ್ಮಲವೂ ಕೋಮಲವೂ ಮೃದುಮಧುರವೂ ಆದ ಪ್ರೇಮವೇ ವಾತ್ಸಲ್ಯ ವೆನಿಸುತ್ತದೆ. ಅಂತು ಕಿರಿಯರನ್ನೂ ಆಶ್ರಿತರನ್ನೂ ಲಾಲನೆ ಪಾಲನೆ ಮಾಡುವ ಕರ್ತವ್ಯವುಳ್ಳ ಸಂರಕ್ಷಕಭಾವದ ಪ್ರೇಮವೇ ವಾತ್ಸಲ್ಯ. ಯಾವಾಗಲೂ ತಾಯಿಯ ಪ್ರೇಮವೇ ವಾತ್ಸಲ್ಯವೆನ್ನಿಸುತ್ತದೆ.

ಪತ್ನೀಪ್ರೇಮವು ತರುಣಿಯ ಪ್ರೇಮ; ಮಾತೃಪ್ರೇಮವು ಪ್ರೌಢೆಯ ಪ್ರೇಮ. ತನಯಳ ಒಲುಮೆಯು ಕೋಮಲ ಲತೆಯಂತೆ ಆಶ್ರಯಜಾತೆ; ಜನನಿಯ ನಲ್ಮೆಯು ರಸಾಲ ವೃಕ್ಷದಂತೆ ಆಶ್ರಯದಾತೆ. ಜಾಯೆಯ ಪ್ರೀತಿಯು

ಕಲ್ಪಲತೆಯುಂತಾದರೆ ತಾಯಿಯ ಪ್ರೀತಿಯು ಕಲ್ಪವೃಕ್ಷದಂತೆ. ತರುಣಿಯೇ ವಯಸ್ಸಿನಲ್ಲಿಯೂ ಅನುಭವದಲ್ಲಿಯೂ ಬೆಳೆದು ಪ್ರೌಢಳಾಗುವಂತೆ ಪತ್ನೀ ಪ್ರೇಮವೇ ಬೆಳೆದು ಗಂಭೀರವಾಗಿಯೂ ವಿಶಾಲವಾಗಿಯೂ ಉದಾತ್ತವಾಗಿಯೂ ಸತ್ಸಂಸ್ಕೃತಿಯ ಗರ್ಭಧಾರಿಣಿಯಾಗಿಯೂ ಮಾತೃಪ್ರೇಮವಾಗುತ್ತದೆ. ಕಲ್ಪ ಲತೆಯೇ ಬೆಳೆದು ಬಲಿತು ಕಲ್ಪವೃಕ್ಷವಾಗಿ ಪರಮಾರ್ಥಕಲ್ಪವಾದ ಅಮೃತ ಫಲವನ್ನು ಕೊಡುತ್ತದೆ. ಹೀಗೆ ಮಧುರಮಯವಾದ ಕಾಂತಾಸಕ್ತಿಯೇ ತಪ ಸ್ಸಾಧನೆಯಿಂದ ಪಕ್ವವಾಗಿ, ಪವಿತ್ರವಾಗಿ ಮಧುರತರವಾದ ವಾತ್ಸಲ್ಯಾಸಕ್ತಿ ಯಾಗುತ್ತದೆ.

ಜೀವರ ಹೃದಯದಲ್ಲಿ ಈಶ್ವರನಿಂದ ಪ್ರೇರಿಸಲ್ಪಟ್ಟ ಸೃಷ್ಟಿನಿಮಿತ್ತವಾದ ಕಾಮದ ಮಹಾವೇಗವು ದಾಂಪತ್ಯಜೀವನದ ತಾರುಣ್ಯದಲ್ಲಿ ಸಂತಾನೋತ್ಪತ್ತಿ ಯಿಂದ ಸಾರ್ಥಕವಾದ ನಂತರ ಮಕ್ಕಳನ್ನು ತಾಯಿಯ ಪೋಷಕ ಮಮತೆ ಯಿಂದ ಪ್ರೀತಿಸುತ್ತಾ ಬೆಳೆದ ಪತ್ನಿಯ ವಾತ್ಸಲ್ಯಭಾವವು ತನುಮನಗಳ (ಪ್ರೇಮದ) ಪ್ರೌಢಾವಸ್ಥೆಯಲ್ಲಿ ಪತಿಯನ್ನೂ ವಾತ್ಸಲ್ಯಭಾವದಿಂದಲೇ ಪ್ರೀತಿಸಿ ಪೋಷಿಸುವ ಪಕ್ವವಾದ ಪ್ರವೃತ್ತಿಯನ್ನು ಪಡೆಯುತ್ತದೆ ಭಗವದ್ಭಕ್ತಿಯಲ್ಲಿಯೂ ಹೀಗೆಯೇ ಕಾಂತಾಸಕ್ತಿಯು ಹಣ್ಣಾಗಿ ವಾತ್ಸಲ್ಯಾಸಕ್ತಿಯಾಗುತ್ತದೆ. ವಿರಹಾ ಸಕ್ತಿಯಾದರೋ ಕಾಂತಾಸಕ್ತಿಯ ಅನಿವಾರ್ಯವೂ ಸ್ವಾಭಾವಿಕವೂ ಆದ ಒಂದು ಬಗೆಯ ಪೂರಕಭಾವವೇ ಆಗಿದೆಯೆನ್ನಬಹುದು.

ಗೋಪಿಯರದು ಕೃಷ್ಣನಲ್ಲಿ ಕಾಂತಾಸಕ್ತಿಯಾದರೆ, ಯಶೋದೆಯದು ಕೃಷ್ಣನಲ್ಲಿ ವಾತ್ಸಲ್ಯಾಸಕ್ತಿ. ವೃದ್ಧಪಿತಾಮಹನೂ ಗಂಗಾತನಯನೂ ದೇವ ವ್ರತನೂ ಭಾಗವತಮಸ್ತಕ ಮಣಿಯೂ ಆದ ಭೀಷ್ಮರ ಕೃಷ್ಣಪ್ರೇಮವು ವಾತ್ಸಲ್ಯ ಭಾವದಿಂದ ಕೂಡಿದ್ದೆನ್ನಬಹುದು. ಶ್ರೀರಾಮನಲ್ಲಿ ಸೀತೆಯ ಭಕ್ತಿಯು ಕಾಂತಾಸಕ್ತಿಯಾದರೆ, ಕೌಸಲ್ಯೆಯ ಭಕ್ತಿಯೂ ಮಹಾಗುರು ವಸಿಷ್ಠ ಮಹ ರ್ಷಿಯ ಭಕ್ತಿಯೂ ವಾತ್ಸಲ್ಯಾಸಕ್ತಿಯು.

ಒಬ್ಬ ಸಾಧಕನಲ್ಲಿಯೇ ಪ್ರೇಮಾಭ್ಯಾಸವು ಬೆಳೆದಂತೆ ದಾಸ್ಯಾಸಕ್ತಿಯು ಸಖ್ಯಾಸಕ್ತಿಯಾಗಿಯೂ, ಸಖ್ಯಾಸಕ್ತಿಯು ಕಾಂತಾಸಕ್ತಿಯಾಗಿಯೂ ಬೆಳೆಯು ತ್ತದೆ. ಆ ಕಾಂತಾಸಕ್ತಿಯು ಪರಮ ವಿರಹಾಸಕ್ತಿಯ ಅಗ್ನಿಸ್ನಾನಮಾಡಿ ಪುಟ

ವಿಟ್ಟಂತೆ ಪವಿತ್ರವಾಗಿಯೂ ಪರಿಪಕ್ವವಾಗಿಯೂ ಪ್ರೌಢವಾಗಿಯೂ ವೃದ್ಧವಾಗಿಯೂ ವಾತ್ಸಲ್ಯಾಸಕ್ತಿಯೂ ಆಗುತ್ತದೆ. ಗೃಹಸ್ಥಧರ್ಮಜೀವನದಲ್ಲಿಯೂ ಹೆಂಡತಿಯಾದವಳೇ ತನ್ನ ಮಕ್ಕಳಿಗೆ ತಾಯಿಯಾಗುವುದಲ್ಲದೆ — **"ದಶಪುತ್ರಾನಾಧೇಹಿ ಪತಿಂ ಏಕಾದಶಂ ಕುರು"** "ಹತ್ತು ಮಕ್ಕಳನ್ನು ಹಡೆದು ನಿನ್ನ ಪತಿಯನ್ನೇ ಹನ್ನೊಂದನೆಯ ಮಗನಾಗಿ ಪಡೆ" ಎಂಬ ವೈದಿಕ ಆಶೀರ್ವಾದದಂತೆ — ತನ್ನ ಗಂಡನಿಗೂ ಹತ್ತು ಹಡೆದ ನಂತರ ಜೀವನದಲ್ಲಿ ಕಾಮ ಸಂಬಂಧವಿಲ್ಲದೆ ಸಂರಕ್ಷಣೆ ಮಾತ್ರ ಮಾಡುವ ತಾಯಿಯಾಗುತ್ತಾಳೆ.

ಹಾಗೆಯೇ ಕಾಂತಾಸಕ್ತಿಯು ರಾಗಯೋಗಗಳೂ ವಿರಹಾಸಕ್ತಿಯು ವಿಯೋಗ-ಪುನರ್ಯೋಗಗಳೂ ಕಳೆದು ಪ್ರೇಮವು ಬೆಳೆದು ಫಲಿತವಾಗಿ ಪವಿತ್ರವೂ ಉನ್ನತವೂ ಆದ ವಾತ್ಸಲ್ಯಾಸಕ್ತಿಯಾಗುತ್ತದೆ.

ಉಪಾಸಕನು ತನ್ನ ಹೃದಯದಲ್ಲಿ ಗುರುಮೂರ್ತಿಯನ್ನು ಅಥವಾ ಸಚ್ಚಿದಾನಂದ ಭಾವವನ್ನು ಧಾರಣಮಾಡಿ "ಸೋಹಂ"ಭಾವದ ಧ್ಯಾನಯೋಗದಿಂದ ಆನಂದವನ್ನು ಅನುಭವಿಸುತ್ತಿರಲು ರಸಾಸ್ವಾದನದ ಅಭಿನಿವೇಶನ ವಿಘ್ನ ನಿಮಿತ್ತವಾಗಿ ಯೋಗದಿಂದ ಚ್ಯುತನಾಗುತ್ತಾನೆ. ಹಾಗೆ ಸೋಹಂಭಾವದ ಯೋಗದಿಂದ ಜಾರಿದವನು ವಿಯೋಗ (ವಿರಹ) ದಿಂದ ಪರಿತಾಪಗೊಂಡು ಕರುಣೆಯಿಂದ ಕರಗಿ ಪುನಃ ಸೋಹಂ ಧ್ಯಾನದಲ್ಲಿ ಬೆರೆಯುತ್ತಾನೆ. ಈ ಬಗೆಯ ಯೋಗ-ವಿಯೋಗಗಳ ಏರು-ಜಾರುಗಳೆಲ್ಲಾ ಕಳೆದು ಧ್ಯಾನಾಭ್ಯಾಸವು ಬಲಿತಾಗ ತೀವ್ರವಾದ ತಪಸ್ಸಿನ ಫಲವಾಗಿ ಧ್ಯಾನಯೋಗವು ಸ್ವಾಧೀನವಾಗಿ ಸಮಾಧಿಯು ಸಿದ್ಧಿಸುತ್ತದೆ. ಧ್ಯಾನಾವಸ್ಥೆಯು ಕಾಂತಾಸಕ್ತಿಯಾದರೆ. ಅದರ ಪ್ರೌಢಿಮೆಯಾದ ಸಮಾಧಿಯು ಒಂದು ಕೈಯಿಂದ ತನ್ನ ಪುತ್ರಿಯಾದ ಧ್ಯಾನವನ್ನೂ ಇನ್ನೊಂದು ಕೈಯಿಂದ ತನ್ನ ಪುತ್ರನಾದ ಜ್ಞಾನವನ್ನೂ ವಕ್ಷವಕ್ಷಸ್ಥಳದಿಂದ ತನ್ನ ವಲ್ಲಭನಾದ ಯೋಗವನ್ನೂ ಸಂರಕ್ಷಿಸುವುದರಿಂದ ವಾತ್ಸಲ್ಯಾಸಕ್ತಿಯಾಗುತ್ತದೆ. ವಿದ್ಯಾರಣ್ಯರು ಸಮಾಧಿಯನ್ನು **"ಧರ್ಮಮೇಘಮಿತಿ ಪ್ರಾಹುಃ ......."** 'ಧನಾಮೃತವನ್ನೇ ವರ್ಷಿಸುವ ಧರ್ಮಮೇಘ'ವೆಂದು ಕರೆದಿರುವುದರಿಂದ ತನ್ನ ಆಶೀರ್ವಾದ ಬಲದಿಂದ ಶಾಂತಿ ಸುಖಗಳ ಅಮೃತವನ್ನೇ ವರ್ಷಣಮಾಡುವ ತಾಯಿಯ ವಾತ್ಸಲ್ಯದಂತೆ ಸಮಾಧಿಸ್ಥಿತಿಯೇ ವಾತ್ಸಲ್ಯಾಸಕ್ತಿಯಾಗಿದೆ.

ಸದ್ಗುರುವಿನ ನಾಲ್ಕು ಬಗೆಯಾದ ಸೇವೆಗಳಲ್ಲಿ ಮೂರನೆಯದಾದ ಭಾವಶುಶ್ರೂಷೆಯು ಇಲ್ಲಿಗೆ ಮುಗಿಯಿತು. ಕೊನೆಯದಾದ ಆತ್ಮಸೇವೆಯೇ ನಾಲ್ಕನೆಯದು.

10. **ಆತ್ಮನಿವೇದನಾಸಕ್ತಿ :** ಗುರುಸೇವೆಯಲ್ಲಿ ಕೊನೆಯ ನಾಲ್ಕನೆಯದಾದ ಆತ್ಮಶುಶ್ರೂಷೆಯೇ ಭಕ್ತಿಭಾವಗಳಲ್ಲಿ ಹತ್ತನೆಯದಾದ ಈ ಆತ್ಮನಿವೇದನಾಸಕ್ತಿಯು. ಅನುರಾಗ ಸಾಧನಗಳಲ್ಲಿಯೂ ಕೊನೆಯ ತನ್ಮಯತಾಸಿದ್ಧಿಗೆ ಕಾರಣವಾದ ಈ ಆತ್ಮನಿವೇದನೆಯೇ ಕೊನೆಯ ಸಾಧನವಾಗಿದೆ. ಸಹಜಸ್ಥಿತಿಯಾದ ತನ್ಮಯತಾಸಕ್ತಿಯಲ್ಲಿ ನೆಲೆಗೊಳ್ಳುವುದಕ್ಕೆ ಸಮಾಧಿಸ್ಥಿತಿಯ ಉಪಾಧಿಯನ್ನೂ ಮೀರುವ ಸಾಧನವೇ ಆತ್ಮನಿವೇದನಾಸಕ್ತಿಯಾಗಿದೆ. ಆತ್ಮ ನೆಂದರೆ ತಾನು-ನಾನು. ಆ ನಾನು ಎಂಬ ಪ್ರತ್ಯೇಕ ಜ್ಞಾನವು ಉಳಿದಿರುವವರೆಗೂ ಅದು ಸಮಾಧಿಸ್ಥಿತಿಯಿಂದ ಸಂಸಾರಸ್ಥಿತಿಗೂ, ಸಂಸಾರಸ್ಥಿತಿಯಿಂದ ಸಮಾಧಿಗೂ ಎಡೆಯಾಡುತ್ತಿರುತ್ತದೆ. ನಾನು ಎಂಬ ಭಾವವು ಉಳಿದು ದೇಹಾದಿಗಳಲ್ಲಿ ಬೆರೆಯದೆ ಉಪಾಸ್ಯಮೂರ್ತಿಯಲ್ಲಾಗಲೀ ಸಚ್ಚಿದಾನಂದ ತತ್ತ್ವದಲ್ಲಾಗಲೀ ಬೆರೆತು ಕರಗುವ ತೀವ್ರವಾದ ಅನುರಾಗವೇ ಆತ್ಮನಿವೇದನಾಸಕ್ತಿ. ಆತ್ಮನಿವೇದನೆಯಿಂದ ಕೊನೆಯ ಉಪಾಧಿಯಾದ ಸಮಾಧಿಯ ಜೊತೆಗೆ ಸರ್ವೋಪಾಧಿಗಳೂ ಅಳಿದು ಉಪಾಸಕನು ಕೊನೆಯ ತನ್ಮಯತಾಸಕ್ತಿಯೆಂಬ ಸಹಜ ಸ್ಥಿತಿಗೆ ಮುಟ್ಟುತ್ತಾನೆ.

ಕಾಂತೆಗಿಂತಲೂ ಮಾತೆಯು ಶ್ರೇಷ್ಠಳೂ ಪೂಜ್ಯಳೂ ಇರುವಂತೆ ಮಾತೆಗಿಂತಲೂ ಆತ್ಮವು (ತಾಯಿಗೂ ಪೂಜ್ಯ ಅಂತರ್ಯಾಮಿಯಾಗಿರುವುದರಿಂದ) ಶ್ರೇಷ್ಠವೂ ಪೂಜ್ಯವೂ ಆಗಿದೆ. ಆದ್ದರಿಂದ ಕಾಂತಾಸಕ್ತಿಗಿಂತಲೂ ವಾತ್ಸಲ್ಯಾಸಕ್ತಿಯೂ, ವಾತ್ಸಲ್ಯಾಸಕ್ತಿಗಿಂತಲೂ ಆತ್ಮನಿವೇದನಾಸಕ್ತಿಯೂ ಶ್ರೇಷ್ಠವಾಗಿವೆ. ನನ್ನದು ಎಂಬ ಸರ್ವಕ್ಕೂ ನಾನು ಎಂಬ ಜ್ಞಾನವೇ ಮೂಲವಾದುದರಿಂದ ನಾನು ಎಂಬುದರ ಅರ್ಪಣದಿಂದ ಸರ್ವವೂ ನಿವೇದಿತವಾಗುತ್ತದೆ. ಗೌಣೀ ಭಕ್ತಿಯ ಶ್ರವಣ-ಕೀರ್ತನಾದಿ ನವವಿಧ ಸಾಧನಗಳಲ್ಲಿಯೂ ಆತ್ಮನಿವೇದನೆಯೇ ಕೊನೆಯದಾದುದು. ಈ ಶ್ರವಣಾದಿ ಸಾಧನಗಳು ಯಾವುವೆಂದರೆ,

**ಶ್ರವಣಂ ಕೀರ್ತನಂ ವಿಷ್ಣೋಃಸ್ಮರಣಂ ಪಾದಸೇವನಂ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥**

**ಶ್ರವಣ :** ಶ್ರವಣವೆಂದರೆ ಕೇಳುವುದು. ಭಗವಂತನ ಅವತಾರಗಳ ಲೀಲೆಗಳನ್ನೂ ಮಹಿಮಾ ಗುಣಗಳನ್ನೂ ಅವನ ನಿರ್ಗುಣಸ್ವರೂಪ ವಿಚಾರ ವನ್ನೂ ಶ್ರದ್ಧಾ ಭಕ್ತಿಗಳಿಂದ ಕೇಳುವುದೇ ಶ್ರವಣ. ಶ್ರವಣ ಮನನ ನಿಧಿಧ್ಯಾಸ ಗಳೆಂಬ ಜ್ಞಾನಯೋಗದ ಮೂರು ಮುಖ್ಯ ಸಾಧನಗಳಲ್ಲಿಯೂ ಶ್ರವಣವೇ ಪ್ರಥಮ ಸಾಧನ.

ಲೌಕಿಕವಾಗಿಯಾದರೂ ಒಂದು ಪ್ರಾಣಿಯಲ್ಲಾಗಲೀ ಒಂದು ಪದಾರ್ಥ ದಲ್ಲಾಗಲೀ ನಮಗೆ ಪ್ರೀತಿಯುಂಟಾಗಬೇಕಾದರೆ, ಅದರ ಗುಣ ಸ್ವಭಾವ ಯೋಗ್ಯತಾ ಪ್ರಯೋಜನಗಳ ವಿಚಾರಗಳನ್ನು ನಾವು ಮೊದಲು ಕಿವಿಯಿಂದ ಕೇಳಿರಬೇಕು. ಹಾಗಾದರೆ ಅದನ್ನು ಹೊಂದುವ ಪ್ರವೃತ್ತಿಯಾಗಲೀ ಅದರಿಂದ ಹಿಂದಿರುಗುವ ನಿವೃತ್ತಿಯಾಗಲೀ ಉಂಟಾಗುತ್ತದೆ. ದೇವರೊಬ್ಬನಿರುವನೆಂಬ ಆಸ್ತಿಕ ಭಾವವು ಮೊದಲು ಹುಟ್ಟುವುದಕ್ಕೂ ಮಹಿಮಾಪೂರ್ಣನಾದ ಅವನಲ್ಲಿ ಪ್ರೇಮವು ಬೆಳೆದು ಅವನನ್ನು ಹೊಂದುವುದಕ್ಕೆ ಹೆಚ್ಚಿನ ಸಾಧನೆಗಳನ್ನು ಮಾಡು ವುದಕ್ಕೂ ಶ್ರವಣವೇ ಮುಖ್ಯ ಸಾಧನ. ಶ್ರವಣದ ವಿಚಾರದಲ್ಲಿ ಕಠೋಪ ನಿಷತ್ತಿನಲ್ಲಿ ಹೇಳಿರುವುದೇನೆಂದರೆ,

**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ ಶೃಣ್ವಂತೋಽಪಿ**
**ಬಹವೋ ಯಂ ನ ವಿದ್ಯುಃ ।**
**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾಶ್ಚರ್ಯೋ**
**ಜ್ಞಾತಾ ಕುಶಲಾನುಶಿಷ್ಟಃ ॥**

" ಆ ಪರಮಾತ್ಮನು ಬಹು ಜನರಿಗೆ ಕೇಳುವುದಕ್ಕೆ ಕೂಡ ಸಿಕ್ಕುವುದಿಲ್ಲ. ಅವನ ವಿಚಾರವನ್ನು ಕೇಳಿದರೂ ಹಲವರು ಅವನನ್ನು ಅರಿಯರು; ಅವನ ವಿಷಯ ವನ್ನು ಹೇಳುವವನೇ ಒಬ್ಬ ಆಶ್ಚರ್ಯಪುರುಷ. ಮತ್ತು ಅವನನ್ನು ಹೊಂದು ವವನೇ ಸಮರ್ಥ; ನಿಷ್ಣಾತ ಗುರುವಿನಿಂದ ಸುಶಿಕ್ಷಿತನಾಗಿ ಅವನನ್ನು ಅರಿ ತವನೇ ಆಶ್ಚರ್ಯಕರ ಮಹಿಮಾ ಪುರುಷ. "

ಭಗವಂತನ ಹಾಗೂ ಮಹಾಪುರುಷರ ಚರಿತ್ರೆಗಳನ್ನೂ ವೇದಾಂತ ವಿಚಾರಗಳನ್ನೂ ಶ್ರದ್ಧಾ ಭಕ್ತಿಗಳಿಂದಲೂ ಏಕಾಗ್ರತೆ ತಲ್ಲೀನತೆಗಳಿಂದಲೂ ಶ್ರವಣಮಾಡಿದರೆ ಚಿತ್ತಶುದ್ಧಿಯುಂಟಾಗಿ ಸಂಸಾರಭಯ ದುಃಖಗಳು ನಾಶ ವಾಗುವುದಲ್ಲದೆ ನಿರ್ಮಲವಾದ ಆನಂದವುಂಟಾಗುವುದು.

**ಕೀರ್ತನ:** ಕೆರೆಯು ತುಂಬಿದಮೇಲೆ ಕೋಡಿಯು ಹರಿಯುವಂತೆ ಪರಮಾತ್ಮನ ಗುಣವರ್ಣನೆಗಳನ್ನು ಕೇಳಿ ಅದರ ಮಹಿಮಾ ವಿಚಾರಗಳು ಹೃದಯದೊಳಗೆಲ್ಲಾ ತುಂಬಿದರೆ ಅವು ಸಹಜವಾಗಿ ಮುಖದಿಂದ ಕೀರ್ತನ ರೂಪದಲ್ಲಿ ಹರಿಯುತ್ತವೆ. ಅರ್ಥಾನುಸಂಧಾನಪೂರ್ವಕವಾಗಿಯೂ ಭಾವ ಪೂರ್ಣವಾಗಿಯೂ ರಸಾವೇಶದಿಂದಲೂ ಕೀರ್ತನಮಾಡಿದರೆ ಆ ಕೀರ್ತನಕಾರ ನಿಗೂ ಶ್ರೋತೃಗಳಿಗೂ ಪ್ರಯೋಜನವೂ ಆನಂದವೂ ಉಂಟಾಗುತ್ತವೆ. ಸಂಕೀರ್ತನವು ಸಂಸಾರ ಭಯ ದುಃಖಗಳನ್ನು ನಾಶಮಾಡುವುದಕ್ಕಾಗಿ ಭಗ ವಂತನಿಂದ ಮಾನವಲೋಕಕ್ಕೆ ಅನುಗ್ರಹಿಸಲ್ಪಟ್ಟಿರುವ ಪರಮಾಮೃತವು. ಕೀರ್ತನ ನಡೆಯುತ್ತಿರುವಲ್ಲಿ ಪರಮಾತ್ಮನ ಸಾನ್ನಿಧ್ಯವಿರುತ್ತದೆ. ಭಕ್ತಿಸಾಧನ ಗಳಲ್ಲಿ ಇದು ಅತ್ಯಂತ ರಸಮಯವಾದ ಸಾಧನ.

**ಸ್ಮರಣ:** ಶ್ರವಣ ಕೀರ್ತನೆಗಳು ಹೆಚ್ಚಾಗಿ ಜ್ಞಾನೇಂದ್ರಿಯ ಕರ್ಮೇಂ ದ್ರಿಯ ಸಾಧನಗಳು. ಸ್ಮರಣವು ನಾಮಸ್ಮರಣವಾದರೆ ವಾಚಿಕವೂ, ರೂಪ ಸ್ಮರಣವಾದರೆ ಮಾನಸಿಕವೂ ಆಗುತ್ತದೆ. ಶ್ರವಣ ಸಾಧನೆಯಿಂದ ಕೀರ್ತನ ಸಾಧನೆಗೂ ಕೀರ್ತನದಿಂದ ಸ್ಮರಣೆಗೂ ಯೋಗ್ಯತೆಯು ಬೆಳೆಯುತ್ತದೆ. ಬಂಧ ಮೋಕ್ಷಗಳಿಗೆ ಮನಸ್ಸೇ ಕಾರಣವಾದುದರಿಂದ ಮನಸ್ಸಿನ ಶುದ್ಧಿಗೂ ಜ್ಞಾನ ಸಿದ್ಧಿಗೂ ಸಾಧನವಾದ ಸ್ಮರಣ ಭಕ್ತಿಯು ಬಹಳ ಮುಖ್ಯವಾದುದು. ಸಗುಣ ರೂಪದ ಸ್ಮರಣವಾಗಲಿ ನಿರ್ಗುಣರೂಪದ ಸ್ಮರಣೆಯಾಗಲಿ ಅವಿಚ್ಛಿನ್ನ ಪ್ರವಾಹ ವಾಗಬೇಕು. **"ಯಥಾ ಸ್ವೈರಾಂಗನಾ ಸ್ವಕಂ"** ಸ್ವಚ್ಛಂದವೃತ್ತಿಯುಳ್ಳ ಸ್ತ್ರೀಯು ಯಾವ ಗೃಹಕೃತ್ಯಕ್ಕೂ ಲೋಪವಿಲ್ಲದಂತೆ ಮಾಡಿ ಎಲ್ಲರಿಗೂ ಮೆಚ್ಚಾ ಗಿದ್ದರೂ ತನ್ನ ಅಂತರಂಗದಲ್ಲಿ ಎಡೆಬಿಡದೇ ತನ್ನ ಪ್ರಿಯನ (ವಿಟನ) ಸಮಾ ಗಮವನ್ನೇ ಹಗಲಿರುಳೂ ಬಯಸುತ್ತಿರುವಂತೆಯೂ, ಲೋಭಿಯು ಹೂತಿಟ್ಟಿ ರುವ ತನ್ನ ಧನವನ್ನು ನಿರಂತರ ಚಿಂತಿಸುವಂತೆಯೂ ಪರಮಾತ್ಮನನ್ನು ಚಿಂತಿ ಸುವುದೇ ಸ್ಮರಣಭಕ್ತಿಯು.

**ಪಾದಸೇವನೆ:** ಸಜ್ಜನರ ಪಾದಸೇವೆಯನ್ನು ಮಾಡುವುದು ಭಕ್ತಿಯು ಬೆಳೆಯುವುದಕ್ಕೆ ಸಾಧನ. ಇದರಿಂದ ನಮ್ರತೆಯೂ ನಿರಹಂಕಾರವೂ ಉಂಟಾಗಿ ಸತ್ಪುರುಷರ ಅನುಗ್ರಹವೂ ಈಶ್ವರಕೃಪೆಯೂ ಆಗುವುದು.

**ಅರ್ಚನ:** ಆವಾಹನ-ಆಸನಾದಿ ಉಪಚಾರಗಳಿಂದ ಭಗವನ್ಮೂರ್ತಿಯನ್ನೂ ಸಜ್ಜನರನ್ನೂ ಸದ್ಗುರುಗಳನ್ನೂ ಪೂಜ್ಯಭಾವದಿಂದ ಆರಾಧಿಸಬೇಕು.

**ವಂದನ:** ದೇವರಿಗೂ ಗುರುಹಿರಿಯರಿಗೂ ನಮಸ್ಕರಿಸುವುದು. ಭಗವದ್ಭಾವನೆಯಿಂದಲೂ ಅದೇ ತಾನೆಂಬ ಭಾವದಿಂದಲೂ ಎಲ್ಲಾ ಪದಾರ್ಥಗಳಿಗೂ ಪ್ರಾಣಿಗಳಿಗೂ ವಂದಿಸುವ ಅಭ್ಯಾಸವು ಪರಮಾತ್ಮಭಾವದಲ್ಲಿ ತನ್ಮಯತೆಯನ್ನು ಕೊಡುತ್ತದೆ. ವಂದನದಿಂದ ಸರ್ವರ ಆದರಕ್ಕೂ ಹಿರಿಯರ ಆಶೀರ್ವಾದಕ್ಕೂ ಗುರುಗಳ ಅನುಗ್ರಹಕ್ಕೂ ಈಶ್ವರಕೃಪೆಗೂ ಪಾತ್ರರಾಗುತ್ತೇವೆ. ಎಲ್ಲಾ ಸಾಧನಗಳನ್ನೂ ತ್ರಿಕರಣ ಶುದ್ಧಿಯಿಂದ ಮಾಡಬೇಕಾಗಿರುವಂತೆ ವಂದನೆಯನ್ನೂ ತ್ರಿಕರಣಪೂರ್ವಕವಾಗಿ ಮಾಡಿದರೆ ಪೂರ್ಣಫಲವುಂಟಾಗುತ್ತದೆ. ದಾಸ್ಯ-ಸಖ್ಯ-ಆತ್ಮನಿವೇದನ ಈ ಮೂರು ಸಾಧನಗಳನ್ನು ಆಯಾ ಆಸಕ್ತಿಗಳ ಸಾಧನದಲ್ಲಿ ಹಿಂದೆಯೇ ಹೇಳಿದೆ. ಈ ಒಂಭತ್ತೂ ಗೌಣೀಭಕ್ತಿಯ ಸಾಧನಗಳು.

11 **ತನ್ಮಯತಾಸಕ್ತಿ:** ಉಪಾಸ್ಯದೇವನಲ್ಲಿ-ಹಿಂದೆ ಹೇಳಿದಂತೆ-ಆತ್ಮನಿವೇದನೆಯಾದೊಡನೆ ಮನೋವೃತ್ತಿಯು ಉಪಾಸ್ಯಮೂರ್ತಿಯ ಆಕಾರವಾಗಿಯೇ ಅಭೇದಭಾವದಿಂದ ಏಕವಾಗುವುದು ಸ್ವಾಭಾವಿಕ. ಈ ಅನುಭಾವದಲ್ಲಿ ಬೆಳೆಯುವ ಅನುರಕ್ತಿಯೇ ತನ್ಮಯತಾಸಕ್ತಿ.

ದೇಹಾದಿಗಳಲ್ಲಿ ತೊಡಕಿಕೊಂಡಿರುವ 'ನಾನು' ಎಂಬ ಜ್ಞಾನವನ್ನು ಅವುಗಳ ಸಿಕ್ಕಿನಿಂದ ಬಿಡಿಸಿ ಪರಮಾತ್ಮನ ಸಚ್ಚಿದಾನಂದ ರೂಪದಲ್ಲಿ ಬೆರೆಸಿದ ಬಳಿಕ ಉಳಿಯುವುದು ತಾನೇ ಸಚ್ಚಿದಾನಂದನು. ಸಚ್ಚಿದಾನಂದನೇ ತಾನು ಎಂಬ ಅನುಭವವು ಮಾತ್ರ. ನಿರಂತರ ಅಖಂಡವಾಗಿ ಈ ಅನುಭವದಲ್ಲಿಯೇ ಇರಬೇಕೆಂಬ ಉತ್ಕಟ ಅನುರಾಗವೇ ತನ್ಮಯತಾಸಕ್ತಿಯು.

ಆಸಕ್ತಿಯೆಂದರೆ (ಆ **ಸಮಂತಾತ್**) ಸುತ್ತಲೂ ಎಲ್ಲ ಕಡೆಯಿಂದಲೂ (**ಸಕ್ತಿ** ಎಂದರೆ) ತೊಡಕಿಕೊಂಡಿರುವುದು. ಇಂದ್ರಿಯ ಶಕ್ತಿಯೂ ಪ್ರಾಣಶಕ್ತಿಯೂ ಮನಶ್ಶಕ್ತಿಯೂ ಬುದ್ಧಿಶಕ್ತಿಯೂ (ಆನಂದಮಯ ಕೋಶದ) ಪ್ರೇಮಶಕ್ತಿಯೂ ಜೀವನ ಸಮಸ್ತ ಶಕ್ತಿಗಳೂ ಒಂದು ಮುಖ್ಯಭಾವದ ಸಾಧನೆಯಲ್ಲಿ ತೊಡಕಿಕೊಂಡು ತೀವ್ರವಾಗಿ ಪ್ರಯತ್ನಮಾಡುವುದೇ 'ಆಸಕ್ತಿಯು'. ಸಂಸಾರ

ದಿಂದ ನಾವು ಬಂಧಿತರಾಗುವುದಕ್ಕೂ ಪ್ರಪಂಚದಲ್ಲಿ ನಮಗಿರುವ ಆಸಕ್ತಿಯೇ ಕಾರಣ. ಏಕೆಂದರೆ, ಗೀತೆಯಲ್ಲಿ ಪರಮಾತ್ಮನು,

**ಸಂಸಾರಮೇನಂ ಸುವಿರೂಢಮೂಲಂ ।**
**ಅಸಂಗ ಶಸ್ತ್ರೇಣ ದೃಢೇನ ಛಿತ್ವಾ ॥**

"ಪ್ರಬಲವಾಗಿ ರೂಢಮೂಲವಾದಂಥ ಈ ಸಂಸಾರವನ್ನು ಅನಾಸಕ್ತಿಯೆಂಬ ಶಸ್ತ್ರದಿಂದ ದೃಢವಾಗಿ ಕತ್ತರಿಸಬೇಕು." ಎಂದಿದ್ದಾನೆ. ಸಂಸಾರದಲ್ಲಿ ಅನಾಸಕ್ತಿಯೂ ಪರಮಾರ್ಥದಲ್ಲಿ ಪ್ರಬಲವಾದ ಆಸಕ್ತಿಯೂ ಮುಕ್ತಿಗೆ ಸಾಧನಗಳಾಗಿವೆ.

ಹಿಂದೆ ವಿಚಾರಿಸಿರುವಂತೆ, ಶ್ರೀ ಶಂಕರರು ಹೇಳಿರುವ

**ಮೋಕ್ಷಕಾರಣ ಸಾಮಗ್ರ್ಯಾಂ ಭಕ್ತಿರೇವ ಗರೀಯಸೀ ।**
**ಸ್ವಸ್ವರೂಪಾನುಸಂಧಾನಂ ಭಕ್ತಿರಿತ್ಯಭಿಧೀಯತೇ ॥**

ಎಂಬ ಶ್ಲೋಕದಲ್ಲಿ "ಸ್ವಸ್ವರೂಪಾನುಸಂಧಾನವೇ ಭಕ್ತಿಯೆಂದಿರುವುದು". ಈ ಮೇಲೆ ವಿವರಿಸಿರುವ ಆತ್ಮನಿವೇದನಾಸಕ್ತಿ ತನ್ಮಯತಾಸಕ್ತಿಗಳೇ ಆಗಿವೆ. ಸಚ್ಚಿದಾನಂದ ಸ್ವರೂಪದ ಧ್ಯಾನವಾದ ಇದೇ ನಿರ್ಗುಣಧ್ಯಾನವೂ ಆಗಿದೆ. ಇದೇ ಪರಾಭಕ್ತಿ, ಇದೇ ಜ್ಞಾನ. ಗೌಣೀಭಕ್ತಿಯ ಫಲಸಿದ್ಧಿಯಾದ ಆತ್ಮನಿವೇದನವೇ ಪರಾಭಕ್ತಿಯ ಸಾಧನವೂ ಪರಾಕಾಷ್ಠಭಾವವಾದ ತನ್ಮಯತಾಸಕ್ತಿಯೇ (ತನ್ಮಯತಾ ಸ್ಥಿತಿಯೇ) ಪರಾಭಕ್ತಿಯೂ ಆಗಿವೆ.

ತನ್ನ ಇಷ್ಟದೇವನನ್ನು ತನ್ನ ತಂದೆಯೆಂದಾಗಲೀ ತಾಯಿಯೆಂದಾಗಲೀ ಪತಿಯೆಂದಾಗಲೀ (ಕಾಂತಾಸಕ್ತಿ) ಮಿತ್ರನೆಂದಾಗಲೀ (ಸಖ್ಯಾಸಕ್ತಿ) ಪ್ರೀತಿಸುವುದಕ್ಕಿಂತ ತನ್ನ ಸ್ವರೂಪವಾದ ತಾನೇ ಎಂದು ಪ್ರೇಮಿಸುವುದೇ ಬಹಳ ಹೆಚ್ಚಿನದೂ ತುಟ್ಟತುದಿಯದೂ ನೆಲೆಗೆ ನಿಂತುದೂ ಸ್ಹಜವೂ ಆದ ಸಾಧನ. ಏಕೆಂದರೆ, ತನಗಾಗಿ ಪ್ರಿಯವಾಗುವ ಎಲ್ಲಕ್ಕಿಂತಲೂ ಹೆಚ್ಚು ಪ್ರಿಯನಾದವನು ತಾನೇ ಆದುದರಿಂದ ಶಂಕರರು ಹೇಳುವಂತೆ ಇಷ್ಟದೇವನನ್ನು 'ಸ್ವಸ್ವ (ತನ್ನ) ರೂಪ'ವಾಗಿ ಅನುಸಂಧಾನ ಮಾಡಿದಾಗಲೇ ಅತ್ಯಂತ ಶ್ರೇಷ್ಠವೂ ಸ್ಹಜವೂ ಸೀಮಾಂತವೂ ಆದ ಭಕ್ತಿಯಾಗುತ್ತದೆ. ಭಕ್ತನು ತನ್ನ ಚಿತ್ರಭಿತ್ತಿಯಲ್ಲಿ ಕಲ್ಪಿಸಿ

ಕೊಳ್ಳುವ ಇಷ್ಟರೂಪವು (ಧ್ಯಾನಕೋಟಿರ್ಮನೋಲಯಃ) - ಅತಿಶಯ ಧ್ಯಾನಬಲದಿಂದ ಕರಗಿ ವಿವೇಕರಸವು ಮಾತ್ರ ತನ್ನ ಸ್ವರೂಪವೇ ಆಗಿ ಅನುಭವಗಮ್ಯವಾಗುತ್ತದೆ.

ಪರಾಭಕ್ತಿಯಿಂದ ಇಂಥಾ ಬ್ರಾಹ್ಮೀಸ್ಥಿತಿಯನ್ನು ಪಡೆದ ಪುಣ್ಯಾತ್ಮನು ಜೀವನ್ಮುಕ್ತನಾಗುತ್ತಾನೆ. ಶ್ರೀ ಶಂಕರ ಭಗವತ್ಪಾದಾಚಾರ್ಯರು ತಮ್ಮ **'ಜೀವನ್ಮುಕ್ತಾನಂದ ಲಹರೀ'** ಎಂಬ ಸ್ತೋತ್ರದಲ್ಲಿ ಜೀವನ್ಮುಕ್ತನ ಅಲೌಕಿಕವಾದ ವಿಲಕ್ಷಣ ಸ್ಥಿತಿಯನ್ನು ಸ್ವಾರಸ್ಯವಾಗಿ ವರ್ಣಿಸಿದ್ದಾರೆ: "ಸರ್ವಾಲಂಕಾರ ಭೂಷಿತರಾದ ಸುಂದರ ನಾಗರಿಕ ಯುವತಿಯರೊಡನೆ ರಮಿಸಿದರೂ ತಾನು ಸಾಕ್ಷಿಯಾಗಿ ಅವರನ್ನು ಚಿತ್ರಾರ್ಪಿತ ಮೂರ್ತಿಗಳಂತೆ ನೋಡುವುದರಿಂದ ಗುರುದೀಕ್ಷೆಯಿಂದ ನಷ್ಟವಾದ ಅವಿದ್ಯೆಯುಳ್ಳ ಆ ಮುನಿಯು ಮೋಹಗೊಳ್ಳುವುದಿಲ್ಲ. ಅವನು ಒಮ್ಮೆ ಭವ್ಯವಾದ ಅರಮನೆಯಲ್ಲಿಯೂ ಒಮ್ಮೆ ದಿವ್ಯವಾದ ಗಿರಿ ವನ ನದೀಕೂಲ ಪ್ರದೇಶಗಳಲ್ಲಿಯೂ ಮಹರ್ಷಿಗಳ ಕುಟೀರಗಳಲ್ಲಿಯೂ ವಾಸಮಾಡಿದರೂ ವ್ಯತ್ಯಾಸವನ್ನು ಕಾಣುವುದಿಲ್ಲ. ಗುರುಕೃಪೆಯಿಂದ ಮುಕ್ತನಾದ ಆ ಮುನಿಯು ಲೀಲೆಯಿಂದ ಬಾಲಕರೊಡನೆಯೂ ಚತುರ ತರುಣಿಯರೊಡನೆಯೂ ಚಿಂತಾಸಕ್ತ ವೃದ್ಧರೊಡನೆಯೂ ಪಂಡಿತರೊಡನೆಯೂ ರಸಿಕರಾದ ಕವಿಗಳೊಡನೆಯೂ ತಾರ್ಕಿಕರೊಡನೆಯೂ ಅವರವರ ಅಭಿರುಚಿ-ಅಪೇಕ್ಷೆಗಳಿಗೂ ಯೋಗ್ಯತೆಗಳಿಗೂ ತಕ್ಕಂತೆ ಸಲ್ಲಾಪ ಮಾಡಿ ಸಂತೋಷಗೊಳಿಸಿದರೂ ಆಸಕ್ತನಾಗುವುದಿಲ್ಲ. ಅವನು ಒಮ್ಮೆ ಶಕ್ತಿದೇವತೆಯ, ಒಮ್ಮೆ ಶಿವನ, ಇನ್ನೊಮ್ಮೆ ವಿಷ್ಣುವಿನ, ಮತ್ತೊಮ್ಮೆ ಗಣಾಧಿಪನ ಅಥವಾ ಸೂರ್ಯನ ಧ್ಯಾನವನ್ನೋ ಪೂಜಾದಿಗಳನ್ನೋ ಆನಂದಬಾಷ್ಪಗಳನ್ನು ಸುರಿಸುತ್ತಾ ಮಾಡಿದರೂ ಗುರುಕೃಪೆಯಿಂದ ಸ್ಥಿತಪ್ರಜ್ಞನಾದ ಆ ಮಹಾತ್ಮನು ತನ್ನ ಆತ್ಮಸ್ವರೂಪದಲ್ಲಿಯೇ ತಾನು ನಿರಂತರ ರಮಿಸುತ್ತಿರುತ್ತಾನೆ. ಅವನು ಎಚ್ಚರವಾಗಿದ್ದರೂ ಕನಸನ್ನು ಕಾಣುತ್ತಿದ್ದರೂ ನಿದ್ರೆಮಾಡುತ್ತಿದ್ದರೂ ತನ್ನನ್ನು ತಾನು ಮರೆಯುವುದಿಲ್ಲ.

ಆ ವಿಲಕ್ಷಣ ಪುರುಷನು ಒಮ್ಮೆ ಸತ್ವಗುಣವಿಶಿಷ್ಟತೆಯಿಂದ ಶಾಂತನಾಗಿಯೂ, ಇನ್ನೊಮ್ಮೆ ರಜೋಲಹರಿಯಿಂದ ಉಪದೇಶಾದಿ ಕಾರ್ಯಗಳಲ್ಲಿ

ತತ್ಪರನಾಗಿಯೂ, ಮತ್ತೊಮ್ಮೆ ತಮೋಗುಣದಿಂದ ಜಡನಂತೆಯೂ. ಆಗಾಗ ಮೂರು ಗುಣಗಳನ್ನೂ ಮೀರಿದವನಾಗಿಯೂ ಪ್ರೇಮಾತಿಶಯದಿಂದ ಸಂಸಾರಿಯಂತೆಯೂ ನಿಯಮಾಚರಣೆಯಿಂದ ವೇದಧರ್ಮ ವಿಹಾರಿಯಂತೆಯೂ ಕಂಡರೂ ಗುರುಕರುಣೆಯಿಂದ ನಷ್ಟಮೋಹವುಳ್ಳವನಾದುದರಿಂದ ಆ ಮಹಾತ್ಮನು ವಿಕಾರವನ್ನು ಹೊಂದುವುದಿಲ್ಲ.

ಕೆಲವು ಸಮಯ ಸಾಕಾರವನ್ನೂ ಮತ್ತೆ ಕೆಲವು ಸಮಯ ನಿರಾಕಾರವನ್ನೂ ದ್ವೈತವನ್ನೂ ಅದ್ವೈತವನ್ನೂ ಭಜಿಸುತ್ತಾ ದೀನರಲ್ಲಿ ಅತಿ ದೀನನಾಗಿಯೂ, ಭೋಗಿಗಳಲ್ಲಿ ಮಹಾಭೋಗಿಯೂ, ಪಾಮರರಲ್ಲಿ ಪಾಮರನಾಗಿಯೂ, ಪಂಡಿತರಲ್ಲಿ ಪಂಡಿತನಾಗಿಯೂ, ಮೌನಿಗಳಲ್ಲಿ ಮೌನಿಯಾಗಿಯೂ, ವಾಗ್ಮಿಗಳಲ್ಲಿ ಪ್ರೌಢವಾಗ್ಮಿಯಾಗಿಯೂ, ದಿಗಂಬರನಾಗಿಯೂ, ದಿವ್ಯಾಂಬರನಾಗಿಯೂ, ಅವಧೂತರಲ್ಲಿ ಅವಧೂತನಾಗಿಯೂ ಇರುವ ತ್ರಿಲೋಕವಿಜಯಿಯಾದ ಆ ಮಹಾ ಭಾಗವತೋತ್ತಮನೇ ಪರಮ ಧನ್ಯನು !

**ಧನ್ಯಃ ಕೋಽಪಿ ತ್ರಿಭುವನಜಯೀ ಯೋಽವಧೂತೋಽವಧೂತಃ ||**

ಈ ಧನ್ಯಪುರುಷನ ಲಕ್ಷಣವು ಜ್ಞಾನಿಯ ಲಕ್ಷಣವೇ ಆಗಿದೆ. ಏಕೆಂದರೆ, ಪರಾಭಕ್ತಿಯ ಪಾಕವನ್ನು ಪಡೆದ ಭಕ್ತೋತ್ತಮನಿಗೂ ಜ್ಞಾನಿಗೂ ಅನುಭವದಲ್ಲಿ ಭೇದವಿಲ್ಲ. ಈ ಅರ್ಥಕ್ಕೆ ಬೋಧಸಾರ ಭಕ್ತಿಯೋಗದಲ್ಲಿ ಹೇಳಿರುವುದೇನೆಂದರೆ,

**ತವಾಸ್ಮೀತಿ ಭಜಂತ್ಯೇಕೇ ತ್ವಮೇವಾಸ್ಮೀತಿ ಚಾಪರೇ |**
**ಇತಿ ಕಿಂಚಿದ್ವಿಶೇಷೇಽಪಿ ಪರಿಣಾಮಃ ಸಮೋ ದ್ವಯೋಃ ||**
**ಸ ಭಕ್ತಜ್ಞಾನಿನೋರ್ದೃಷ್ಟಾ ಶಾಸ್ತ್ರೇ ಲಕ್ಷಣ ಭಿನ್ನತಾ |**

" ನಾನು ನಿನ್ನವನೆಂದು ಭಜಿಸಿದವರೂ, ನೀನೇ ನಾನೆಂದು ಧ್ಯಾನಿಸಿದವರೂ ಕ್ರಮದಲ್ಲಿ ವ್ಯತ್ಯಾಸವಾದರೂ ಎರಡರ ಫಲವೂ ಒಂದೇ ಆಗಿದೆ. ಶಾಸ್ತ್ರದಲ್ಲಿ ಭಕ್ತನಿಗೂ ಜ್ಞಾನಿಗೂ–ಕೊನೆಯ ಅನುಭವದಲ್ಲಿ–ಲಕ್ಷಣಭೇದವನ್ನು ಹೇಳಿಲ್ಲ."

ನಾರದ ಭಕ್ತಿಸೂತ್ರಗಳಲ್ಲಿ ಇಂಥಾ ಭಕ್ತೋತ್ತಮನ ಮಹಿಮೆಯನ್ನು ಹೇಳಿರುವುದೇನೆಂದರೆ,

**ಕಂಠಾವರೋಧ ರೋಮಾಂಚಾಶ್ರುಭಿಃ ಪರಸ್ಪರಂ ।**
**ಲಪಮಾನಾಃ ಪಾವಯಂತಿ ಕುಲಾನಿ ಪೃಥಿವೀಂ ಚ ॥**

**ತೀರ್ಥೀ ಕುರ್ವಂತಿ ತೀರ್ಥಾನಿ ಸುಕರ್ಮೀ ಕರ್ಮಾಣಿ**
**ಸಚ್ಛಾಸ್ತ್ರೀ ಶಾಸ್ತ್ರಾಣಿ ।**
**ಮೋದಂತೇ ಪಿತರೋ ನೃತ್ಯಂತಿ ದೇವತಾಃ**
**ಸನಾಥಾಚೇಯಂ ಭೂರ್ಭವತಿ ॥**

"ಭಗವನ್ಮಹಿಮೆಯನ್ನು ಒಬ್ಬರಿಗೊಬ್ಬರು ವರ್ಣಿಸುತ್ತಾ ಅತಿಶಯ ಪ್ರೇಮಾ ಸಂಪ ಭರದಿಂದ ಗದ್ಗದಕಂಠವುಳ್ಳವರೂ ರೋಮಾಂಚ-ಸುಖಾಶ್ರುವುಳ್ಳವರೂ ಆಗಿ ತಮ್ಮ ಕುಲವನ್ನೂ ಲೋಕವನ್ನೂ ಪವಿತ್ರಮಾಡುತ್ತಾರೆ.

ಬ್ರಹ್ಮಾನಂದಾಮೃತಪಾನಮಾಡಿರುವ ಭಕ್ತರು ತೀರ್ಥಗಳನ್ನೂ ಕರ್ಮ ಗಳನ್ನೂ ಶಾಸ್ತ್ರಗಳನ್ನೂ ಪಾವನಮಾಡುತ್ತಾರೆ.

ಭಗವಂತನ ಸಾಕ್ಷಾತ್ಕಾರ ಮಾಡಿಕೊಂಡಿರುವ ಮಹಾತ್ಮನಿಂದ ಪಿತೃ ಗಳು ಸಂತೋಷಪಡುತ್ತಾರೆ; ದೇವತೆಗಳು ನರ್ತಿಸುತ್ತಾರೆ; ಭೂಲೋಕವೇ ಸನಾಥವಾದಂತೆ ಕಲ್ಯಾಣವನ್ನು ಪಡೆಯುತ್ತದೆ."

ಭಾಗವತದಲ್ಲಿ ಹೇಳಿರುವುದೇನೆಂದರೆ,

**ಯಾನಾಸ್ಥಾಯ ನರೋ ರಾಜನ್ ನ ಪ್ರಮಾದ್ಯೇತ ಕರ್ಹಿಚಿತ್ ।**
**ಧಾವನ್ನಿಮೀಲ್ಯ ವಾ ನೇತ್ರೇ ನ ಸ್ಖಲೇನ್ನ ಪತೇದಿಹ ॥**

"ಭಕ್ತಿಯೋಗ ಮಾರ್ಗದಲ್ಲಿ ಕಣ್ಣು ಮುಚ್ಚಿಕೊಂಡು ಓಡಿದರೂ ಎಡವುವುದೂ ಇಲ್ಲ, ಬೀಳುವುದೂ ಇಲ್ಲ, ಎಂದೂ ತಪ್ಪಿತಸ್ಥನೂ ಆಗುವುದಿಲ್ಲ" ಆದ್ದರಿಂದ,

**ಅಕಾಮಃ ಸರ್ವಕಾಮೋ ವಾ ಮೋಕ್ಷಕಾಮ ಉದಾರಧೀಃ ।**
**ತೀವ್ರೇಣ ಭಕ್ತಿಯೋಗೇನ ಯಜೇತ ಪುರುಷಂ ಪರಂ ॥**

"ಯಾವ ಬಯಕೆಯೂ ಇಲ್ಲದಿದ್ದರೂ ಎಲ್ಲಾ ಕಾಮನೆಗಳೂ ಇದ್ದರೂ ಮೋಕ್ಷ ಕಾಮನೇ ಆದರೂ ವಿವೇಕಿಯು ತೀವ್ರವಾದ ಭಕ್ತಿಯೋಗದಿಂದ ಭಗವಂತ ನನ್ನು ಪೂಜಾ ಧ್ಯಾನಾದಿಗಳಿಂದ ಸೇವಿಸಬೇಕು."

**ಯತ್ಕರ್ಮಭಿರ್ಯತ್ತಪಸಾ ಜ್ಞಾನವೈರಾಗ್ಯತಶ್ಚ ಯತ್ ।**
**ಯೋಗೇನ ದಾನಧರ್ಮೇಣ ಶ್ರೇಯೋಽಭಿರಿತರೈರಪಿ ।**
**ಸರ್ವಂ ಮದ್ಭಕ್ತಿಯೋಗೇನ ಮದ್ಭಕ್ತೋ ಲಭತೇಽಂಜಸಾ ॥**

" ಕರ್ಮಯೋಗ, ರಾಜಯೋಗ ಮತ್ತು ಜ್ಞಾನಯೋಗ ಇವುಗಳಿಂದಲೂ, ವೈರಾಗ್ಯ ಯೋಗ ದಾನ ಧರ್ಮ ಮೊದಲಾದ ಇತರ ಕಲ್ಯಾಣಸಾಧನಗಳಿಂದಲೂ ಪಡೆಯುವುದನ್ನೆಲ್ಲಾ ನನ್ನ ಭಕ್ತಿಯೋಗದಿಂದ ನನ್ನ ಭಕ್ತನು ಪಡೆಯುತ್ತಾನೆ. "

ನಾರದ ಭಕ್ತಿಸೂತ್ರದಲ್ಲಿ ಹೇಳಿರುವುದೇನೆಂದರೆ.

**ತ್ರಿಸತ್ಯಸ್ಯ ಭಕ್ತಿರೇವ ಗರೀಯಸೀ ।**
**ಭಕ್ತಿರೇವ ಗರೀಯಸೀ ॥**

ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನ ಭಕ್ತಿಯೇ ಶ್ರೇಷ್ಠವಾದುದು ! ಭಕ್ತಿಯೇ ಉತ್ಕೃಷ್ಟವಾದುದು !! ಆದ್ದರಿಂದ

**ತದೇವ ಸಾಧ್ಯತಾಂ ತದೇವ ಸಾಧ್ಯತಾಂ ।**

ಅದನ್ನೇ ಸಾಧಿಸಿರಿ ! ಆ ಭಕ್ತಿಯನ್ನೇ ಸಾಧಿಸಿರಿ !!



Printed at Sarvodaya Mudranalaya, Anathasevasrama, Malladihalli. K. B. No. 12, — February, 1956.

# ಆಶ್ರಮದ ಪ್ರಕಟನೆಗಳ ಬಗ್ಗೆ

**ದೇವರು ಯಾರು?:**—ಈ ಗ್ರಂಥದಲ್ಲಿ ದೇವರು ಯಾರು? ಎಂಬೀ ವಿಚಾರವನ್ನು ಗ್ರಂಥಕರ್ತರು ಪಾಶ್ಚಾತ್ಯ ವಿಜ್ಞಾನಿಗಳ ಮತ್ತು ನಮ್ಮ ಪ್ರಾಚೀನ ದಾರ್ಶನಿಕರ ದೃಷ್ಟಿಗಳೆರಡರಿಂದಲೂ ಚೆನ್ನಾಗಿ ವಿಮರ್ಶಿಸಿದ್ದಾರೆ—ಗ್ರಂಥವು ವಾಚನೀಯವೂ, ವಿಮರ್ಶನೀಯವೂ ಆಗಿದೆ.

— ಸುಬೋಧ, ಮಾರ್ಚಿ, 1950.

ವಿಜ್ಞಾನವನ್ನು ವಿಪರೀತವಾಗಿ ಬಲ್ಲೆನೆಂದು ತಿಳಿದುಕೊಂಡವರು ದೇವರನ್ನು ಹೀಯಾಳಿಸುವುದುಂಟು. ದೇವರಲ್ಲಿ ವಿಪರೀತ ನಂಬಿಕೆ ಇರುವುದಾಗಿ ತಿಳಿದುಕೊಂಡವರು ವಿಜ್ಞಾನವನ್ನು ಹೀಯಾಳಿಸುವುದುಂಟು. ಆದರೆ ಇವೆರಡು ವಾದಗಳನ್ನೂ ಒಟ್ಟುಗೂಡಿಸಿ ಹತ್ತಿರಕ್ಕೆ ತರಲು ಶ್ರೀ ಮೂರ್ತಿಯವರು ಈ ಆಸಕ್ತಿಕರವಾದ ಪುಸ್ತಕದಲ್ಲಿ ಪ್ರಯತ್ನಿಸಿದ್ದಾರೆ.

— ತಾಯಿನಾಡು, 22–4–1950.

ಶ್ರೀ ಮೂರ್ತಿಗಳ ಈ ವಿದ್ವತ್ಪೂರ್ಣವಾದ ಜಿಜ್ಞಾಸೆ ವಿಚಾರಶೀಲರೆಲ್ಲರಿಗೂ ಸಂತೋಷ ಉಂಟುಮಾಡುವುದು ಖಂಡಿತ. ಅಂತೆಯೇ ಇದೊಂದು ಹಿರಿಮೆಯ ಗ್ರಂಥ.

— ದೇಶಬಂಧು, 13–4–50.

ಅನುಭವಗಮ್ಯವಾದ ನವೀನತರದ ಇವರ ಬರಹದ ಮೆರಗು ಬೆರಗುಗೊಳಿಸುತ್ತದೆ.

— ಸುಖಾಶ್ರಯ ಪ್ರಬೋಧ, ವಿಕ್ರಮ ಸಂ. ಆಷಾಢ.

**ಚೆಂಗೂಲಿ ಚಲುವ :**—ನಾ. ಕಸ್ತೂರಿಯವರು ಹುಟ್ಟು ಕತೆಗಾರರು. ಕಾದಂಬರಿಯನ್ನು ಕೊನೆಯವರೆಗೂ ಓದಿ ಮುಗಿಸುವವರೆಗೂ ನಮ್ಮ ಮನಸ್ಸು ಕಾದಂಬರಿಯ ಪ್ರಪಂಚದಲ್ಲಿಯೇ ಸುಳಿದಾಡುತ್ತಿರುತ್ತದೆ. "ಚೆಂಗೂಲಿ ಚಲುವ" ಒಮ್ಮೆ ಓದಿ, ಗ್ರಾಮ್ಯಭಾಷೆಯ ಸೌಂದರ್ಯವನ್ನು ಮನದಣಿಯ ಉಂಡು, ಕಸ್ತೂರಿಯವರ ಹಾಸ್ಯದಲ್ಲಿ ನಕ್ಕುನಲಿಯಬೇಕಾದಂತಹ ಒಂದು ಉತ್ತಮ ಕಾದಂಬರಿ.

— ಜನಪ್ರಗತಿ, 27–9–53.

ತಮ್ಮ ತಿಳಿಯಾದ ಹಾಸ್ಯದಿಂದ ಕನ್ನಡ ಸಾಹಿತ್ಯಕ್ಕೆ ನಗುವನ್ನು ಕಲಿಸಿದ ಶ್ರೀ ನಾ. ಕಸ್ತೂರಿಯವರು "ಚೆಂಗೂಲಿ ಚಲುವ"ನ ಆತ್ಮಕತೆಗೆ ಲಿಪಿಕಾರರಾಗಿದ್ದಾರೆ. ಶ್ರೀ ನಾ. ಕಸ್ತೂರಿಯವರು ದಿಸಗೂಲಿ ಚಲುವನ ಬಾಳನ್ನು ತಮ್ಮ ಈ ಕಾದಂಬರಿಯಲ್ಲಿ

ಯಥಾವತ್ತಾಗಿ, ಹೃದಯಂಗಮವಾಗಿ ಚಿತ್ರಿಸಿ ಕನ್ನಡ ಸಾಹಿತ್ಯಕ್ಕೆ ಹೊಸ ಮಾದರಿಯ ಕಾಣಿಕೆ ಸಲ್ಲಿಸಿದ್ದಾರೆ.

ಗ್ರಂಥಕರ್ತರು ಶ್ರೀ ನಾ. ಕಸ್ತೂರಿ ಅವರೆಂದಮೇಲೆ ಇನ್ನು ಅವರ ರಚನೆ, ಶೈಲಿ ಘೋರಣೆ, ವಿಷಯನಿರೂಪಣಾ ವೈಖರಿ, ಕಥಾಸ್ವಾರಸ್ಯ ಇವುಗಳನ್ನು ಕುರಿತು ಪ್ರತ್ಯೇಕ ಹೇಳಬೇಕಾಗಿಲ್ಲ.

— ಸುಬೋಧ, ಏಪ್ರಿಲ್, 1953.

**ಕರ್ಮಯೋಗಿ :**—ಲೇಖಕರು, ಗ್ರಾಮವಾಸಿಯಾದ ಒಬ್ಬ ರೈತನ ಜೀವನವು ನಿಸ್ವಾರ್ಥವಾಗಿ, ನಿರಾಡಂಬರವಾಗಿ, ಆಲಸಿಕೆ ಇಲ್ಲದೆ ನಡೆದರೆ ಅದರಿಂದ ಅವನ ಮನೆತನಕ್ಕೂ, ಗ್ರಾಮಕ್ಕೂ, ದೇಶಕ್ಕೂ ಎಂತಹ ಮೇಲ್ಮೆ ಉಂಟಾಗಬಹುದೆಂದು ವ್ಯಕ್ತಪಡಿಸಲು ಈ ನಾಟಕವನ್ನು ಬರೆದಿರುವಂತೆ ತೋರುತ್ತದೆ.

— ಸುಬೋಧ, ಏಪ್ರಿಲ್, 1948.

ಹಳ್ಳಿಯ ರೈತಜೀವನದ ಚಿತ್ರವನ್ನು ಈ ನಾಟಕದಲ್ಲಿ ಚಿತ್ರಿಸಲಾಗಿದೆ.

— ಸ್ವದೇಶಾಭಿಮಾನಿ, 16–4–1948.

ಪ್ರಾದೇಶಿಕವಾದ ಗ್ರಾಮ್ಯಭಾಷೆಯಲ್ಲಿ ರಚಿತವಾದ ಈ ನಾಟಕವು ಬೋಧಪ್ರದವಾಗಿಯೂ, ರಂಗಭೂಮಿಗೆ ಅರ್ಹವಾಗಿಯೂ ಇದೆ.

— ಪ್ರಜಾಮತ, 30–5–48.

**ಉದ್ಧಾರ :**—ಇದೊಂದು ಉತ್ತಮ ಸಾಮಾಜಿಕ ನಾಟಕ. ಅಷ್ಟೇ ಅಲ್ಲ, ಸಮಾಜವನ್ನು ತಿದ್ದಲು ಬಯಸಿ ಬರೆದ ನಾಟಕ.

— ತಾಯಿನಾಡು, 9–4–1949.

ಈ ನಾಟಕದಿಂದ ಕನ್ಯಾಶುಲ್ಕ, ವರದಕ್ಷಿಣೆ, ಕನ್ಯಾವಿಕ್ರಯ, ಬಾಲ್ಯವಿವಾಹ ಇವೆಲ್ಲ ಕಾರಣಗಳಿಂದ ಸಮಾಜದಲ್ಲಿ ಯಾವ ರೀತಿ ಅನ್ಯಾಯ, ಅನರ್ಥಗಳು ಪ್ರತಿಕ್ಷಣಕ್ಕೂ ನಡೆಯುತ್ತಿವೆ ಎಂಬುದನ್ನು ತಿಳಿಯಬಹುದು.

— ಪ್ರಜಾಮತ, 24–4–1949.

ವೃದ್ಧವಿವಾಹ, ವಿಧವೆಯರ ಒತ್ತಾಯದ ಬ್ರಹ್ಮಚರ್ಯ ಮೊದಲಾದ ಸಾಮಾಜಿಕ ದುಷ್ಟಾಚಾರಗಳನ್ನು ಹೋಗಲಾಡಿಸುವ ಉದ್ದೇಶದಿಂದ ಬರೆದ ಹಳೇ ಮಾದರಿಯ ಸಂಗೀತನಾಟಕ.

— ಕರ್ಮವೀರ, 15–4–1949.

ಕಥೆ ಸ್ವಾರಸ್ಯವಾಗಿದೆ. ಪಾತ್ರರಚನೆ ಜೀವಂತವಿದೆ. ಜಾಡುಗಳು ಲಲಿತವಾಗಿ ಮನೋಹರವಿರುತ್ತವೆ. ನಾಟಕವು ಓದುವುವಕ್ಕೂ, ರಂಗಭೂಮಿಯಲ್ಲಿ ಆಡುವುದಕ್ಕೂ ಚೆನ್ನಾಗಿದೆ.

— ಸ್ವದೇಶಾಭಿಮಾನಿ, 22-4-49.

ನಮ್ಮ ಸಮಾಜದಲ್ಲಿ ನರಳಿ ಹಾರಿಗೆಡುತ್ತಿರುವ ಹೆಣ್ಣುಮಕ್ಕಳ ದುಸ್ಥಿತಿಯನ್ನು ವರ್ಣಿಸಿ, ಅವರ ಉದ್ಧಾರವನ್ನು ನವತರುಣರು ಮಾಡಬೇಕೆಂದು ಪ್ರಚೋದಿಸುವ ಕೃತಿ ಈ ನಾಟಕ. ಸಮಾಜದ ಕಣ್ಣು ತೆರೆಯಿಸುವ ಇಂಥಾ ನಾಟಕಕ್ಕೆ ಪ್ರಗತಿಪರ ಕನ್ನಡಿಗರೆಲ್ಲರ ಬೆಂಬಲವಿದೆ.

— ಕತೆಗಾರ, ಜೂನ್, 1949.

**ರಣಚಂಡಿ** :—ಕಥೆಯ ಸವಿಗಟ್ಟು ಸಾಮಾನ್ಯವಾಗಿದ್ದರೂ ಬರೆಹದ ಸವಿಗಟ್ಟು ಬೆರಗನ್ನುಂಟುಮಾಡುತ್ತದೆ.

— ಸುಖಾಶ್ರಯ ಪ್ರಬೋಧ.

ಅವರ ಸರಳ ಶೈಲಿ, ತಿಳಿಹಾಸ್ಯ, ಪಾತ್ರರಚನಾ ಕೌಶಲ ಇವೆಲ್ಲಾ ಅವರ ಬರಹಗಳಿಗೆ ಮೆರಗು ಕೊಡುತ್ತವೆ.

— ಕತೆಗಾರ, ಆಗಸ್ಟ್, 1950.

ಲೇಖಕರು ನಾಟಕವನ್ನು ಸ್ವಾರಸ್ಯ ಕಳೆಯದಂತೆ ನಿರ್ವಹಿಸಿದ್ದಾರೆ.

— ತಾಯಿನಾಡು.

**ಉಷಾ ಸ್ವಯಂವರ** :—ಈ ನಾಟಕವು ರಂಗಭೂಮಿಗೆ ಅನುವಾಗಿ ಜನ ರಂಜನೆಗೆ ಒಗ್ಗುವಂತೆ ಹಾಡುಗಳಿಂದ ಕೂಡಿದೆ.

— ವಿಶ್ವಕರ್ನಾಟಕ, 17-4-50.

ಇದು ಹಳೇ ಪೌರಾಣೋಕ್ತ ತಂಗಳ ಕತೆಯಾದರೂ ಶ್ರೀ ತಿರುಕರ ಅಕ್ಕರದ ಲೆಕ್ಕಣಿಕೆಯ ಸೊಬಗಿನಿಂದ ತಿಂಗಳಬೆಳಕನ್ನುಂಟುಮಾಡುತ್ತದೆ.

— ಸುಖಾಶ್ರಯ ಪ್ರಬೋಧ, ವಿಕೃತಿ ಸಂ. ಜ್ಯೇಷ್ಠ.

ಪೌರಾಣಿಕ ನಾಟಕಕ್ಕೂ ಸಾಹಿತ್ಯದ ಮೆರುಗನ್ನು ಕೊಟ್ಟು ಎಲ್ಲ ದರ್ಜೆಯ ವಾಚಕರೂ ಓದುವಂತಹ ಆಕರ್ಷಕ ಶೈಲಿಯಲ್ಲಿ ರಚಿಸಿದ್ದಾರೆ.

— ತಾಯಿನಾಡು, 13-5-50.

**ಹಣ್ಣುಕಾಯಿ** :—ಲೇಖಕರಿಗೆ ಕನ್ನಡ-ಕರ್ನಾಟಕ ಪ್ರೇಮ ಹೆಚ್ಚೆಂದು ಕಾಣುತ್ತೆ. ಅಂತೆಯೇ "ಕನ್ನಡಿಗನೊಡನೆ ಬಾಂಧವ್ಯ ಉಳಿಸಿದುದಕ್ಕೆ...." ಎಂದು ಹೇಳಿದ್ದಾರೆ. ಒಟ್ಟಿನಲ್ಲಿ ಕವನಸಂಗ್ರಹ ಉತ್ತಮವಾಗಿದೆ. ಅಲ್ಲಲ್ಲಿ ಸರಳರೂಪದಲ್ಲಿ ಗಹನ ತತ್ವಗಳನ್ನಡಗಿಸಿ ಬರೆದಿರುವ ಪದ್ಯಗಳೂ ಕಾಣುತ್ತವೆ.

ಭಾವಗೀತೆ, ಪದ್ಯ, ಲಾವಣಿ ಮೊದಲಾದುವುಗಳ ಸಮರಸ ಬೆರಕೆಯನ್ನುಳ್ಳ ಈ ಸುರಸ ಕವನಸಂಗ್ರಹವನ್ನು ಎಲ್ಲರೂ ಆದರದಿಂದ ಸ್ವಾಗತಿಸಬಹುದಾಗಿದೆ.

— ತಾಯಿನಾಡು, 9-1-50.

ಈ ಹಣ್ಣುಕಾಯಿಗಳಲ್ಲಿ "ತಿರುಕ" ರು ತಮ್ಮ ಆತ್ಮಸಂತೋಷಕ್ಕಾಗಿ ರಚಿಸಿಕೊಟ್ಟಿರುವ ಹಲಕೆಲವು ಪದ್ಯಗಳು ಭಾವಗರ್ಭಿತವಾಗಿಯೂ, ಶ್ರಾವ್ಯವಾಗಿಯೂ, ಅರ್ಥವತ್ತಾಗಿಯೂ ಇವೆ.

— ಸುಬೋಧ, ಜನವರಿ, 1950.

ಈ ಕವಿತಾಸಂಕಲನದಲ್ಲಿ ಕವನಗಳ ಸಂಗ್ರಹ, ಕ್ರೀಡಾರಂಗದ ಹಾಡು, ಮೇಳ, ಪೇಪರನಾಮ ಮತ್ತು ಭಾವಗೀತೆಗಳು ಎಂಬ ಮೂರು ಭಾಗಗಳಿವೆ. ಕಾಲ್ದಳಗೀತಾ, ಲೆಜಿಂ, ಡಂಬೆಲ್ಸ್ ಮೊದಲಾದ ತಾಳಬದ್ಧ ಸಾಂಘಿಕ ವ್ಯಾಯಾಮಕ್ಕಾಗಿ ಬರೆದ ಕವಿತೆ ಇವೆ.

— ಪುಸ್ತಕ ಪ್ರಪಂಚ, ಜನವರಿ, 1950.

**ಪೂಜೆ** :—ಎಲ್ಲ ಕವನಗಳ ಹಿಂದೆಯೂ ಉನ್ನತ ಮನನೀಯ ನೀತಿ ಇದೆ. ಉನ್ನತ ಭಾವನೆಗಳಿಲ್ಲಿವೆ. ನಾಡ ಜನತೆಯ ಪೂಜೆಗಾಗಿ ತನ್ನ ಅರಳಿದ ಹೃದಯಪುಷ್ಪದ ಮಾಲಿಕೆಯನ್ನೇ ಈ "ತಿರುಕ" ಅರ್ಪಿಸಿದ್ದಾನೆ! ಬಾಳ ಬೆಳಕಿನ ಕಿರಣ ಇದು.

— ತಾಯಿನಾಡು, 17-11-51.

ಬಾಳಿನಲ್ಲಿ ವ್ಯಕ್ತವಾಗುವ ಶ್ರೇಷ್ಠವಾದ ಕಲ್ಪನಾ ವಿಲಾಸವೇ ಇಲ್ಲಿನ ಕವಿತೆಯ ಗುಣ. ಮುಖ್ಯ ಗುರಿ ಮನಸ್ಸಿನ ಪರಿಪಕ್ವತೆಯನ್ನು ಸಾರಿಹೇಳುವುದು. ಲೇಖಕರು ಸಲ್ಲಿಸುತ್ತಿರುವ ಸಾರ್ವಜನಿಕ ಸೇವೆ ಹೇಗೆ ಜನಪ್ರಿಯವೆನ್ನಿಸಿದೆಯೋ ಅಂತೆಯೇ ಅವರು ಕೈಕೊಂಡಿರುವ ಈ ಸಾಹಿತ್ಯಸೇವೆಯೂ ಜನಕ್ಕೆ ಪ್ರಿಯವಾಗಲೆಂದು ಕೋರುತ್ತೇವೆ.

— ಕಥಾವಳಿ, ಡಿಸೆಂಬರ್, 1951.

ಪೂಜೆ ಸುಂದರವಾಗಿ ಮುದ್ರಿತವಾಗಿದೆ. ಈ ಸಂಗ್ರಹದಿಂದ ಅರಳಿದ ಕುಸುಮಗಳನ್ನು ಆಯ್ದುಕೊಳ್ಳುವುದಕ್ಕಾಗಿ ಓದುಗರು "ಪೂಜೆ"ಯನ್ನು ಕೈಗೆತ್ತಿಕೊಳ್ಳಬೇಕು.

— ಚಿತ್ರಗುಪ್ತ, 13-1-52.

**ಕೊನೆಯ ಗುಟುಕು :**—"ಕೊನೆಯ ಗುಟುಕು" ಕಾದಂಬರಿಯ ಕಥಾನಾಯಕಿ ಶಾಂತೆಯು ಸುಶಿಕ್ಷಿತ ಸುಶೀಲ ತರುಣಿಯಾದರೂ ತನ್ನ ಜೀವಿತದ ಮಧ್ಯಕಾಲದಲ್ಲಿ ಬಂದೊದಗಿದ ದುರದೃಷ್ಟಕರ ತೊನ್ನುರೋಗದ ನಿಮಿತ್ತ ನಿಷ್ಕರುಣೀ ಸಮಾಜದ ಮೂದಲಿಕೆಗಳ ಸುಳಿಗೆ ಸಿಕ್ಕಿ ಜಿಗುಪ್ಸೆ-ನಿರಾಶೆಗಳಿಂದ ನೊಂದು ಕೊನೆಗೆ ಆತ್ಮಾರ್ಪಣ ಮಾಡಿದ ದುರಂತ ಕತೆಯನ್ನು ಲೇಖಕರು ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಪ್ರಜಾವಾಣಿ, ಮಾರ್ಚಿ 25, 1951.

**ಮೂಳೆಯ ಹಂದರ :**—ಇದು ಕಟ್ಟುಕಥೆಯಲ್ಲ. "ತಿರುಕ" ಎಂಬ ನಾಮಾಂಕಿತದಿಂದ ಸಾಧು ರಾಘವೇಂದ್ರರಾಯರು ತಮ್ಮ ಆತ್ಮಕಥೆಯನ್ನೇ ನಿರೂಪಿಸಿದ್ದಾರೆ. ಗ್ರಂಥವು ಲೇಖಕರ ಅತ್ಯುನ್ನತ ಮಟ್ಟದ ಸಾಹಿತ್ಯವನ್ನು ಪ್ರತಿಬಿಂಬಿಸುವ ಕೈಗನ್ನಡಿಯಂತಿದೆ. ಶೈಲಿಯು ಸರಳ ಮತ್ತು ಭಾವಪೂರ್ಣ.

— ಸೇವಾಸದನ, 16-3-54.

"ತಿರುಕ"ರು ಇದನ್ನು ಕಾದಂಬರಿ ಎಂದು ಕರೆದಿದ್ದಾರೆ. ಕಥಾನಾಯಕ ಗುರುಚರಣನ ವ್ಯಕ್ತಿತ್ವದಲ್ಲಿ ತಮಗೆ ಪ್ರಿಯವಾದ ಆದರ್ಶವನ್ನು ತುಂಬಿ ಜೀವನ ವೃತ್ತಾಂತದ ರೀತಿಯಲ್ಲಿ ಒಂದು ಕೃತಿಯನ್ನು ರಚಿಸಿದ್ದಾರೆ.

— ಚಿತ್ರಗುಪ್ತ, 16 ನವೆಂಬರ್, 1952.

ಅಂದು ಬಾಪೂಜಿ ಶ್ರೀ ಗಾಂಧೀಜಿಯವರು ತಮ್ಮ ಸ್ವೀಯಚರಿತ್ರೆಯನ್ನು ಬರೆದುಕೊಂಡಂತೆ ಇಂದು ಅವರ ಅನುಯಾಯಿಗಳಾದ ಶ್ರೀಮಾನ್ ತಿರುಕರು ಕೂಡ ತಮ್ಮ ಸ್ವೀಯಚರಿತ್ರೆಯನ್ನು ಈ "ಮೂಳೆಯ ಹಂದರ" ವೆಂಬ ಹೆಸರಿನಿಂದ ಆಶ್ರಮದ ಪರವಾಗಿ ಹೊರಗೆಡಹಿದುದು ಪೂಜ್ಯ ಗಾಂಧೀಜೀಯ ಸತ್ಯಸಂದೇಶವನ್ನೆತ್ತಿ ತೋರಿಸುತ್ತದೆ. ಮೊತ್ತಮೊದಲಲ್ಲಿ ಈ ಗ್ರಂಥದಿಂದ ಓದುಗರು ಅನಾಥಸೇವಾಶ್ರಮದ ಸಂಪೂರ್ಣ ಪರಿಚಯ ಮಾಡಿಕೊಳ್ಳಬಹುದು.

— ಸುಖಾಶ್ರಯ ಪ್ರಬೋಧ, 1874ನೇ ನಂದನ ಸಂ. ಮಾಘ.

**ಚಿತೆಯೋ ಸಮಾಧಿಯೋ :**—ಲೋಕಸೇವೆಗೆಂದು ಜೀವನವನ್ನು ಮುಡಿಪಾಗಿ ಇಟ್ಟು, ಹಗಲೂ ಇರುಳೂ ಲೋಕಸೇವೆಗಾಗಿ ದುಡಿಯುತ್ತಿರುವವರ ಸ್ವಾನುಭವದ ಆಧಾರದ ಮೇಲೆ ಬರೆದಿರುವ ಕಾದಂಬರಿ ಇದು.

— ಜನಪ್ರಗತಿ, ಅಕ್ಟೋಬರ್ 4, 1953.

ಇದು ಸಾಧಕನೊಬ್ಬನ ಜೀವನವೃತ್ತವೂ ಹೌದು; ರಮ್ಯ ಕಾದಂಬರಿಯೂ ಹೌದು. ಕಟ್ಟುಕತೆಯನ್ನು ಮೀರಿಸುವಷ್ಟು ಅದ್ಭುತವಾದ ವಾಸ್ತವಜೀವನವನ್ನು ಚಿತ್ರಿಸಿ. "ತಿರುಕ"ರೊಂದು ಕೃತಿ ರಚಿಸಿದ್ದಾರೆ. ಈ ಕೃತಿಯ ಮೂಲಕ ಓದುಗರು ಮೂಕರಾಗುವ ಹಾಗೆ ಸಮಾಜಕ್ಕೆ ಸವಾಲುಗಳನ್ನು ಹಾಕಿದ್ದಾರೆ. ಉತ್ತರ ಕೊಡುವವರು ಯಾರು ? .... ಯಾರು ?

— ಚಿತ್ರಗುಪ್ತ, 10 ಮೇ, 1953.

**ಉದಯಾಸ್ತ :**—ಲೇಖಕರು ಆದರ್ಶವಾದಿಗಳೆಂದು ತಿಳಿದುಬರುತ್ತದೆ. ಅವರು ಚಿತ್ರಿಸಿರುವ ಸಮಾಜವು ನಮ್ಮಲ್ಲಿ ನಿಜವಾಗಿ ಬಂದರೆ ಅದು ನಮ್ಮ ಸುದೈವ. ಒಟ್ಟಿನಲ್ಲಿ ಕಾದಂಬರಿಯು ಓದಲು ಚನ್ನಾಗಿದೆ. ಚಂಪೆಯ "ಉದಯಾಸ್ತ" ಹೃದಯಂಗಮವಾಗಿ ಇದೆ. ಕನ್ನಡಿಗರು ಈ ಕಾದಂಬರಿಯನ್ನು ಓದಿ ಆದರ್ಶಜೀವಿಗಳಾಗಬೇಕೆಂದು ಬಯಸುತ್ತೇವೆ.

— ಕತೆಗಾರ, 1954.

ಕತೆಯ ವಾತಾವರಣ ಸಾಮಾನ್ಯ ಜೀವನಕ್ಕೆ ಸಂಬಂಧಿಸಿದ್ದು. ಉತ್ತಮ ಕುಲದಲ್ಲಿ ಹುಟ್ಟಿ ಅದೃಷ್ಟದಿಂದ ತಿರುಪೆಗೆ ಬಿದ್ದ ತಂದೆಮಗಳು ಅಭಿಮಾನದ ಜೀವನವನ್ನು ನಡೆಸಿದರು. ಮಾನವ ಎಂಥ ವೃತ್ತಿಯಲ್ಲಿರಲಿ, ವೃತ್ತಿಗೆ ಸಂಬಂಧಿಸಿದಂತೆ ನೀಚರೂ ಸದ್ಗೃಹಸ್ಥರೂ ಇದ್ದೇ ಇರುತ್ತಾರೆ. ಕಷ್ಟಸುಖಗಳು ಮಾನವನ ಜೊತೆಯಲ್ಲಿ ಹುಟ್ಟಿ ಬೆಳೆಯುತ್ತವೆ. ತಮ್ಮ ಧೃತಿ ಒಂದು, ನಡತೆ ಒಂದು, ಮನಸ್ಸು ಒಂದು ಎಂದು ನಡೆದರೆ ತನಗೆ ಕಷ್ಟ ಒದಗಿದರೂ ಆತ್ಮಾನಂದ ಉಂಟು. ಸಮಾಜದ ದೃಷ್ಟಿಯಿಂದಲೂ ಒಳ್ಳೆಯ ಜೀವ ಎಂಬ ಕೀರ್ತಿಯುಂಟು ಎಂಬುದನ್ನೂ ಕಾದಂಬರಿ ಸೂಚಿಸುತ್ತದೆ.

— ಕನ್ನಡನುಡಿ, ಮೇ, 1954.

ಕಾದಂಬರಿ ಕ್ಷೇತ್ರದಲ್ಲಿ "ತಿರುಕ" "ಉದಯಾಸ್ತ" ಕಾದಂಬರಿಯನ್ನು ರಚಿಸಿ, ತಮ್ಮದೇ ಆದ ವೈಶಿಷ್ಟ್ಯವನ್ನು ಗಳಿಸಿದ್ದಾರೆ. ಶ್ರೀ ತಿರುಕರು ಭಿಕ್ಷುಕವರ್ಗವನ್ನು ತಮ್ಮ ಕಾದಂಬರಿಯ ಮೂಲವಸ್ತುವಾಗಿ ಆಯ್ದುಕೊಂಡು ಭಿಕ್ಷಾವೃತ್ತಿಯಲ್ಲಿರುವ ಭಿನ್ನಭಾವ ಅನ್ಯಾಯ ಮೊದಲಾದುವುಗಳನ್ನು ತಮ್ಮ ಈ ಕಾದಂಬರಿಯಲ್ಲಿ ಉತ್ತಮ ಮಟ್ಟದಲ್ಲಿ ಚಿತ್ರಿಸಿದ್ದಾರೆ.

— ಜನವಾಣಿ, 24-4-54.

In this, his fourth novel, the author has admirably portrayed the life of a begger girl, Champa. When he

took up this work, the author admits, he had no definite plans, but, as he began to wield his pen, he asserts to have been inspired into creating a number of ideal characters most of whom move about in an atmosphere of love and affection. Passion, which is made to appear indispensable in most of the present-day novels, has fortunately no place in this book. 'Tiruka' has remarkably succeeded in evoking the true sympathy of the reader for the helpless.

— DECCAN HERALD.

**ದೇವರ ಉಪವಾಸ :**—ಹತ್ತು ಸಣ್ಣ ಕತೆಗಳನ್ನು ಒಳಗೊಂಡಿರುವ ಈ ಸಣ್ಣ ಪುಸ್ತಕವನ್ನು ಆದರದಿಂದ ಸ್ವಾಗತಿಸುತ್ತೇವೆ. ಕಥಾವಸ್ತು, ಕಥಾ ಧ್ಯೇಯಗಳೆರಡೂ ಬಹಳ ಗಮನಾರ್ಹವಾಗಿವೆ. ಉದಾತ್ತ ನೀತಿ ಪ್ರಚಾರವನ್ನು ಸ್ಪಷ್ಟವಾಗಿ ಕಾಣಬಹುದು.

— ಕಥಾವಳಿ, ಏಪ್ರಿಲ್, 51.

ಇವು ಸರಸ ಸಂಕಥನ ಶೈಲಿಯಲ್ಲಿವೆ. ಕಥನದ ಬಗೆ ಸಂವಾದದ ಮಟ್ಟದ್ದು. ಬೇಸರವಾಗದು ಓದುವುದಕ್ಕೆ.

— ಕರ್ಮವೀರ, 12–3–50.

**ಮಹಾಕವಿ ಭಾರವಿ :**—........ ಅಪಾರವಾದ ಪದಸಂಪತ್ತಿನಿಂದ ಹೊರಬಿದ್ದ ಚತುರ ಸಂಭಾಷಣೆ, ಹಿತಮಿತವಾದ ಹಾಸ್ಯ, ಇಂಪಾದ ಹಾಡುಗಳು ಇವುಗಳಿಂದ ನಾಟಕ ಉತ್ತಮ ಕೃತಿಗಳ ಪಂಕ್ತಿಗೆ ಸೇರಲು ತಕ್ಕುದಾಗಿವೆ. ........ ಎಲ್ಲೂ ಬೇಸರವಿಲ್ಲದೆ ನೋಟಕರ ಕುತೂಹಲವನ್ನು ಹಿಡಿದಿಡುವ ಶಕ್ತಿ ಈ ಕೃತಿಗಿವೆ. ಪ್ರತಿಯೊಂದು ಪಾತ್ರದ ರಸಪೋಷಣೆ ಯುಕ್ತವಾಗಿದೆ. ಪಾತ್ರಪೋಷಣೆಯನ್ನು ನಾಟಕದ ಸಮಗ್ರತೆಯನ್ನು ದೃಷ್ಟಿಯಲ್ಲಿಟ್ಟು ಬಹು ಜಾಗರೂಕವಾಗಿ ಮಾಡಿದ್ದಾರೆ. ........ ಮನೋರಂಜನೆಯೊಡನೆ ವಿಚಾರ ದೃಷ್ಟಿಯಿಂದ ಕೂಡಿದ ಇಂಥಾ ನಾಟಕಗಳು ನಮ್ಮ ಜನತೆಗೆ ಅಗತ್ಯ ಬೇಕು. ದೇಶಾದ್ಯಂತ ಈ ನಾಟಕ ಪ್ರದರ್ಶಿತವಾಗಲಿ; ಜನ ನೋಡಿ, ನಲಿದು, ಅರಿಯಲಿ.

— ಕತೆಗಾರ, 1–6–55.

........ ಭಾರವಿಯ ಪ್ರೌಢಿಮೆಯನ್ನು ಸಾರುವುದು ಮಾತ್ರವಲ್ಲದೆ ಜನಜೀವನದ ಸಾಫಲ್ಯದ ಹಾದಿಯನ್ನು ಈ ನಾಟಕ ತೋರಿಸಿಕೊಟ್ಟಿದೆ. ........ ಪ್ರತಿಯೊಂದು ಮಾತು

ಗಳೂ ಸಾಹಿತ್ಯ ಸತ್ವದಿಂದಲೂ, ನೀತಿಬೋಧೆಯಿಂದಲೂ, ಸಮಾಜದರ್ಶನದಿಂದಲೂ ಹೃದಯವನ್ನು ಕಲಕುತ್ತವೆ. 'ಮಹಾಕವಿ ಭಾರವಿ' ಉತ್ತಮ ನಾಟಕ.

ರಾಯಭಾರಿ, 13-4-55.

........ ಭಾರತದ ಪ್ರಾಚೀನ ಮಹಾಕವಿಗಳಲ್ಲೊಬ್ಬನೆಂದು ಪರಿಗಣಿಸಲ್ಪಡುತ್ತಿರುವ ಭಾರವಿಯ ಬಗ್ಗೆ ಹೆಚ್ಚಿನ ಅಂಶಗಳು ಉಪಲಬ್ಧವಿಲ್ಲ. ಸಿಕ್ಕಷ್ಟು ಆಧಾರಗಳಿಗೆ ಕಲ್ಪನೆಯ ಮೆರುಗನ್ನಿತ್ತು 'ಭಾರವಿ' ನಾಟಕ ಬರೆಯಲಾಗಿದೆ. ನಾಟಕದ ಕಥಾವಸ್ತು ಸುಂದರ ವಾಗಿದೆ. ಭಾರವಿಯ ಮನಸ್ಸಿನ ಉದ್ವೇಗಚಿತ್ರಣವು ಸುಂದರವಾಗಿದೆ. ಸಂಭಾಷಣೆಗಳೂ ಚನ್ನಾಗಿವೆ.

— ಕರ್ಮವೀರ, ಏಪ್ರಿಲ್ 25, 1955.

ಸ್ಥಳೀಯ ಸಂಸ್ಥೆಗಳ ಕಮೀಷನರ್‌ರವರ ಕಮ್ಯುನಿಕೇಷ್ ನಂ. E. 7 C. 1753|52-53—13-4-53; R. D. R. 7-1507|52-53—13-12-52 ಮತ್ತು R. D. R. 7-776|50-51—3-8-50 ಗಳ ಮೇರೆಗೆ ನಮ್ಮ ಪುಸ್ತಕಗಳು ಗ್ರಾಮಪಂಚಾಯಿತಿಗಳಿಗೂ ಮತ್ತು ವಿದ್ಯಾ ಇಲಾಖೆಯ ಡೈರೆಕ್ಟರ್‌ರವರ T. B. C. 9|49-50—8-8-50 ಮತ್ತು D. 67|51-52—9-2-52 ಗಳ ಅಪ್ಪಣೆ ಮೇರೆ ವಿದ್ಯಾಸಂಸ್ಥೆಗಳ ಲೈಬ್ರರಿ ಗಳಿಗೂ ಮಂಜೂರಾಗಿದೆ. ಈ ಪುಸ್ತಕಗಳ ಮಾರಾಟದಿಂದ ಬರುವ ಹಣವು ಜನಸೇವೆಯ ಈ ಪವಿತ್ರ ಕಾರ್ಯಕ್ಕಾಗಿಯೇ ಉಪಯೋಗಿಸಲ್ಪಡುವುದರಿಂದ ಗ್ರಾಮಪಂಚಾಯಿತಿಗಳೂ, ವಿದ್ಯಾಸಂಸ್ಥೆಗಳೂ ತಮ್ಮ ಸಂಪೂರ್ಣ ನೆರವು ನೀಡ ಬೇಕೆಂದು ಕೋರಲಾಗಿದೆ.

— **ಪ್ರಕಾಶಕರು.**

# ಅನಾಥ ಸೇವಾಶ್ರಮ

( ಸ್ಥಾಪನೆ: ೧೯೪೩ )

## ಮಲ್ಲಾಡಿಹಳ್ಳಿ ಪೋಸ್ಟ್. (ಹೊಳಲ್ಕೆರೆ ತಾಲ್ಲೂಕು)

:+:+:

ಪ್ರಿಯ ಬಂಧುಗಳೇ,

ಇದೊಂದು ಸಾರ್ವಜನಿಕ ಸೇವಾ ಕೇಂದ್ರ. ಜಾತಿ–ಕುಲಗಳ ಭೇದವಿಲ್ಲದೆ ಜನಸಾಮಾನ್ಯರ ಹಿತದೃಷ್ಟಿಯಿಂದ ಈ ಸಂಸ್ಥೆಯು ದುಡಿಯುತ್ತಿದೆ. ಆರ್ಯಸಂಸ್ಕೃತಿಯ ಮೂಲ ತಳಹದಿಯ ಮೇಲೆ ಇಹಪರಗಳೆರಡರ ಗುರಿಯನ್ನೂ ಸಾಧಿಸಿ ಮಾನವನ ಜೀವನ ಸಾಫಲ್ಯಗೊಳಿಸುವ ಸಮುದ್ದೇಶದಿಂದ ಈ ಸಂಸ್ಥೆಯು ಪ್ರಾರಂಭಿಸಲ್ಪಟ್ಟಿದೆ.

ವಿವಿಧ ರೋಗಗಳಿಂದ ನರಳುವ ಸಾವಿರಾರು ಜನ ಸಂತ್ರಸ್ತರಿಗೆ ಆಶ್ರಮದಲ್ಲಿ ಉಚಿತ ಚಿಕಿತ್ಸೆಯು ನಡೆಯುತ್ತಿದೆ. ರೋಗಿಗಳಿಗಾಗಿ ರುಗ್ಣಾಲಯದ ವ್ಯವಸ್ಥೆಯಾಗಿವೆ

ನೂರಾರು ಬಡ ವಿದ್ಯಾರ್ಥಿಗಳ ಪಾಲನೆ ಪೋಷಣೆಯು ಆಶ್ರಮದಿಂದಲೇ ನಡೆದು ಅವರಿಗೆ ಪ್ರೌಢವಿದ್ಯಾಭ್ಯಾಸದವರೆಗಿನ ಶಿಕ್ಷಣವು ಆಶ್ರಮದಲ್ಲಿ ಕೊಡಲ್ಪಡುತ್ತಿದೆ. ಆಶ್ರಮದಿಂದಲೇ ಒಂದು ಪ್ರೌಢವಿದ್ಯಾಶಾಲೆಯು ನಡೆಸಲ್ಪಡುತ್ತಿದೆ.

ಪಾಶ್ಚಿಮಾತ್ಯ ಮತ್ತು ಪೌರ್ವಾತ್ಯ ಪದ್ಧತಿಯ ವಿವಿಧ ಅಂಗಸಾಧನೆಗಳ ಶಿಕ್ಷಣವು ಆಶ್ರಮದಲ್ಲೇ ಕೊಡಲ್ಪಡುತ್ತಿದೆ. ಇದಕ್ಕಾಗಿ ಭವ್ಯವಾದೊಂದು ವ್ಯಾಯಾಮಶಾಲೆಯು ನಿರ್ಮಿತವಾಗಿದೆ.

ಆಸನ, ಪ್ರಾಣಾಯಾಮ, ಯೋಗಾಭ್ಯಾಸದ ಒಂದು ಶಿಕ್ಷಣಾಂಗವೂ ಆಶ್ರಮದಲ್ಲಿದೆ. ಅವಕ್ಕೆ ಬೇಕಾದ ಅನುಕೂಲ್ಯವನ್ನು ಕಲ್ಪಿಸಿಕೊಡಲಾಗಿದೆ; ಇದರ ಅಂಗವಾಗಿ ತಪೋವನ, ಸಾಧನಮಂಟಪ. ಯೋಗಮಂಟಪಗಳು ನಿರ್ಮಿತವಾಗಿವೆ.

ಆಶ್ರಮದಿಂದಲೇ ಒಂದು ಸಾಹಿತ್ಯಮಾಲೆಯು ಪ್ರಾರಂಭವಾಗಿ ಈಗಾಗಲೇ ಹದಿನೇಳು ಪುಸ್ತಕಗಳು ಹೊರಬಂದಿವೆ. ಇದಕ್ಕಾಗಿಯೇ ಆಶ್ರಮದಲ್ಲಿ ಒಂದು ಮುದ್ರಣಾಲಯವನ್ನು ತೆರೆಯಲಾಗಿದೆಯಲ್ಲದೆ ಸಾಧ್ಯವಾದಷ್ಟು ಜಾಗ್ರತೆ ಒಂದು ಪತ್ರಿಕೆಯನ್ನು ಹೊರಡಿಸಿ ಸಾಹಿತ್ಯಸೇವೆಯನ್ನು ಮುಂದುವರಿಸುವ ಇಚ್ಛೆಯೂ ಆಶ್ರಮಕ್ಕಿದೆ.

ಸಂಗೀತ, ನಾಟಕಗಳ ಸೇವೆಯೂ ಆಶ್ರಮದಿಂದ ನಡೆಯುತ್ತಿದೆಯಲ್ಲದೆ ಅನುಕೂಲ ವಾತಾವರಣ ಒದಗಿದಾಗ ಸಂಗೀತ, ನಾಟ್ಯಕಲಾ ಶಾಲೆಗಳನ್ನು ತೆರೆಯುವ ಮಹತಾಕಾಂಕ್ಷೆಯೂ ಆಶ್ರಮಕ್ಕಿದೆ.

ಒಂದು ಪುಸ್ತಕ ಭಂಡಾರ ಮತ್ತು ವಾಚನಾಲಯದ ಉಚಿತ ಸೇವೆಯನ್ನು ಆಶ್ರಮವು ನೀಡುತ್ತಿದೆ.

ಗ್ರಾಮ ಸಹಕಾರ ಸಂಘ, ಅಂಚೆ ಮನೆಗಳ ಅನುಕೂಲ್ಯವನ್ನು ಆಶ್ರಮವು ಹೊಂದಿರುತ್ತದೆ.

ಒಂದು ಗೋಶಾಲೆಯು ಆಶ್ರಮದಿಂದಲೇ ನಡೆಸಲ್ಪಡುತ್ತಿದ್ದು ರೋಗಿಗಳಿಗೂ, ಮಕ್ಕಳಿಗೂ ಮತ್ತು ವಿದ್ಯಾರ್ಥಿಗಳಿಗೂ ಉಚಿತವಾಗಿ ಹಾಲನ್ನು ಕೊಡುವ ವ್ಯವಸ್ಥೆ ಮಾಡಲಾಗಿದೆ.

ವೃತ್ತಿಶಿಕ್ಷಣಶಾಲೆಯೂ ಆಶ್ರಮದ ಸೇವಾಂಗಗಳಲ್ಲಿ ಸೇರಿಕೊಂಡಿದೆಯಲ್ಲದೆ ಈಗಾಗಲೇ ಮುದ್ರಣಶಾಖೆಯಲ್ಲಿಯೂ ಮತ್ತು ಇತರೆ ಕೆಲವು ಭಾಗಗಳಲ್ಲಿಯೂ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡಲ್ಪಡುತ್ತಿದ್ದು ಇದರ ಬೃಹದ್ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಆರ್ಥಿಕ ಸಹಾಯಕ್ಕಾಗಿ ಕಾಯುತ್ತಿದೆ.

ಆಯುರ್ವೇದ ಶಿಕ್ಷಣಾಲಯವೊಂದನ್ನು ಸ್ಥಾಪಿಸುವ ಮಹತ್ವಾಕಾಂಕ್ಷೆಯೂ ಆಶ್ರಮಕ್ಕಿದೆ.

ಅನಾಥ ಶಿಶು ಪೋಷಣಾಲಯ, ಅನಾಥ ಮಹಿಳಾ ಸೇವಾಶ್ರಮಗಳೂ ಆಶ್ರಮದ ಹಿರಿಯಾಸೆಗಳು. ಆದರೆ ಆರ್ಥಿಕ ಪರಿಸ್ಥಿತಿಯಿಂದಾಗಿ ಸಮಯ ನಿರೀಕ್ಷಿಸುತ್ತಿದೆ.

ಅಧ್ಯಾತ್ಮ ಬೆಳವಣಿಗೆಯ ದೃಷ್ಟಿಯಿಂದಲೂ ಆಶ್ರಮವು ದುಡಿಯುತ್ತಿದೆ.

ಶ್ರಮದಾನ ಯಜ್ಞದ ಫಲವಾಗಿ ಒಂದು ಸುಸಜ್ಜಿತವಾದ ಗೋಶಾಲೆಯ ಕಟ್ಟಡ, ಕಲ್ಲುಕಟ್ಟಡವುಳ್ಳ ಸಿಹಿನೀರಿನ ಭಾವಿ ಮತ್ತು ಕಲ್ಯಾಣಮಂಟಪದಿಂದೊಡಗೂಡಿದ 'ವ್ಯಾಸಪೀಠ' ವೆಂಬ ಭವ್ಯ ಸಭಾಭವನ ಇವುಗಳನ್ನು ಕಟ್ಟಿಸಲಾಗಿವೆ.

ವಿವಾಹಾದಿ ಶುಭಕಾರ್ಯಗಳನ್ನು ನಡೆಸುವ ಉದ್ದೇಶಕ್ಕನುಕೂಲವಾಗುವ ಸುಸಜ್ಜಿತವಾದ ಪಾಕಶಾಲೆಯೊಂದೊಡಗೂಡಿದ 'ಅನ್ನಪೂರ್ಣ ಮಂದಿರ'ವನ್ನೂ ಸಹ ಕಟ್ಟಿಸಲಾಗಿದೆ.

ಆಶ್ರಮಕ್ಕೆ ಅವಶ್ಯಕವಾದ ವಿದ್ಯುಚ್ಛಕ್ತಿಯ ಪೂರೈಕೆಯನ್ನು ವ್ಯವಸ್ಥೆಮಾಡಲಾಗಿದೆ. ಮತ್ತು ವಿದ್ಯುಚ್ಛಕ್ತಿಯ ಸಹಾಯದಿಂದ ನೀರು ಸರಬರಾಜು ಮಾಡಿಕೊಳ್ಳುವ ಯೋಜನೆಯ ಬಗ್ಗೆ ಪ್ರಯತ್ನ ನಡೆದಿದೆ.

ಮುಂದಿನ ಮಹಾಯೋಜನೆಯನ್ನು ರೂಪಕ್ಕೆ ತರಲು ಸುಮಾರು ಹತ್ತು ಲಕ್ಷ ರೂಪಾಯಿಗಳಷ್ಟು ಅಂದಾಜನ್ನು ಮಾಡಲಾಗಿದೆ.

ಹೀಗೆ ಪಾರಮಾರ್ಥಿಕ ಮತ್ತು ಲೌಕಿಕ ಈ ಎರಡರ ಗುರಿಯನ್ನೂ ಕೇಂದ್ರೀಕೃತವನ್ನಾಗಿರಿಸಿಕೊಂಡು ದುಡಿಯುತ್ತಿರುವ ಈ ಆಶ್ರಮಕ್ಕೆ ಧನ ಧಾನ್ಯ ರೂಪವಾದ ಉದಾರ ಸಹಾಯವನ್ನು ನೀಡಿ ಜನತೆಯು ಸಹಕರಿಸಬೇಕಾಗಿ ಕೋರಿದೆ.

**ವ್ಯವಸ್ಥಾಪಕ,**
**ಅನಾಥ ಸೇವಾಶ್ರಮ.**

---

**ವಿ. ಸೂ.**—ಸಹಾಯಮಾಡಲು ಇಚ್ಛೆಯುಳ್ಳ ಮಹನೀಯರು ಈ ಮೇಲ್ಕಂಡ ವಿಳಾಸಕ್ಕೆ ತಮ್ಮ ಉದಾರವಾದ ಸಹಾಯವನ್ನು ಕಳುಹಿಸಬೇಕಾಗಿ ಕೋರಿದೆ.

# ಬೇಕಾಗಿದ್ದಾರೆ !

**ಸೇವಾಮನೋಭಾವವುಳ್ಳ ಉತ್ಸಾಹೀ ವಿದ್ಯಾವಂತ ತರುಣ-ತರುಣಿಯರಲ್ಲಿ ವಿನಂತಿ.**

ಭವ್ಯಭಾರತದ ನಿರ್ಮಾಣಕಾರ್ಯದ ಸೇವೆಯ ಗುರಿಯಲ್ಲಿ ದಿನದಿನಕ್ಕೆ ವಿಸ್ತೃತವಾಗಿ ಬೆಳೆಯುತ್ತಿರುವ ಆಶ್ರಮದ ಹಲವು ಸೇವಾಕ್ಷೇತ್ರದ ಕಾರ್ಯದಲ್ಲಿ ಭಾಗಿಗಳಾಗಿ ಉಚಿತ ಸೇವೆಯನ್ನು ಸಲ್ಲಿಸಲು ಸಿದ್ಧರಾಗಿರುವ (ಶಿಲ್ಪಿಗಳು, ಚಿತ್ರಗಾರರು, ಸಂಗೀತ ನಾಟ್ಯ ಕಲಾವಿದರು, ವೃತ್ತಿಶಿಕ್ಷಕರು, ಕೆಲಸಗಾರರು) ಆಧ್ಯಾತ್ಮಿಕ ಮನೋಭಾವವುಳ್ಳ ಆರೋಗ್ಯದೃಢಕಾಯರಾದ ವಿದ್ಯಾವಂತ ಸ್ತ್ರೀ-ಪುರುಷರು ಬೇಕಾಗಿದ್ದಾರೆ. ನಮ್ಮೀ ಸೇವಾಯಜ್ಞದಲ್ಲಿ ಭಾಗಿಯಾಗಲಿಚ್ಛಿಸುವ ಉತ್ಸಾಹಿಗಳು ತಮ್ಮ ವಯಸ್ಸು, ವಿದ್ಯೆ, ರಚನಾತ್ಮಕ ಸೇವಾಕಾರ್ಯದಲ್ಲಿ ತಮಗಿರುವ ಅನುಭವಗಳನ್ನೊಳಗೊಂಡ ವಿವರವಾದ ನಿವೇದನಾಪತ್ರವನ್ನು ಸಲ್ಲಿಸಬೇಕಾಗಿ ಕೋರಿದೆ. ಸೇರುವ ಕಾರ್ಯಕರ್ತರಿಗೆ ಆಶ್ರಮದಲ್ಲಿ ಉಚಿತ ಊಟ-ವಸತಿಯ ಸೌಕರ್ಯವನ್ನು ಮಾತ್ರ ಏರ್ಪಡಿಸಿಕೊಡಲಾಗುವುದಲ್ಲದೆ ಬೇರೆ ಯಾವ ಪ್ರತಿಫಲವನ್ನೂ ಕೊಡಲಾಗುವುದಿಲ್ಲ. ಸಂಸಾರದ ಪೋಷಣೆಯ ಹೊಣೆಗಾರಿಕೆ ಇರುವ ಸೇವಾಕರ್ತರಿಗಿಲ್ಲಿ ಅವಕಾಶವಿಲ್ಲ. ಉತ್ತರಕ್ಕಾಗಿ ಅರ್ಜಿಗಳೊಡನೆ ಅಂಚೆಚೀಟಿಯನ್ನು ಕಳುಹಿಸಬೇಕಾಗಿ ಕೋರಿದೆ.

**ಸಂಚಾಲಕ,**
**ಅನಾಥ ಸೇವಾಶ್ರಮ,**
ಮಲ್ಲಾಡಿಹಳ್ಳಿ ಪೋಸ್ಟ್,
ಹೊಳಲ್ಕೆರೆ ತಾಲ್ಲೂಕು.

